## ಜನತಾಜನಾರ್ದನನ ಸೇವೆಯಲ್ಲಿ.......

ಜನತಾಜನಾರ್ದನನ ಸೇವೆಯಲ್ಲಿ ಹನ್ನೊಂದು ವರ್ಷಗಳನ್ನು ಕಳೆದು ಹನ್ನೆರಡನೆಯ ಹೊಸ ವರುಷದಲ್ಲಿ ಇದೀಗ ಕಾಲಿರಿಸಿದ **ಶ್ರೀನಿವಾಸ ಪಿಕ್ಚರ್ಸ** ಸಂಸ್ಥೆಯು ತನ್ನ ಗ್ರಾಹಕರಾದ ಕರ್ನಾಟಕದ ಲಕ್ಷಾಂತರ ಚಿತ್ರಪ್ರೇಮಿಗಳಿಗೆ ಅವರ ಉದಾರ ಆಶ್ರಯಕ್ಕಾಗಿ ಕೃತಜ್ಞತೆಯನ್ನು ಸಮರ್ಪಿಸುತ್ತದೆ. ಹಾಗೂ ಒಳ್ಳೆಯ ಮನರಂಜನೆಯನ್ನು ಜನತೆಗೆ ಒದಗಿಸುವ ತನ್ನ ಗುರಿಯನ್ನು ಮುಂದುವರೆಸುವುದಾಗಿ ಈ ಸಂಸ್ಥೆಯು ಭರವಸೆಯನ್ನು ಕೊಡುತ್ತದೆ. . . . . . .

**ಈ ದೀಪಾವಳಿಯು ಎಲ್ಲರಿಗೂ ಮಂಗಲಮಯವಾಗಲಿ**



## ಹೊಸ ವರುಷಕ್ಕೆ ನಮ್ಮ ಹೊಸ ಕಾಣಿಕೆಗಳು

ವಿಠ್ಠಲ ಪ್ರೊಡಕ್ಶನ್ಸರವರ

### ಕನ್ಯಾದಾನ [ಕನ್ನಡ]

ಭೂಮಿಕೆ:—
ಇಂದುಶೇಖರ, ಹರಿಣಿ, ರೇವತಿ, ಬಾಲಕೃಷ್ಣನ್, ರಮಾದೇವಿ ಇತ್ಯಾದಿ
ನಿರ್ದೇಶನ:— ಬಿ. ವಿ. ಆಚಾರ್ಯ

ಮಹಾತ್ಮಾ ಪಿಕ್ಚರ್ಸರವರ

### ಗಂಧರ್ವ ಕನ್ಯಾ [ಕನ್ನಡ]

ಭೂಮಿಕೆ:—
ರೇವತಿ, ಹರಿಣಿ, ಇಂದುಶೇಖರ, ಮಹಾಬಲರಾವ ಇತ್ಯಾದಿ
ನಿರ್ದೇಶನ:— ಡಿ. ಶಂಕರಸಿಂಗ

## ಶ್ರೀನಿವಾಸ ಪಿಕ್ಚರ್ಸ, ಗದಗ.

## ಚಲನಚಿತ್ರ ಪ್ರೇಮಿಗಳಿಗೆ ಸಂತೋಷವನ್ನು ತರುವ ಸುದ್ದಿ !

ಕರ್ನಾಟಕದ ಪ್ರಮುಖ ಕೇಂದ್ರಗಳಲ್ಲಿ ಶೀಘ್ರದಲ್ಲಿ ಈ ಕೆಳಗಿನ ಸರ್ವಾಂಗಸುಂದರ ಚಿತ್ರವು ಪ್ರದರ್ಶಿತವಾಗಲಿದೆಯೆಂದು ತಿಳಿಸಲು ನಮಗೆ ಸಂತೋಷವಾಗುತ್ತದೆ.

ಅಶೋಕಕುಮಾರ ಪ್ರೊಡಕ್ಶನ್‌ದವರ ಹಿಂದೀ ಚಿತ್ರ

### ಸಮಾಜ

ಭೂ: ಅಶೋಕ ಕುಮಾರ, ಉಷಾ ಕಿರಣ, ಶಶಿಕಲಾ, ಆಗಾ ಮತ್ತು ಅನೂಪ ಕುಮಾರ



ತನ್ನ ಹೊಸ ಚಿತ್ರದ ಬಗ್ಗೆ ನಿಮ್ಮ ಮೆಚ್ಚಿಗೆಯ ನಟ ಅಶೋಕಕುಮಾರ ಹೀಗೆ ಹೇಳುತ್ತಾನೆ—

**ಎಲ್ಲ ಜನಗಳಿಗೆ ಮನರಂಜನೆಯನ್ನು ಒದಗಿಸುವದೇ ಚಲನಚಿತ್ರದ ಸಾಮಾನ್ಯ ಗುರಿಯಾಗಿದೆ.**

**ಪ್ರಥಮ ತಯಾರಿಕೆಯಾದ "ಪರಿಣೀತಾ"ದಲ್ಲಿ ನಾನು ಮೇಲಿನ ಗುರಿಯನ್ನು ಸಾಧಿಸಲು ಪ್ರಯತ್ನಿಸಿದೆ. ಅದರ ಫಲವಾಗಿ ಚಿತ್ರವು ಎಲ್ಲರಿಂದ ಮೆಚ್ಚುಗೆಯನ್ನು ಪಡೆದಿದೆ.**

**ಮನರಂಜನೆಯು ಒಳ್ಳೆಯ ಅಭಿರುಚಿಯನ್ನು ಒಳಗೊಂಡಿರಬೇಕು. ನನ್ನ ೨ನೆಯ ಕೃತಿಯಾದ "ಸಮಾಜ"ವು ಅದರಬಗ್ಗೆ ಇರಿಸಿದ ನಿರೀಕ್ಷೆಗಳನ್ನು ಪೂರ್ತಿಗೊಳಿಸುವದಲ್ಲದೇ ಯಶಸ್ವಿ ಚಿತ್ರವೆನಿಸಿಕೊಳ್ಳುವದೆಂದು ನನಗೆ ಭರವಸೆಯಿದೆ.**

ಇಷ್ಟರಲ್ಲಿಯೇ ಅದು ಪ್ರದರ್ಶಿತವಾಗಲಿದೆ. . . . . .

Sd/- **Ashok Kumar**

ವಿವರಗಳಿಗಾಗಿ :

## ರೇಣುಕಾ ಚಿತ್ರ ಲಿಮಿಟೆಡ್,

ಧಾರವಾಡ

# ಪರಿವಿಡಿ

# INDEX TO ADVERTISERS

ಕೊನೆಯ ಹನಿಯ ತನಕ
ಸತತವಾಗಿ ಹರಿಯುವ




**ಕ್ಯಾಮ್ಲಿ-ಸೋಲ್**
ಮಾಡುವ ರೀತಿಯ ಮೂಲಕ
ಮಸಿಯು ರಾಡಿಯಾಗಿ ಅಟಕದೆ ಪೆನ್ನಿನಲ್ಲಿ ತಿಳಿಯಾಗಿ ಹರಿಯುವದು ಮತ್ತು ಕಾಗದದ ಮೇಲೆ ಬೇಗನೆ ಒಣಗುವದು.

**

# ಕೆಮಲ್ ಇಂಕ್

ಕ್ಯಾಮ್ಲಿನ್ ಲಿಮಿಟೆಡ್,
ಮುಂಬಯಿ ೧೬

---

ಕುಮಾರವ್ಯಾಸ ಭಾರತದ ತಿರುಳು ತಿಳಿಯ ಬೇಕಾದರೆ

# ಭಾರತ-ಸಾರೋದ್ಧಾರ

ವನ್ನು ಓದಿರಿ !

ಕಳೆದ ನಲವತ್ತು ವರ್ಷಗಳಿಂದ ಕುಮಾರವ್ಯಾಸ ಭಾರತದ ಪ್ರವಚನ ಮಾಡುತಿರುವ ಗಮಕ ವಿದ್ವಾನ್

**ಶ್ರೀ. ಸಂ. ಗೋ. ಬಿಂದೂರಾವ**
( ಭಾರತ )

ಇವರು ಸಂಪಾದನ ಮಾಡಿರುವರು.
ಪುಟಗಳು ೫೦೦
ಸುಂದರ ಮುದ್ರಣ !
ಅಪೂರ್ವ ತ್ರಿವರ್ಣ ಚಿತ್ರಗಳು ! !
ಬೆಲೆ— ೫ ರೂ. ಮಾತ್ರ, ಅಂಚೆ ವೆಚ್ಚ ೧ ರೂ.
**ಸಂಯುಕ್ತ ಕರ್ನಾಟಕ ಹುಬ್ಬಳ್ಳಿ**

---

ಎಲ್ಲ ತರಹದ ನೋವುಗಳಿಗೆ
ಒಳ್ಳೇ ಪರಿಣಾಮಕಾರಕ ಉಪಾಯ

ತಲೆನೋವು
ಹೊಟ್ಟೆನೋವು
ಸಂಧಿವಾತ
ಚಳಿ
ನೆಗಡಿ

# ಡಾಯಮಂಡ ಕ್ಯುಅರ

ತಯಾರಕರು
ಮೆಸರ್ಸ
**ದಿ ಸದರ್ನ ಕೆಮಿಕಲ್ ವರ್ಕ್ಸ**
ಶನಿವಾರಪೇಟ, ಮಿರಜ.




---

ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ !

# ಸಾಂಬ್ರಾಣಿ

## ಫುಟ್‌ವೇರ ಮಾರ್ಟ

ಧಾರವಾಡ
ಶಾಖಾ:—ಕೊಪ್ಪೀಕರ ರೋಡ
ಹುಬ್ಬಳ್ಳಿ

**Sambrani**
FOOT WEAR

ನಮ್ಮಲ್ಲಿ ಆಧುನಿಕ ಯಂತ್ರೋಪಕರಣಗಳಲ್ಲಿ ನುರಿತ ಕೆಲಸಗಾರರಿಂದ ತಯಾರಿಸಿದ ಜನ ಮೆಚ್ಚುಗೆ ಪಡೆದ ಚಪ್ಪಲ, ಸ್ಯಾಂಡಲ್ಸ ಬೂಟ, ಸ್ಲೀಪರ ಇತ್ಯಾದಿ ದೊರೆಯುತ್ತವೆ.

ಹುಬ್ಬಳ್ಳಿಯ ಜನತೆಗೆ ಅನುಕೂಲವಾಗುವಂತೆ ಹುಬ್ಬಳ್ಳಿಯಲ್ಲಿ ಶಾಖಾ ಪ್ರಾರಂಭಿಸಿದ್ದೇವೆ.

ವ್ಯಾಪಾರಸ್ಥರು ನಮ್ಮ ಕ್ಯಾಟಲಾಗ ಹಾಗೂ ದರಗಳ ಬಗ್ಗೆ ವಿಚಾರಿಸಿರಿ !

# ಪರ್ಕಿನ್ಸ ಇಂಜಿನ್‌ಗಳ ಬೆಲೆಗಳು ಇಳಿದವು!

ದೀಪಾವಳಿಯ ಶುಭ ಮುಹೂರ್ತದಲ್ಲಿ ಪರ್ಕಿನ್ಸ ಡೀಜೆಲ್ ಇಂಜಿನಗಳ ಬೆಲೆಗಳನ್ನು ಇಳಿಸಿದ್ದನ್ನು ತಿಳಿಸಲು ನಾವು ತುಂಬಾ ಸಂತೋಷಿಸುತ್ತೇವೆ. ನಿಮ್ಮ ಹತ್ತರ ಯಾವದೇ ಮೋಟಾರ ಇರಲಿ- ಫೋರ್ಡ, ಶೆವ್ಹರ್ಲೆಟ್, ಡಾಜ್ಜ, ಡಿಸೋಟೊ, ಫಾರ್ಗೊ, ಇಂಟರ ನ್ಯಾಶನಲ್, ಬೆಡ್‌ಫೋರ್ಡ, ಮೋರಿಸ್, ಸ್ಟುಡ್‌ಬೇಕರ ಮುಂತಾದ್ದಕ್ಕೆ (Conversion) ರೂಪಾಂತರ! ಪರ್ಕಿನ್ಸ ಡಿಜೇಲ ಎಂಜಿನ್ ಈಗಿನ ಜಗತ್ತಿನ ಪರಿಸ್ಥಿತಿಯಲ್ಲಿ ಅತ್ಯಂತ ಮಿತವ್ಯಯದ್ದಾಗಿದೆ. ಭವ್ಯ ತಯಾರಿ ಸಂಗ್ರಹ ಇದೆ. ತಜ್ಞ ಮೆಕ್ಯಾನಿಕ್‌ರಿಂದ ಕನ್‌ವ್ಹರ್ಶನ್ ಕೈಕೊಳ್ಳಲಾಗುವದು.

"ಹೊಸ ಸ್ಟುಡಬೇಕರ ಚ್ಯಾಂಪಿಯನ್"

ಇದೀಗ ತಲುಪಿದೆ

(ಜಗತ್ತಿನಲ್ಲಿಯೇ ಶ್ರೇಷ್ಠವಾದ ಮೋಟಾರ)

## ಹಿಂದುಸ್ತಾನ ೧೪

ಬೆಲೆ ಕೇವಲ ರೂ. ೧೦೬೫೦ (ಸೇಲ್ಸ ಟ್ಯಾಕ್ಸ ಸಹ)

ರ್‍ಯಾಲೆ, ರಾಜ್, ಹಂಬರ್, ರಾಬಿನ್‌ಹುಡ್ ಮತ್ತು ಹರ್ಕ್ಯುಲಸ್ ಸಾಯಕಲ್‌ಗಳ ಹಾಗು ಭಾಗಗಳ ಪ್ರಚಂಡ ಸಂಗ್ರಹ!

ಇಷ್ಟೇ ಅಲ್ಲದೆ

- ★ ಎನ್.ಬಿ.ಸಿ., ಹಾಫಮನ್, ಟಿಮಾಕಿನ್ ಹಾಗು ಎಸ್.ಕೆ.ಎಫ್. ಬಾಲ್‌ರೋಲರ ಮತ್ತು ಬೋರಿಂಗಗಳು
- ★ ಫಾಯರಸ್ಟೋನ, ಡನ್‌ಲಪ್, ಇಂಡಿಯಾ ಸುಪರ ಮತ್ತು ಗುಡ್‌ಇಯರ ಟಾಯರ ಟ್ಯೂಬುಗಳು
- ★ ಲ್ಯೂಕಸ್, ಸಿ.ಎ.ವ್ಹಿ. ಹಾಗೂ ಇಲೆಕ್ಟ್ರಿಕಲ್ ಮತ್ತು ಫ್ಯುಎಲ್ ಇಂಜಕ್ಶನ್ ಎಕ್ವಿಪ್‌ಮೆಂಟ
- ★ ಬರ್ಮಾಶೆಲ್ ಪೆಟ್ರೋಲ, ಡಿಝೆಲ್, ಪಾವರಿನ್ ಹಾಗು ಲುಬ್ರಿಕೇಟಿಂಗ ಆಯಿಲ್‌ಗಳು
- ★ ಮೊರಿಸ್, ಹಿಂದುಸ್ಥಾನ, ಸ್ಟುಡಬೇಕರ ಮತ್ತು ಪರ್ಕಿನ್ಸ ನೈಜಭಾಗಗಳು
- ★ ಸುಪೀರಿಯರ ಸ್ಪ್ರಿಂಗ್‌ಗಳು ಮತ್ತು ಲೀವ್ಜಗಳು
- ★ ವ್ಹೋಕ್ಸ ಆಯಿಲ್ ಫಿಲ್ಟರಗಳು ಮತ್ತು ಉಪಕರಣಗಳು
- ★ ಫೆರೊಡೊ ಬ್ರೆಕ್ ಮತ್ತು ಕ್ಲಚ್ ಲಾಯನರಗಳು
- ★ ಎಕ್ಸಾಯಿಡ ಮತ್ತು ಲ್ಯುಕಸ್ ಬ್ಯಾಟರಿಗಳು
- ★ ಕಿರ್ಲೋಸ್ಕರ ಇಲೆಕ್ಟ್ರಿಕ್ ಮೋಟಾರಗಳು
- ★ ಡಬಲ್ ಲಾಯಿಫ ಸ್ಪ್ರಿಂಗ ಬ್ರ್ಯಾಕೆಟಗಳು

(ಎಲ್ಲ ಮೇಕಗಳ ಮೋಟಾರಗಳ ಬಗ್ಗೆ)

ಅತ್ಯಾಧುನಿಕ ಮಶಿನರಿಗಳಿಂದ ಸುಸಜ್ಜಿತವಿದ್ದ ವರ್ಕಶಾಪಿನಲ್ಲಿ ಸ್ವಂತ ತಜ್ಞ ಮೆಕಾನಿಕ್‌ರಿಂದ ನಿರ್ದೋಷ ರಿಪೇರಿಗಳು

## ಮೆಸರ್ಸ ಘಾಟಗೆ ಮತ್ತು ಪಾಟೀಲ

ರಾಜಾರಾಮರೋಡ . . . . . ಕೊಲ್ಹಾಪೂರ

[ಕೊಲ್ಹಾಪೂರ, ರತ್ನಾಗಿರಿ, ಬೆಳಗಾವಿ, ದ. ಸಾತಾರಾ, ಧಾರವಾಡ, ವಿಜಾಪೂರ ಹಾಗು ಕಾರವಾರ ಜಿಲ್ಹೆಗಳ ಸಲುವಾಗಿ]



ಶ್ರೀ ಬದರೀನಾಥನ ಮಹಾದ್ವಾರದ ದೃಶ್ಯ



ಸಂಸ್ಥಾಪಕರು : ರಂ. ರಾ. ದಿವಾಕರ :: ದೀಪಾವಳಿ ಸಂಚಿಕೆ ೧೯೫೪ :: ಸಂಪಾದಕರು : ಹ. ರಾ. ಪುರೋಹಿತ

# ನಮ್ಮ ನುಡಿ

ಇದು ನಮ್ಮ ಏಳನೇ ದೀಪಾವಳಿ ಸಂಚಿಕೆ. ಜಯ ಸಂವತ್ಸರದ ದೀಪಾವಳಿಗಾಗಿ ಮನಸಿಗೆ ರಸದೂಟವನ್ನು ಓದುಗರಿಗೆ ಒದಗಿಸುತ್ತಿದ್ದೇವೆ. ಎಂದಿನಂತೆ ಆಯ್ದ ಲೇಖಕರಿಂದ ಆಯ್ದ ವಿಷಯಗಳ ಮೇಲೆ ಲೇಖಗಳನ್ನು ಕೊಟ್ಟಿದ್ದೇವೆ. ಈ ಸಲ ನಮ್ಮ ಜೀವನಕ್ಕೆ ಹತ್ತಿರವಾದ ಪ್ರಶ್ನೆಗಳ ಬಗ್ಗೆ ಹಲ ಬರಹಗಳು ಇಲ್ಲಿ ಕಾಣಿಸುವವು. ಜಾಗತಿಕ ಕಥಾಸ್ಪರ್ಧೆಯ ಅಂಗವಾಗಿ ನಡೆದ ಅಖಿಲ ಭಾರತ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ ಕತೆಯು ಈ ಸಂಚಿಕೆಯ ಒಂದು ವೈಶಿಷ್ಟ್ಯ. ಲೇಖಗಳನ್ನು ಸಚಿತ್ರಗೊಳಿಸಿದ್ದಲ್ಲದೆ ಹಲವಾರು ವ್ಯಂಗ್ಯ ಚಿತ್ರಗಳನ್ನೂ ಕೊಟ್ಟು ದೀಪಾವಳಿಗೆ ನಗುವಿನ ಪಕ್ವಾನ್ನಗಳನ್ನು ಒದಗಿಸಿದ್ದು ಇನ್ನೊಂದು ವಿಶೇಷ. ತ್ರಿವರ್ಣ ಮುಖಚಿತ್ರವಲ್ಲದೆ ಒಳಗೂ ಒಂದು ತ್ರಿವರ್ಣ ಚಿತ್ರ ಕೊಡಲಾಗಿದೆ. ಸಂಚಿಕೆಯನ್ನು ಓದುಗರು ಮೆಚ್ಚಿದರೆ ನಮ್ಮ ಶ್ರಮ ಸಾರ್ಥಕ.

* * *

ಜಯ ಸಂವತ್ಸರದ ದೀಪಾವಳಿಯನ್ನು ನಾವು ಹೆಚ್ಚು ಉತ್ಸಾಹದಿಂದ ಆಚರಿಸಲು ಕಾರಣಗಳಿವೆ. ನೆರೆಹಾವಳಿಯ ಒಂದು ದುರದೃಷ್ಟ ಹೊರತು, ವಿಜಯ-ಜಯಗಳು ನಮಗೆ ತುಂಬ ಸುಖವನ್ನೇ ತಂದಿವೆ. ಪಂಚವಾರ್ಷಿಕ ಯೋಜನೆಯು ಬಹುಭಾಗದಲ್ಲಿ ತನ್ನ ಗುರಿಯನ್ನು ಸಾಧಿಸುವದೆಂದು ಈಗ ಖಂಡಿತವಾಗಿದೆ. ಅಲ್ಲದೆ ದ್ವಿತೀಯ ಪಂಚವಾರ್ಷಿಕ ಯೋಜನೆಯ ಪೀಠಿಕೆ ತಯಾರಿಸುವ ಕಾರ್ಯ ಭರದಿಂದ ಸಾಗಿದೆ. ಆಹಾರ ರಂಗದ ಯಶವು ಇದೀಗ ಹನ್ನೊಂದು ವರ್ಷಗಳ ನಂತರ ಮೊದಲನೇ ಬಾರಿ ಸೀದಾ ನಿರ್ಬಂಧಮುಕ್ತ ದೀಪಾವಳಿಯನ್ನಾಚರಿಸಲು ಅವಕಾಶವೊದಗಿಸಿದೆ. ಅತಿ ಪ್ರಸರಣದ ಅನಿಷ್ಟ ಕೊನೆಗೊಂಡ ನಿಶ್ಚಿತ ಚಿಹ್ನಗಳು ಕಾಣಿಸಿವೆ. ಈಗ ವ್ಯಾಪಾರಿ ಮುಗ್ಗಟ್ಟು ಮತ್ತು ನಿರುದ್ಯೋಗದ ವಿರುದ್ಧ ಹೋರಾಟಕ್ಕೆ ನಾವು ಟೊಂಕ ಕಟ್ಟಬೇಕಾಗಿದೆ. ಪ್ರಧಾನಮಂತ್ರಿ ನೆಹರು ಅವರು “ ನೆಹರು ನಂತರ ಯಾರು ’’ ಎಂಬ ಪ್ರಶ್ನೆಯನ್ನೆತ್ತಿ, ತಾವು ತಾತ್ಕಾಲಿಕವಾಗಿಯಾದರೂ ಮುಂದಾಳ್ತನದಿಂದ ನಿವೃತ್ತರಾಗುವ ಅಪೇಕ್ಷೆ ವ್ಯಕ್ತಪಡಿಸಿದ್ದಾರೆ. ಅವರ ಮಾರ್ಗದರ್ಶನ ನಮಗಿನ್ನೂ ಹಲಗಾಲ ಅಗತ್ಯವಿದೆ. ಆದರೆ ಇತರರನ್ನು ಹೊಣೆಗಾರಿಕೆಗೆ ತರಬೇತುಗೊಳಿಸಬೇಕೆಂಬ ಅವರ ಅಪೇಕ್ಷೆ ದೇಶದ ಭವಿತವ್ಯದ ದೃಷ್ಟಿಯಿಂದ ತುಂಬ ಸಮುಂಜಸವಾದದ್ದು.

* * *

ಭಾರತದ ವಿದೇಶ ನೀತಿಯು ಕೊರಿಯದ ನಂತರ ಇಂಡೋಚೀನದಲ್ಲಿ ಎಂಟು ವರ್ಷದ ನಿರರ್ಥಕ ಸಾಮ್ರಾಜ್ಯವಾದಿ ಯುದ್ಧವೊಂದನ್ನು ನಿಲ್ಲಿಸುವುದಕ್ಕೆ ನಿಮಿತ್ತವಾಯಿತು. ಅಲ್ಲಿನ ಯುದ್ಧ ವಿರಾಮದಲ್ಲ ನಾವು ನಮ್ಮ ಪಾಲಿನ ಹೊಣೆ ಹೊತ್ತು ನಮ್ಮದು ಬರಿ ಪರೋಪದೇಶ ಪಾಂಡಿತ್ಯವಲ್ಲೆಂದು ತೋರಿಸಿದ್ದೇವೆ.

ನಮ್ಮ ವಿದೇಶ ನೀತಿಯು ಏಶಿಯದ ರಾಷ್ಟ್ರಗಳಲ್ಲಿ ಪರಸ್ಪರ ಐಕ್ಯ ಭಾವನೆ ಹೆಚ್ಚುವದಕ್ಕೆ ಕಾರಣವಾಗಿದೆ. ಪ್ರಧಾನ ಮಂತ್ರಿಗಳು ಕೈಕೊಂಡಿರುವ ಚೀನ ಪ್ರವಾಸವು ಏಶಿಯದ ಐಕ್ಯವನ್ನು ಇನ್ನಷ್ಟು ಬಲಗೊಳಿಸಿದೆ.

ಗೋವೆಯ ನಮ್ಮ ದೇಶಬಾಂಧವರು ಸ್ವಾತಂತ್ರ್ಯಾಂದೋಲನ ಹೂಡಿದ್ದಾರೆ. ನಮ್ಮೆಲ್ಲರ ಹೃದಯ ಅವರ ಬೆಂಬಲಕ್ಕಿದೆ. ನಮಗೆ ದೊರೆತ ಸ್ವಾತಂತ್ರ್ಯ ಅವರ ಪಾಲಿಗೂ ಬಂದಲ್ಲದೆ ನಮ್ಮ ಸ್ವಾತಂತ್ರ್ಯ ಅಪೂರ್ಣವೇ. ಗೋವೆಯ ಪರಿಸ್ಥಿತಿ ಭಾರತಕ್ಕೆ ಅಸಹನೀಯವಾಗುವ ಮೊದಲೇ ಪೋರ್ತುಗಾಲಕ್ಕೆ ಬುದ್ಧಿ ಬರುವದೆಂದು ಹಾರೈಸೋಣ.

* * *

ದುರ್ದೈವದಿಂದ ಭಾರತ-ಪಾಕ ಸಂಬಂಧವು ಈ ವರ್ಷ ಸುಧಾರಿಸುವ ಬದಲು ಕೆಟ್ಟಿದೆ. ಅಮೇರಿಕನ್ನರು ಪಾಕಿಸ್ತಾನಕ್ಕೆ ಕೊಡುತ್ತಿರುವ ಸೈನಿಕ ಸಹಾಯವು ಭಾರತ-ಪಾಕ ಸಂಬಂಧ ಕೆಡಿಸುವುದರಲ್ಲಿ ವಿಶೇಷಪಾತ್ರ ವಹಿಸಿದೆ. ಅಮೇರಿಕದ ಬೆಂಬಲದ ಬಲವು ಪಾಕಿಸ್ತಾನವನ್ನು ಹುರುಪಿಗೆಬ್ಬಿಸಿ ಕಾಶ್ಮೀರ ಮೊದಲಾದ ಸಮಸ್ಯೆಗಳಲ್ಲಿ ಅದರ ಹಟಮಾರಿತನವನ್ನು ಹೆಚ್ಚಿಸಿದೆ. ಭಾರತ ಸರಕಾರವು ಇದರಿಂದ ಉತ್ತೇಜಿತವಾಗಿಲ್ಲವಾದರೂ ಕಾಶ್ಮೀರದಲ್ಲಿ ತಕ್ಕ ಮುಂಜಾಗ್ರತೆ ಕೈಕೊಂಡಿರುವುದು ಸಂತೋಷ.

* * *

ಈ ಸಂಚಿಕೆಗೆ ಸಹಾಯಕರಾದವರೆಲ್ಲರಿಗೂ ಅಭಿನಂದನೆ-ವಂದನೆಗಳನ್ನು ಸಲ್ಲಿಸದೆ ಇದನ್ನು ಮುಗಿಸಲಾರೆವು. ಲೇಖ-ಕವನಗಳನ್ನೂ ಭವಿಷ್ಯವನ್ನೂ ಕಳಿಸಿದ ವಿದ್ವಾಂಸರಿಗೂ ಮುಖಚಿತ್ರ ತಯಾರಿಸಿಕೊಟ್ಟ ಮದ್ರಾಸಿನ ತರುಣ ಕನ್ನಡಿಗ ಕಲಾವಿದ ಶ್ರೀ ಪಡುಬಿದ್ರೆಯವರಿಗೂ ಬದರೀ ದೇವಾಲಯದ ತ್ರಿವರ್ಣ ಫೋಟೋ ಒದಗಿಸಿದ ಧಾರವಾಡದ ಶ್ರೀ ಧೀರೇಂದ್ರ ಕೊನೇರಿಯವರಿಗೂ ಹಲವು ವ್ಯಂಗ್ಯ ಚಿತ್ರಗಳನ್ನು ಬರೆದು ಕೊಟ್ಟ ಶ್ರೀ ಪ್ಯಾಟ ಹಾಗು ಸದಾಶಿವ ಬಾಂದವಡೇಕರ ಇವರಿಗೂ ನಮ್ಮ ಅಭಿವಂದನೆಗಳು ಸಲ್ಲಬೇಕು. ಪಡಿಯಚ್ಚುಗಳನ್ನು ತಯಾರಿಸಿದ ಮದ್ರಾಸಿನ ಅಪ್ಪಾಸಾಮಿ ಮತ್ತು ಕಂಪನಿ, ಹುಬ್ಬಳ್ಳಿಯ ಐಡಿಯಲ್ ಫೋಟೋ ಜಿಂಕೋ, ಧಾರವಾಡದ ಶ್ರೀನಿವಾಸ ಕಂಪನಿಯವರಿಗೆ ಧನ್ಯವಾದಗಳು. ಅನಿವಾರ್ಯವಾಗಿ ಕೆಲ ಲೇಖಗಳು ಈ ಬಾರಿಯೂ ಉಳಿದುದಕ್ಕೆ ಆಯಾ ಲೇಖಕರ ಕ್ಷಮೆ ಕೋರುವೆವು. ಜಾಹಿರಾತುಗಳನ್ನು ಕೊಟ್ಟ ಮಹನೀಯರೂ ನಮ್ಮ ಕೃತಜ್ಞತೆಗೆ ಪಾತ್ರರು. ಈ ಸಂಚಿಕೆಯನ್ನು ಸುಂದರವಾಗಿ ಮಾಡಲು ನೆರವಾದ ನಮ್ಮ ಸಹಕಾರಿಗಳಿಗೆ, ಮುದ್ರಣ ಹಾಗು ಇತರ ವಿಭಾಗಗಳ ಕೆಲಸಗಾರರಿಗೆ ನಮ್ಮ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುವೆವು.

* * *

**ದೀಪಾವಳಿ ಸರ್ವರಿಗೂ ಮಂಗಲದಾಯಕವಾಗಲಿ!**

# ಪಣತಿ

ನೂರು ಹೃದಯದ ಮೇರು-ಭಾವಗಳ ನೂರಾರು ಸಾಲುದೀಪ
ಹೊತ್ತಿ ಉರಿದಿವೆ ಸುತ್ತು ಕತ್ತಲೆಯ ಕೂಸದಲಿ—
ಒಂದು ಚಣ ಬೆಳಕು ನಗೆ ನಲಿವು ಸಲ್ಲಾಪ;
ಮರುಗಳಿಗೆ 'ಆ' ಎಂದು ಅಂಧಕಾಸುರ ಬಂದು
ಕೊಳ್ಳಿಹೊಡೆಯಲು ಕೇಳಿಬರುವುದೊಂದೇ ಸೊಲ್ಲು
ಅಣುಕಣದ ವಿಪ್ರಲಾಪ!
ಸುತ್ತು ಕಂದಕ ತೋಡಿ ಮುಳ್ಳುತಂತಿಯ ಬಿಗಿದು
ಭದ್ರವಾಗಿಯೆ ಕಾವಲಿಟ್ಟರೂ ಬಿಟ್ಟರೂ
ನುಗ್ಗಿ ಬಂದೇ ಬಿಡುವನಲ್ಲ ಈ ಭೂಸ!

ಬಿಳಿಯ ಗೋಡೆಯ ಮೇಲೆ ನೆರಳು ಬಂದಾಡುವವು
ಕುಣಿಸುವನು ಕಿಳ್ಳಿಕೇತ:
ನೆತ್ತಿಯಲಿ ಸುರುಳಿ ಸುತ್ತಿ ಮಲಗಿದೆ ಮೆದುಳು. . .ಬಡಪಾಯಿ
ಚಿತ್ರವೆತ್ತೋ. . .ಅದರ ಧ್ಯಾನವೆತ್ತೋ. . . !
ಕೆಸರು ಮೆತ್ತಿದ ಕಾಲನೆತ್ತೆತ್ತಿ ಇಡುತಿಹುದು ಗಾಣದೆತ್ತು.
ಹಾಳುಗೋಡೆಯ ಬದಿಗೆ ಕಾಲುಜೋಡಿಸಿ ನಿಂತು
ಇಹಪರದ ದೀರ್ಘ ಆಲೋಚನೆಗೆ ತೊಡಗಿಹುದು
ಯುಗಯುಗದ ದೈನ್ಯವಾಣಿ,—
ಕಟ್ಟಿ ಕಾಲನು ಮೇಯಬಿಟ್ಟ ಪ್ರಾಣಿ.
ಕೆದರಿ ತಿಪ್ಪೆಯ ಕೋಳಿ ಹೆಕ್ಕುತಿಹುದೇನನೋ
ಬೆನ್ನಹಿಂದೆಯೆ ಕಟ್ಟಿಕೊಂಡು ತಿರುಗಿದೆ ತನ್ನ ಸರ್ವ ಬಳಗ!
ಬೆಳಗಾಗೊ ಮುನ್ನವೇ ಕೂಗುವದೆ–ಅದರ ಮನೆ ಹಾಳಾಗ–
ಇಷ್ಟು ಬೇಗ?
ಹಿಡಿದು ಒಂದೇ ಉಸಿರು ಒದರುತಿವೆ ಊರೆಲ್ಲ ಗಿರಣಿಭೋಂಗಾ.

ದಿನದ ಬೀಸುವ ಕಲ್ಲು ಗರಗರೆಂದಾಡಿಹುದು
ಬಳೆಯ ಮಂಜುಳ ರವದ ನಾದ ಹಿಡಿದು;
ಇರುಳೆಲ್ಲ ಉಂಡುರಿದು ಸಣ್ಣಗಾಗಿದೆ ಪಣತಿ
ಗುಡಿಸಲದ ಗೂಡಿನಲಿ ಜೀವಹಿಡಿದು!

೨

ಅವತಾರಗಳ ಮೇಲೆ ಅವತಾರಗಳು ಬಂದು
ಮುಂಡಿಸಿದ ಭಾವಚಿತ್ರ
ಕಟ್ಟುಹಾಕಿಸಿ ಗೋಡೆಗಿಡಿದು ಮೊಳೆಯನು ಜಡಿದು
ತೂಗಬಿಟ್ಟಿಹರಾರೊ ಬಲು ವಿಚಿತ್ರ!
ಸುತ್ತುಮುತ್ತಲು ಪೌಳಿ ನಡುವೆ ಗೋಪುರವೇರಿ
ಮೂಡಿತ್ತು ಮುದ್ದುಕಳಸ;
ಹರಗಿ ಹಸನಾದ ಹೊಲದಲ್ಲಿ ಬೆಳೆಯಿತು ರಾಶಿ ಧಾನ್ಯದವಸ.
ಪೂಜೆ ಸಂದಿತು ಮುಗ್ಧ ನೈವೇದ್ಯ ಸಂತೃಪ್ತಿ—

ಹಬ್ಬಹುಣ್ಣಿವೆಗೊಮ್ಮೆ ಹೊಮ್ಮಿದುತ್ಸಾಹದಲಿ
ಮೊಳಗಿದವು ಜೋಡು ಕಹಳೆ!
ಗಂಟೆ ಗಣಗಣ ನಾದರಿಂಗಣದಿ ನರನರವು ವಿದ್ಯುತ್ತರಂಗಮಾಲೆ!
ಬಯಕೆ ಊದಿನಕಡ್ಡಿ ಬರೆದುಹಾಕಿತು ದಿನವು ಬಿನ್ನಹದ ಓಲೆ
ಮುಟ್ಟತಿಲ್ಲವೊ, ಇನ್ನೂ ಉತ್ತರವೆ ಬರಲಿಲ್ಲ
ಏನೊ ವರ್ಗಾವರ್ಗಿ ಅಲ್ಲಿ, ಮೇಲೆ!

ನುಡಿಯಲೊಲ್ಲದು ದೇಹದೇಗುಲವ ಗಂಟೆಯಲಿ
ಮಿಡಿಯಲೊಲ್ಲದು ಮುಖ್ಯಜೀವನಾಡಿ,
ಹಿಡಿದು ಸಿಕ್ಕಾಬಟ್ಟೆ ಜಗ್ಗುತಿವೆ ನೂರಾರು ಬೇಟೆನಾಯಿ!

ಮಡಿಯುಟ್ಟ ಪೂಜಾರಿ (ನೋಡಿರವನವತಾರ!)
ಕಾಣಿಕೆಯ ಕೊಂಡ ತತ್‌ಕ್ಷಣವೇ ಕೃತಾರ್ಥ.
ಆಮೇಲೆ ಧರ್ಮಾರ್ಥ ಹಣಿಸುವನು ಒಂದೊಂದೆ ಸೌಟು ತೀರ್ಥ
(ಗಂಗೆತುಂಗೆಯು ಬ್ರಹ್ಮಪುತ್ರೆ ಕಾವೇರಿಯರು ನೆರೆಬಂದು
ಹೊರಚೆಲ್ಲುತಿಹರು ವ್ಯರ್ಥ!)
ಬಣ್ಣಬಣ್ಣದ ಬಲ್ಬು ಕಾಜಿನ ಗುಳಾಪುಗಳು ಕಾರ್ತಿಕನ ಹಚ್ಚಿದಿರುಳು
ಥಳಥಳಿಸುವೆಡು ಬಂಗಾರ ಪಾದುಕೆ ಮೇಲೆ
ಆಡುತಿವೆ ಪೂಜಾರಿ ಕೈಯ ಬೆರಳು!
ಗರ್ಭಗುಡಿಯಲಿ ಪಣತಿ ಉರಿದಿವೆ ನಿರಾತಂಕ
ಬಂದು ಬಡಿದರು ನೂರು ದೀಪದ ಹುಳು!

೩

ಚೆಂಡು ಹೂ ತುಂಬೆ ಹೂ ಹೊನ್ನವರೆ ಹುಚ್ಚೆಳ್ಳು—
ಸೆಜ್ಜೆ ಜೋಳದ ತೆನೆಗೆ ಸುಂಕವಾಡಿ
ಮಣ್ಣಕುಡಿಕೆಯನೊಡೆದು ಪುಟಿಯುತಿದೆ ಕಾರಂಜಿ
ಬಣ್ಣಬಣ್ಣದ ಬದುಕನೆಲ್ಲ ತೂರಿ!

ಗುದ್ದುತಿದೆ ಗಾಳಿಯನು ಸುಮ್ಮಸುಮ್ಮನೆ ಮದ್ದು
ಒದ್ದಾಡುತಿವೆ ಒಳಗೆ ಚಟಪಟಾಕಿ;
ಹೊತ್ತಿ ಸುರು ಸುರುಬತ್ತಿ ನಕ್ಷತ್ರ ಸೂಸುತಿವೆ
ಗೊತ್ತಿಲ್ಲವೆ, ಇಂದು ದೀಪಾವಳಿ!

ಗುರಿಯಿರದ ಸುರುಬಾಣ ಹಾರಿವೆ ಧಡಲ್‌ಬಾಜಿ
ಆಟದಾಟಂಬಾಂಬಿನಾಸ್ಫೋಟನ!
ಒಂದೊಂದಕೂ ಸ್ಪರ್ಧೆ 'ನಾಮುಂದೆ ನೀಮುಂದೆ'
ಸಾಲಬಹುದೇ ಒಂದು ಜೀವಮಾನ?

ಮುಗಿಲು ಝುಗಝುಗ ಮಿಂಚಿ ಹೊಡೆದುಕೊಂಡಿತು ಸ್ನಾಯು
(ಸಿಗಲಾರದಿನ್ನಿಂಥ ಜಗದ ಭಂಗಿ!)
ಬಿರುಗಾಳಿ ಬೀಸಿ ಮಳೆಹೊಯ್ದು ಗುಡುಗುಡಿಸಿತ್ತು
ಸಿಕ್ಕಬೇಟೆಯ ಸಿಡಿಲು ತಿಂದು ತೇಗಿ!

ಮರವುರಿದು ಬಿದ್ದು ಕಬ್ಬಿಣಕಂಬ ನೆಲಕೊರಗಿ
ಹರಿದು ವಿದ್ಯುತ್ತಂತಿ ದೀಪವಾರಿ
ಕತ್ತಲೆಯೆ ತುಂಬಿ ಕೊರಚೆಲ್ಲುವ ಗಟಾರದಲಿ
ಕೊಚ್ಚಿಹೋಯಿತು ಪಾಪ ಮುದ್ದುಕುನ್ನಿ !

*    *    *

ಕಲಿತಲಾಂತರದಿಂದ ತೈಲವೆರೆಯುತ ಬಂದು
ಸೊಡರು ಕುಡಿಯಾಡಿಸಿದೆ ವಣ್ಣಪಣತಿ,—
ನೆಲಬಾನಿಗೊಂದೆ ದೀಪಾವಳಿಯ ಸೇತುವೆಯ
ನಿಲಿಸಿ ಉದ್ಘಾಟಿಸಲಿ 'ಜ್ಯೋತಿಷಾಂ ಜ್ಯೋತಿ' !

—ಚೆನ್ನವೀರ ಕಣವಿ

# ಶರದೆ ಮತ್ತು ದೀಪಾವಳಿ

ವರುಷ ಹೋಗಿ ವರುಷ ಬಂತು
ಹರುಷವಾಗೆ ಹೊಸತು ತಂತು
ಯಾವ ಪುಣ್ಯಗೈದುದಿಳೆಯು
ಏನು ಬೆಳೆವು ನಿಂತ ಬೆಳೆಯು
ಬಾನಿನೊಳಗಿದೇನು ಸೊಬಗು
ಭಾನುಮಣಿಗಿದೇನು ಬೆಡಗು!
ಶಶಿಯು ಬರುವನೆಂದು ಶರದೆ
ನಾಚಿ, ಬಾನ ಬಾಗಿಲಲ್ಲಿ
ಸಂಜೆನೆಣ್ಣ ಕಾವಲಿರಿಸಿ
ಬಾಳಿನಾಳ ತಿಳಿಯ ದಿರುವ
ಮನೆಗೆ ಬಂದ ಮೊದಲಗಿತ್ತಿ
ಬೆದರಿ ನಾಚಿ ಮೌನ ತಾಳಿ
ಎದೆಯ ಬಯಕೆ ಅದುಮುವಂತೆ—
– ಶರದೆ ಬಾನ ಬಾಳ ನಡುವೆ
ನಿಲಲು ಮುಗ್ಧ ಭಾವ ತಳೆದು !
" ಬಂದೆ – ಬಂದೆನಿಗೋ, ಬಂದೆ –
ಜಗವ ಸುತ್ತಿ ಸುತ್ತಿ ದಣಿದು;
ಎನ್ನ ಇರುಳ ಬಾಳ ರಾಣಿ,
ಋತುಗಳರಸಿ ಹೃದಯದರಸಿ,
ಕತ್ತನೆತ್ತು ಮುತ್ತನಿಡುವೆ "
ಎಂದು, ಇಂದು ಕರವ ಚಾಚೆ;
" ಯಾರು? " ಎನ್ನುತೋಡೆ ಸಂಜೆ !
ಬುವಿಗೆ ಜ್ಯೋತ್ಸ್ನೆ ನಗೆಯ ಬೀರೆ

ಚಂದ್ರಬಿಂಬ ಬಾನನೇರೆ
ಬಿಳಿಯ ಮುಗಿಲ ಪಾಲುಗಡಲ
ತೆರೆಯ ನಡುವೆ ಕೇಳಿಯಾಡೆ
ಮೆಲ್ಲಮೆಲ್ಲಗುರುಳಿ ಸುಳಿವ
ಮಂದ ಮರುತ ಆಟವಾಡೆ
ಶರದದಿರುಳು ಅಂದವಾಗೆ.

*    *    *

ಹೀಗೆ ಪಕ್ಷನೆರಡು ಉರುಳೆ
ಎಲ್ಲಿ ನೋಡಿದಲ್ಲಿ ದೀಪ !
ಓಡಿ ಹೋಯಿತಿಂದ್ರಚಾಪ !
ಎಲ್ಲ ಮನೆಯ ಹೊಸಿಲು ದೀಪ
ಸಾಲುಗಟ್ಟಿ ನಿಲುವ ಕಾಪ
ನರಕನಳಿದ ದಿನದ ನೆನಪ
ದಿವಿಜಪತಿಯ ಮನದ ಸೈಪ.
ಇಂದ್ರನುಳುಹು ಹರಿಗೆ ತೋರೆ
ವಾಮನಾವತಾರ ತಾಳೆ
ಬಲಿ – ಉದಾರಿ ಕೆಳಗೆ ತುಳಿಯೆ
ನರಕನಳುಕ ಬಲಿಯ ಭಾರ
ಬಾನು – ಬುವಿಗು ಹಗುರವಾಗೆ
ಹಣತೆ ದೀಪ ಹಬ್ಬವಾಗೆ
ಎಲ್ಲ ದೇವ ದೇಗುಲಲ್ಲಿ
ವೇದ ಮಂತ್ರ ಘೋಷವಾಗೆ

ಜನದ ಮನಕೆ ಹರುಷವಾಗೆ
ಹೊಸತನುಟ್ಟು ಹೊಸದು ತೊಟ್ಟು
ಸಿಹಿಯನುಂಡು ಜನದ ಹಿಂಡು
ಅಲೆಯುತಿರುವ ತೆರನ ಕಂಡು
ಹಳತನುಟ್ಟು ಮರುಕಪಟ್ಟು
ಕವಿಯ ಮನದಿ ಉಕ್ಕಿ ಉಕ್ಕಿ
ಹರಿದು ಬರುವ ಭಾವ ಥಟ್ಟು.
ತಡೆವರಿಲ್ಲ ಕೇಳ್ವರಿಲ್ಲ
ಅಳೆವರಿಲ್ಲ ಅರಿವರಿಲ್ಲ
" ಆಹಹ, ಹಬ್ಬ ! ಎಂದರಲ್ಲ ! "
ಎಂಬ ಉಬ್ಬು ಅವಗೆ ಇಲ್ಲ.
ಸೊಡರಿನೆಣ್ಣೆ ತೀರಿತಲ್ಲ ?
ಹಣತೆ ದೀಪ ಆರಿತಲ್ಲ ?
ಇದರ ಗುಟ್ಟು ಯಾವ ಬಲ್ಲ ?
" ಮನದ ಹಣತೆಯಾಳದಲ್ಲಿ
ಸಮತೆ ಎಂಬ ಬತ್ತಿ ಹೊಸೆಯೆ
ಮಮತೆ ಎಂಬ ಎಣ್ಣೆ ಸುರಿಯೆ
ಅರಿವು ಎಂಬ ದೀಪ ಬೆಳಗೆ
ಹೊರಗು ಒಳಗು ಹಬ್ಬವಾಗೆ "
ಜನದ ಅಂತರಾಳದಲ್ಲಿ
ಬೆಳೆದು ಬೆಳೆದು ಬೆಳಗಿ ಬರಲಿ;
ದೇವನೊಲುಮೆ ಜಗಕೆ ಇರಲಿ.

—ರಾಘವೇಂದ್ರ

# ಶ್ರೀಭಗವದ್ಗೀತೆಯಲ್ಲಿಯ

# ಶ್ರೀಕೃಷ್ಣ

**ಗೀತೆಯಲ್ಲಿ ಶ್ರೀಕೃಷ್ಣ ಮೂಬಗೆಯಾಗಿರುವನು. ಪಾರ್ಥಸಾರಥಿ ಕೃಷ್ಣ, ಅರ್ಜುನನಿಗೆ ತತ್ತ್ವಜ್ಞಾನದ, ವಿಶೇಷತಃ ಕರ್ಮಯೋಗದ ಉಪದೇಶಮಾಡುವ ಕೃಷ್ಣ, ಮೂರನೆಯದಾಗಿ ಸರ್ವ ಭೂತಮಾತ್ರಗಳು ಹೃದಯಾಂತರಾಳದಲ್ಲಿದ್ದು ಎಲ್ಲವನ್ನೂ ಯಂತ್ರಾರೂಢನಾಗಿ ನಡೆಸುವ ಪುರುಷೋತ್ತಮ ಕೃಷ್ಣ. ಈ ರೀತಿ ಮೂಬಗೆಯಾಗಿ ಮೂರು ಪಾತ್ರಗಳನ್ನು ವಹಿಸಿದ ಒಬ್ಬನೇ ಒಬ್ಬ ಶ್ರೀಕೃಷ್ಣನ ನಿಲುವು ಯಾವುದು, ಏನು, ಈ ಮೂರು ಬಗೆಯಾಗಿ ವರ್ತಿಸುವ ಅದ್ವಿತೀಯ ಸಾಮರ್ಥ್ಯವನ್ನು ಅವನು ಪಡೆದಿರುವ ರಹಸ್ಯವೇನು? ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. . . . .**

ಲೇಖಕರು : ಶ್ರೀ ರಂಗನಾಥ ದಿವಾಕರ

ನಮ್ಮ ಪೂಜನೀಯ, ಪ್ರಶಂಸನೀಯ, ಅರ್ಚನೀಯ ದೇವದೇವತೆಗಳ ಪರಂಪರೆ ಬಹಳ ದೊಡ್ಡದು. ಅದು ವೇದಕಾಲದಿಂದಲೂ ನಡೆದು ಬರುತ್ತ ಇದೆ. ಅದರಲ್ಲಿ ಹಲವೊಂದು ಬದಲಾವಣೆಗಳೂ ಹೆಚ್ಚುಕಡಿಮೆಗಳೂ ಆಗಿವೆ. ವೇದ ಕಾಲದಲ್ಲಿ ಅಗ್ನಿ, ರವಿ, ವರುಣ, ಇಂದ್ರ, ಮರುತ್ ಮುಂತಾದ ದೇವತೆಗಳ ಪ್ರಶಂಸೆ, ಭಕ್ತಿ ಇವು ಪ್ರಚಲಿತವಿದ್ದವು. ಮುಂದೆ ಬ್ರಹ್ಮ, ವಿಷ್ಣು, ಮಹೇಶ ಈ ಮೂರು ದೇವತೆಗಳ ಪೂಜೆಪುನಸ್ಕಾರಾದಿಗಳು ನಡೆದುಹೋದವು. ದೇವದೇವತೆಗಳ ಗುಣಶಕ್ತಿ ಕ್ರಿಯೆಗಳಲ್ಲಿ ಸಾಮ್ಯವಿದ್ದರೂ ಹೆಸರು ಮತ್ತು ನಾವು ಅರ್ಪಿಸುವ ಪೂಜಾವಿಧಿ ಮುಂತಾದವುಗಳಲ್ಲಿ ದೇಶಕಾಲ ಪರಿಸ್ಥಿತಿವಶಾತ್ ಬದಲಾವಣೆಗಳಾದವು. ಈಗ ಶಿವ, ಶ್ರೀರಾಮ, ಶ್ರೀಕೃಷ್ಣ, ಶ್ರೀಶಕ್ತಿ ಈ ದೇವತೆಗಳ ಪೂಜೆಯೆ ಜನಸಾಮಾನ್ಯದಲ್ಲಿ ಹೆಚ್ಚು ಪ್ರಚಾರಗೊಂಡಿದೆ. ಈಗ ಅತ್ಯಂತ ಲೋಕಪ್ರಿಯವಿರುವ ದೇವದೇವತೆಗಳಲ್ಲಿ ಶ್ರೀರಾಮ ಹಾಗೂ ಶ್ರೀಕೃಷ್ಣ ಇವರೇ ಮಿಗಿಲಾಗಿರುವರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಈ ಈರ್ವರಲ್ಲಿ ಶ್ರೀಕೃಷ್ಣನನ್ನು ಕುರಿತು ನಾಲ್ಕು ಮಾತುಗಳನ್ನು ನಾನು ಇಲ್ಲಿ ಹೇಳಲಿಚ್ಛಿಸುವೆ.

ಶ್ರೀಕೃಷ್ಣ ಹಾಗೂ ಶ್ರೀರಾಮ ಇವರು ವಿಷ್ಣುವಿನ ಅವತಾರವೆನಿಸುವರು. ಹಲವರು ಇವರು ಕ್ರಮವಾಗಿ ಪೂರ್ಣಾವತಾರ ಹಾಗೂ ಅಂಶಾವತಾರ ಎನ್ನುವದುಂಟು. ಆದರೆ ಈ ಅವತಾರ ವಿಚಾರದಲ್ಲಿ ಇಲ್ಲಿ ಸೇರುವದು ಸಾಧ್ಯವಿಲ್ಲ. ಅದೇ ರೀತಿ, ಉಪನಿಷತ್ತಿನಲ್ಲಿ ಉಲ್ಲಿಖಿತವಾದ ದೇವಕೀಪುತ್ರನು, ಯಶೋದೆಗೆ ತನ್ನ ಮುಖದಲ್ಲಿ ವಿರಾಟ ರೂಪ ತೋರಿದ ಬಾಲಕೃಷ್ಣನು, ಕಂಸ-ಶಿಶುಪಾಲರ ವಧೆಗೈದ ಕೃಷ್ಣನು, ನರಕಾಸುರನನ್ನು ಸಂಹರಿಸಿ ಹದಿನಾರು ಸಹಸ್ರ ಸ್ತ್ರೀಯರೊಡನೆ ವಿವಾಹ ಮಾಡಿಕೊಂಡವನು, ಪಾಂಡವರ ಮಿತ್ರನಾಗಿ ಪಾರ್ಥಸಾರಥಿ ಎನಿಸಿ ಕುರುಕ್ಷೇತ್ರದ ರಣರಂಗದಲ್ಲಿ ಗೀತೋಪದೇಶ ಮಾಡಿದ ಶ್ರೀಕೃಷ್ಣನು, ಇವರೆಲ್ಲರೂ ಒಂದೆಯೋ ಇವರು ಬೇರೆ ಬೇರೆಯವರೊ ಎಂಬ ಮುಂತಾದ ವಾದಗಳಲ್ಲಿ ತೊಡಗಲು ಇಲ್ಲಿ ಅಸ್ಪದವಿಲ್ಲ. ಧೈರ್ಯಗೆಟ್ಟು, ಎದೆಗುಂದಿ, ನೈಚಲ್ಲಿ ಹತವೀರ್ಯನಾದ ಅರ್ಜುನನಿಗೆ ವೀರೋಪದೇಶವನ್ನು ಮಾಡಿದ ಶ್ರೀಕೃಷ್ಣನನ್ನು ಮಾತ್ರ ಕುರಿತು ಇಲ್ಲಿ ವಿಚಾರಿಸಬೇಕಾಗಿದೆ.

ಶ್ರೀಕೃಷ್ಣನ ಚರಿತ್ರೆಯನ್ನಾಗಲಿ, ವ್ಯಕ್ತಿಮತ್ವವನ್ನಾಗಲಿ, ತತ್ತ್ವೋಪದೇಶವನ್ನಾಗಲಿ, ಅವನ ವೀರಕರ್ಮಗಳನ್ನಾಗಲಿ ಚಿಕ್ಕ ಪುಟ್ಟ ಲೇಖಗಳಲ್ಲಿ ಬರೆದು ಪ್ರಕಟಿಸುವದು ಅಸಾಧ್ಯ. ಅವನ ಜೀವನದಲ್ಲಿ ವೈವಿಧ್ಯ, ವಿಚಿತ್ರತೆ, ಮಹತ್ವ ಇವು ಅದ್ವಿತೀಯವಾದವುಗಳೆಂಬಲ್ಲಿ ಸಂಶಯವಿಲ್ಲ. ಜಗತ್ತಿನಲ್ಲಿ ಈ ವರೆಗೆ ಪ್ರತ್ಯಕ್ಷನಾಗಿ ಅಗಿ ಹೋದವರಲ್ಲಿ ಅಥವಾ ಕವಿಕಲ್ಪನೆಯಿಂದ ನಿರ್ಮಿಸಲ್ಪಟ್ಟವರಲ್ಲಿ ಶ್ರೀಕೃಷ್ಣನ ವ್ಯಕ್ತಿಮತ್ವ ಇದು ಎಲ್ಲಕ್ಕೂ ಅಗಾಧವೂ ಅನುಪಮವೂ ಇರುವದು. ಅದನ್ನು ವರ್ಣಿಸುವದೇ ಅಸಾಧ್ಯ. ಆದುದರಿಂದಲೆ ಇಲ್ಲಿ ಕೇವಲ ಅವನ ಜೀವನದ ಒಂದೇ ಒಂದು ಸಂದರ್ಭವನ್ನು- ಗೀತೋಪದೇಶ- ಕುರಿತು ಇಲ್ಲಿ ಬರೆಯಲನುವಾಗಿರುವೆ.

ಗೀತೆಯಲ್ಲಿಯ ಶ್ರೀಕೃಷ್ಣನು ಮೂಬಗೆಯಾಗಿರುವನೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ: ಧರ್ಮಪಕ್ಷಪಾತಿಯಾದುದರಿಂದ ಪಾಂಡವ ಪಕ್ಷಪಾತಿಯೂ ಪಾರ್ಥಸಾರಥಿಯೂ ಆದ ಕೃಷ್ಣನ ಪಾತ್ರ, ಇದು ಒಂದು ಬಗೆಯು. ಹತವೀರ್ಯನಾದ ಅರ್ಜುನನಿಗೆ ತತ್ತ್ವಜ್ಞಾನದ ವಿಶೇಷತಃ ಕರ್ಮಯೋಗದ ಉಪದೇಶ ಮಾಡುವ ಬಗೆ ಎರಡನೆಯದು. ಸರ್ವಭೂತಮಾತ್ರಗಳು ಹೃದಯಾಂತರಾಳದಲ್ಲಿ ಇದ್ದು ಎಲ್ಲವನ್ನೂ ಯಂತ್ರಾರೂಢನಾಗಿರುವಂತೆ ನಡೆಸುವ ಪುರುಷೋತ್ತಮನ ಬಗೆ ಮೂರನೆಯುದು. ಈ ಮೂಬಗೆಯಾಗಿ ಮೂರು ಪಾತ್ರಗಳನ್ನು ವಹಿಸಿದ ಒಬ್ಬನೇ ಒಬ್ಬ ಶ್ರೀ ಕೃಷ್ಣನ ನಿಲವು ಯಾವುದು, ಏನು ಎಂಬ ಗಂಭೀರವಾದ ವಿಚಾರವು ಅತೀವ ಮಹತ್ವದ್ದು. ಜನಸಾಮಾನ್ಯದಂತೆ ಹುಟ್ಟಿ, ಬದುಕಿ, ಬಾಳಿ, ಬೆಳೆಯುವ ವ್ಯಕ್ತಿವಿಶೇಷವು ಈ ಮೂರೂ ಬಗೆಯಾಗಿ ವರ್ತಿಸುವ ಅದ್ವಿತೀಯ ಸಾಮರ್ಥ್ಯವನ್ನು ಪಡೆದಿರುವ ರಹಸ್ಯವೇನು?

ಧರ್ಮಪಕ್ಷಪಾತಿಯಾದುದು ಬಹಳ ಮಹತ್ವದ ಮಾತಲ್ಲ. ಅದೇ ರೀತಿ ಒಂದು ವೀರವತ್ತರವಾದ ತತ್ತ್ವೋಪದೇಶವನ್ನು ಮಾಡಿ ರಣರಂಗದಲ್ಲಿ ಒಂದು ಕ್ರಾಂತಿಯನ್ನೆ ಉಂಟು ಮಾಡಿದ್ದೂ (ಅರ್ಜುನನು ತನ್ನ ದೈನ್ಯವನ್ನು ಬಿಟ್ಟು ಹೋರಾಡದಿದ್ದರೆ ಪಾಂಡವರಿಗೆ ಸೋಲು ಕಟ್ಟಿಟ್ಟಿತ್ತು) ಅಷ್ಟು ಅದ್ವಿತೀಯವಲ್ಲ. ಆದರೆ ಒಂದು ವ್ಯಕ್ತಿ ತನ್ನ ಯೋಗೈಶ್ವರ್ಯದಿಂದ ಚಿತ್‌ಶಕ್ತಿ ಸಾಧನೆ ದ್ವಾರಾ ಯಾವ ಗದ್ದುಗೆಯನ್ನೇರಬಲ್ಲನು, ಒಬ್ಬ ಹತಾಶ, ಹತವೀರ್ಯ ವ್ಯಕ್ತಿಗೆ ವಿರಾಟ ರೂಪವನ್ನು ತೋರಿ ಯಾವ ದಿವ್ಯಕಾರ್ಯಕ್ಕೆ ಪ್ರವೃತ್ತ ಮಾಡಬಲ್ಲನು ಎಂಬುದು ಮಾನವೀ ಆಧ್ಯಾತ್ಮಿಕ ಸಾಧನೆಯ ದೃಷ್ಟಿಯಿಂದ ಅತೀವ ಮಹತ್ವದ್ದು.

ಇದು ಅವತಾರಪುರುಷರ ಕಾರ್ಯ ಎಂದುಕೊಂಡು ಸುಮ್ಮನೆ ಕೂಡಬಹುದು, ಸಮಾಧಾನ ಹಚ್ಚಿಕೊಳ್ಳಬಹುದು. ಆದರೆ ಪೂರ್ಣ ಸತ್ಯವನ್ನು ತಿಳಿದುಕೊಳ್ಳಬೇಕು, ಪ್ರತಿಯೊಂದು ಸಮಸ್ಯೆಯ ತಳಬುಡಕ್ಕೆ ಹೋಗಿ ಅದರ ಆದ್ಯಂತಗಳನ್ನು ತಿಳಿದುಕೊಂಡೇ ಬಿಡಬೇಕು ಎನ್ನುವ ಮಾನವೀ ಮನವು, ನಮ್ಮೆಲ್ಲರ ಜ್ಞಾನಪಿಪಾಸೆಯು ಅಷ್ಟರಿಂದ ಸಮಾಧಾನ ಪಡಲಾರದು.

ಅವತಾರವೇ ಆಗಲೊಲ್ಲದೇಕೆ, ಈ ಮಾನವೀ ದೇಹ ಧಾರಣೆ ಮಾಡಿ, ಈ ದೇಹವನ್ನೆ ಅಧಿಷ್ಠಾನವನ್ನಾಗಿಟ್ಟುಕೊಂಡು, ಈ ಸಾಧನದ ಮೂಲಕವೆ, ದೇಹಧಾರಿಯಿರುವಾಗಲೆ ಶ್ರೀಕೃಷ್ಣನು ಯಾವ ಮಟ್ಟವನ್ನು ಮುಟ್ಟಿದ್ದು ಗೀತೆಯಲ್ಲಿ ಕಂಡು ಬರುವದೊ ಆ ಮಟ್ಟವನ್ನು ಸಿದ್ಧಪುರುಷನು

ಮುಟ್ಟುವದು ಸಾಧ್ಯವೆ, ಎಂಬ ಪ್ರಶ್ನೆ ಎದುರಾಗುವದು.

ಮೇಲಾಗಿ ಗೀತೆಯಲ್ಲಿ ಶ್ರೀಕೃಷ್ಣನು ತಾನು ಒಂದು ಅತ್ಯಂತಿಕವಾದ ಆಧ್ಯಾತ್ಮಿಕ ಉನ್ನತಿಯ ಮಟ್ಟವನ್ನು ಮುಟ್ಟಿ ಅಲ್ಲಿ ವಿರಾಜಮಾನನಾಗುವನಲ್ಲದೆ ಅರ್ಜುನನಿಗೆ ವಿರಾಟರೂಪವನ್ನು (ಪ್ರತ್ಯಕ್ಷ ಪರಮಾತ್ಮನ ರೂಪವನ್ನು ವಿಶೇಷತಃ ಕಾಲರೂಪವನ್ನು) ತೋರಿ ಅವನನ್ನು ದಿಙ್ಮೂಢನನ್ನಾಗಿ ಮಾಡಿ ಪೂರ್ಣ ಪರವಶನನ್ನಾಗಿ ಮಾಡಿ ಬಿಡುವನು. ತತ್ಪರಿಣಾಮವಾಗಿಯೆ ಮುಂದೆ ಅರ್ಜುನನು 'ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾತ್ ಮಯಾಚ್ಯುತ। ಸ್ಥಿತೋಸ್ಮಿ ಗತ ಸಂದೇಹಃ ಕರಿಷ್ಯೇ ವಚನಂ ತವ ॥' ಎಂದು ಪೂರ್ಣ ಶರಣಾಗತನಾಗಿ ಯುದ್ಧೋನ್ಮುಖನಾಗುವನು. ಅರ್ಥಾತ್ ಈ ವಿರಾಟ ರೂಪದರ್ಶನವೆಂಬುದೊಂದು ಮಾಟವಲ್ಲ, ಇಂದ್ರಜಾಲವಲ್ಲ. ಆದರೆ ಅರ್ಜುನನಂಥ ಶ್ರೇಷ್ಠ ಕ್ಷತ್ರಿಯನ ಮನಸನ್ನು ಪೂರ್ಣ ಪಲ್ಲಟಿಸುವ, ಕ್ಲೀಬನನ್ನು ವೀರನನ್ನಾಗಿ ಬಿಡುವ ನವಜೀವನನಿಯು ಆ ದರ್ಶನದಲ್ಲಿದೆ.

ಇದರ ಮೇಲಿಂದ ಯೋಗ, ಯೋಗಶಕ್ತಿ, ಯೋಗೈಶ್ವರ್ಯ, ಯೋಗೇಶ್ವರನ ಶಕ್ತಿ ಯಾವ ಮಟ್ಟಿಗೆ ಉನ್ನತಿಯನ್ನು ಪಡೆಯಬಲ್ಲವು ಎಂಬುದು ಶ್ರೀಕೃಷ್ಣನ ಮುಖಾಂತರ ಸಿದ್ಧವಾಗಿ ನಿಂತಿರುವ ಮಾತು ಎಂದು ಹೇಳಬಹುದು. ಗೀತೆಯು ಕೃಷ್ಣನ ಮುಖಾಂತರ ಇದೊಂದು ಪ್ರಕಟರಹಸ್ಯವು ಮೂರ್ತಿವೆತ್ತು ನಿಂತಿದೆ ಎಂದು ಹೇಳಬಹುದು.

ಗೀತೆಯಲ್ಲಿಯ ಕೃಷ್ಣನನ್ನು ಕುರಿತು ಇನ್ನೂ ಎರಡು ಮೂರು ಮಾತುಗಳು ಬಹಳ ಮಹತ್ವದವಿರುವವು.

ಜಗತ್ತಿನಲ್ಲಿ ಹಲವಾರು ಧರ್ಮಗಳು ಹಾಗೂ ಧರ್ಮಗ್ರಂಥಗಳು ಪ್ರಚಲಿತವಿರುವವು: ಜೈನ, ಬೌದ್ಧ, ಯಹುದಿ, ಕ್ರಿಶ್ಚನ್, ಕೂಫೂತ್ಸು, (ಕಾನ್‌ಫ್ಯೂಶಿಯನ್), ಫಾರಸಿ (ಝುರಥೂಷ್ಟ್ರಸಿಂದ ಪ್ರಸಾರಿತವಾದುದು), ಇಸ್ಲಾಮ ಇತ್ಯಾದಿ. ಇವುಗಳೆಲ್ಲವುಗಳ ಮೂಲ ಉಗಮವನ್ನು ನಾವು ನೋಡಹೋದರೆ, ಅವು ಆಯಾ ಧರ್ಮದವರ ಶ್ರದ್ಧೆಯ ಪ್ರಕಾರ ಈಶಪ್ರೇರಿತ ದೂತರಿಂದ ಇಲ್ಲವೆ ಭವಿಷ್ಯವಾದಿಗಳಿಂದ (ಪ್ರಾಫೆಟ್ಸ) ಈ ಭೂತಲಕ್ಕೆ ಅವತರಿಸಿರುವವು. ಅರ್ಥಾತ್ ಭಗವಂತನ ಸ್ಫೂರ್ತಿ, ಮಾರ್ಗದರ್ಶನ ಇವುಗಳ ಮೂಲಕ ಆಯಾ ದೇವನು ಆಯಾ ಧರ್ಮದ ದರ್ಶನವನ್ನು ಪಡೆದು ಅದನ್ನು ಶಬ್ದರೂಪಕ್ಕಿಳಿಸಿ ಅದನ್ನು ಆಯಾ ಜನರಿಗೆ ಉಪದೇಶಿಸಿದನು ಎಂಬುದೆ ಇದರ ತಾತ್ಪರ್ಯ.

ಗೀತೆಯು ವಿಷಯವು ಇವೆಲ್ಲವುಗಳಿಂದ ಭಿನ್ನವಿರುವದು. ಅದು ಯಾವ ರೀತಿ ಅಂದರೆ, ಗೀತೆಯಲ್ಲಿ ಭಗವಂತನೆ ಸ್ವತಃ ಸನಾತನ ಧರ್ಮ ತತ್ತ್ವಗಳನ್ನು ಕುರುಕ್ಷೇತ್ರದಲ್ಲಿ ತನ್ನ ಅತ್ಯಂತ ಪ್ರಿಯ ಶಿಷ್ಯನಾದ ಅರ್ಜುನನಿಗೆ ಉಪದೇಶಿಸುವನು. ಈಶ್ವರಪ್ರೇರಿತನಾಗಿ ನಾನು ಇದನ್ನು ಹೇಳುವೆ, ಇಲ್ಲವೆ ಈ ತತ್ವಗಳ ದರ್ಶನವನ್ನು ನಾನು ನಿನಗೆ ಉಸುರುವೆ, ಎಂದು ಶ್ರೀಕೃಷ್ಣನು ಅನ್ನುವದಿಲ್ಲ. ಆದರೆ ವಿಶ್ವದಲ್ಲಿಯ 'ವಿಭೂತಿಮತ್ ಸತ್ವ'ವೆಲ್ಲವೂ (ಯದ್ಯದ್ ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವ ವಾ। ತತ್ತದೇವಾವಗಚ್ಛತ್ವಂ ಮಮತೇಜೋಂಶಸಂಭವಂ) ನನ್ನ ಅಂಶಮಾತ್ರವು. ತ್ರಿಲೋಕಗಳನ್ನು ಯಂತ್ರಾರೂಢವಸ್ತುಗಳಂತೆ ತಿರುಗಿಸುತಿರುವವನು ನಾನೇ, ಕ್ಷರಾಕ್ಷರಗಳಾಚೆಗಿರುವ ಪುರುಷೋತ್ತಮನೂ ಅವ್ಯಯ ಈಶ್ವರನೂ ನಾನೇ, ಎಂದು ಧಾರಾಳವಾಗಿ ಸಾರುವನು. ನಾನು ಸನಾತನ ಪರಮಾತ್ಮನೂ ಸೈ, ಈಗ ಈ ಕುರುಕ್ಷೇತ್ರದಲ್ಲಿ ನಡೆಯಲಿರುವ ಸಂಹಾರವನ್ನು ಮಾಡುವ ಕಾಲನಾದರೂ (ಕಾಲೋಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ) ನಾನೇ, ಎಂದು ಅವನು ಹೇಳುವನು, ಹಾಗೂ ನೀನು ನಿಮಿತ್ತಮಾತ್ರನು, ಎಂದು ಅರ್ಜುನನ ಮನವೊಲಿಸಿ ಅವನಿಂದ ಕೌರವ ಸಂಹಾರ ಕಾರ್ಯವನ್ನುಮಾಡಿಸುವನು!

ಹಲವು ನಾಸ್ತಿಕರು ಇಲ್ಲವೆ ಜಡವಾದಿಗಳು ಇಲ್ಲವೆ ಸಾಕಷ್ಟು ಪ್ರಗಲ್ಭವಾದ ಕಲ್ಪನಾಶಕ್ತಿ ಇಲ್ಲದೆ ಇದ್ದವರು, ಮಹಾಭಾರತವು ಒಂದು ಕಟ್ಟುಕಥೆ, ಗೀತೆ ಇದೊಂದು ಕಾಲ್ಪನಿಕ ಸಂದರ್ಭವನ್ನು ಕಲ್ಪಿಸಿಕೊಂಡು ಮಾಡಿದ ಧರ್ಮೋಪದೇಶ, ಶ್ರೀಕೃಷ್ಣ ಎಂಬವನೊಬ್ಬ ಕೇವಲ ಕಥಾನಾಯಕ, ಎಂದು ವಾದಿಸಬಹುದು. ಒಂದು ಕ್ಷಣ ಅವರ ವಾದವು ಪೂರ್ವಪಕ್ಷ ಎಂದು ತಿಳಿಯೋಣ. ಆದರೆ ಇಂಥ ದಿವ್ಯ-ಭವ್ಯ ಚರಿತ್ರೆಯುಳ್ಳ ಕಥಾನಾಯಕನನ್ನಾದರೂ ಇನ್ನಾವ ಕವಿ ಯಾವ ದೇಶದಲ್ಲಿ, ಯಾವ ಭಾಷೆಯಲ್ಲಿ, ಯಾವ ಕಾಲದಲ್ಲಿ ನಿರ್ಮಿಸಿರುವನು, ಎಂದು ಕೇಳಬಹುದಲ್ಲವೇ? ಪರಮಾತ್ಮನನ್ನೆ ಭೂಮಿಗೆ ಇಳಿಸಿ ಅವನ ಬಾಯಿಂದಲೆ ಅಮೃತ ವಾಣಿಯನ್ನು ನುಡಿಸಿ, ಅದು ಸಾವಿರಾರು ವರುಷ ಕೋಟ್ಯಂತರ ಜನರ ಅಂತರಜ್ಯೋತಿಯಾಗುವಂತೆ ಮಾಡಿದ ಶ್ರೀವ್ಯಾಸರ ಸಾಟಿಯನ್ನು ಇನ್ನೆಲ್ಲಿಯಾದರೂ ಕಾಣಬಹುದೇ? ಇಂದ್ರಿಯಗಳಿಗೆ ಅಗೋಚರನಾದ, ಮನಸಿಗೆ ನಿಲುಕದ, ಕಲ್ಪನೆಗೆ ಸಿಗದಿರುವ ತ್ರಿಗುಣಾತೀತ ಆದಿಶಕ್ತಿಗೆ ಮನುಷ್ಯರೂಪಕೊಟ್ಟು, ಅವನನ್ನು ಅರ್ಜುನನ ಸಖನನ್ನಾಗಿಮಾಡಿ ಮಾನವಮಾತ್ರರಿಗೆ ತನ್ನ ಅನುಪಮ ವಾಣಿಯಿಂದ ಅಮೃತೋಪದೇಶವನ್ನು ಕೊಡಿಸಿದ ಶ್ರೇಯಸ್ಸು ಜಗದಾದಿಯಿಂದ ಈ ವರೆಗೆ ಒಬ್ಬನೇ ಒಬ್ಬ ಕವಿಗೆ, ಶ್ರೀವ್ಯಾಸನಿಗೆ ಸಲ್ಲುವುದಿಲ್ಲವೆ?

ಶ್ರದ್ಧೆಯುಳ್ಳವರೂ ಶ್ರದ್ಧೆ ಇಲ್ಲದವರೂ ಈ ಮಾತುಗಳನ್ನು ಪರಿಶೀಲಿಸುವಂತಿವೆ. ಪ್ರತಿಯೊಂದು ಮಾನವೀ ಅಂತಃಕರಣವೆಂಬ ಕುರುಕ್ಷೇತ್ರದಲ್ಲಿ ಗೀತಾರೂಪವಾದ ನರನಾರಾಯಣ ಸಂವಾದವು ಅಖಂಡವಾಗಿ ನಡೆಯುತಿದೆ. ಕಿವಿಗೊಟ್ಟು ಆಲಿಸುವವರಿಗೆ, ಧನುರ್ಧರಪಾರ್ಥ ಮತ್ತುಯೋಗೇಶ್ವರ ಕೃಷ್ಣ ಇವರ ಈ ಸಂವಾದವು ಕೇಳಿಬರಬಲ್ಲದು. ಅದನ್ನು ಚನ್ನಾಗಿ ಕೇಳಿ ಜೀವನದಲ್ಲಿ ಅದನ್ನು ಕಾರ್ಯತಃ ಇಳಿಸಲೆತ್ನಿಸುವದೆ ನಿಜವಾದ ಪುರುಷಾರ್ಥವು.

---

## ಆದರೂನು ಹೊಸತು ತಾನು

೧

ಅದೇ ನೆಲಾಽ ಅದೇ ಜಲಾಽ
ಎಂದೆಂದಿಗು ಅದೇ ಅದೇಽ
ಆದರೂನು ಹೊಸತು ತಾನು
ಎಂದೆಂದಿಗು ಇದೇ ಇದೇಽ

೨

ಅದೇ ಬಾನುಽ ಅದೇ ಭಾನುಽ
ತೋರುತಿಹುದು ದಿನಾ ದಿನಾಽ
ಅದೇ ಜನಾಽ ಅದೇ ಬನಾಽ;
ಆದರೂನು ಹೊಸತನಾಽ

೩

ಅದೇ ಗಿರಿಯು ಅದೇ ಪೆರೆಯು
ಕಾಣುತಿಹವು ಚಣಾ ಚಣಾಽ
ಅದೇ ಎಲರು ಅದೇ ಮಲರು
ಬೆಳಗುತಿಹವು ಮನಾ ಮನಾಽ

೪

ಅದೇ ಗೇಹ ಅದೇ ದೇಹ
ಜಗದೊಳದುವು ಚಿರಂತನಾಽ–
ದೇಹ–ಗೇಹದಾಽ ನೇಹಽ
ನಿತ್ಯ ನಿತ್ಯ ನೂತನಾಽಽ–

೫

ಅದೇ ತೆರೆಯು ಅದೇ ಕರೆಯು
ಅನುದಿನವೂ ಅದೇ ಅದೇಽ–;
ಆದರೂನು ಹೊಸತು ತಾನು
ತೋರುತಿಹುದು ಪದೇ ಪದೇಽ–

೬

ಒಂದೆ ವಸ್ತು ಒಂದೆ ಶಿಸ್ತು
ಎಲ್ಲವೂನು ಒಂದೆ ಥರಾಽ;
ಆದರೇನು ಇಲ್ಲವೇನು?
ಅವುಗಳಲ್ಲಿ ಥರಽ ಥರಾಽ–

—ಎಸ್. ಎಸ್. ಬಸುಪಟ್ಟದ

# ಕಂಡದ್ದು–ಕೇಳಿದ್ದು

ಸರಕಾರಿ ಅಧಿಕಾರಿಯೊಬ್ಬನು ಒಂದು ದಿನ ಮುಂಜಾನೆ ಮನೆಯಲ್ಲಿ ಮೇಜಿನ ಮೇಲೆ ಕಾಲಿಟ್ಟು ಪತ್ರಿಕೆ ಓದುವುದರಲ್ಲಿ ಮಗ್ನನಾಗಿದ್ದ. ಹೀಗೇ ಒಂದು ತಾಸು ಕಳೆಯಿತು. ಅವನು ಹಠಾತ್ತಾಗಿ "ಏಯ್ ಇನ್ನೊಂದು ಕಪ್ ಚಹಾ ತಾ!" ಎಂದ.

ಅವನ ಹೆಂಡತಿ ಆಶ್ಚರ್ಯದಿಂದ "ಚಹಾ! ಈ ಹೊತ್ತಿನಲ್ಲಿ! ಏನು ಊಟ ಮಾಡಿ ಆಫೀಸಿಗೆ ಹೊರಡುವ ವಿಚಾರ ಇಲ್ಲೇನು ನಿಮಗೆ ಈವೊತ್ತು!" ಎಂದು ಕೇಳಿದಳು.

"ಆಫೀಸು!" ಆ ಅಧಿಕಾರಿ ಗಾಬರಿಯಿಂದ ಸುತ್ತಮುತ್ತ ನೋಡಿದನು. "ಹಾಳಾಯಿತು! ಆಫೀಸಿನಲ್ಲೇ ಇದ್ದೇನೆಂದು ತಿಳಿದುಕೊಂಡಿದ್ದೆ ನಾನು!"

★

ಸರಕಾರವು ನಮ್ಮ ಜಠರದಂತಿರಬೇಕು—ಅದು ಸರಿಯಾಗಿ ಕೆಲಸ ಮಾಡುತ್ತಿದ್ದಾಗ ಅದು ಇದೆಯೆಂಬುದು ನಮ್ಮ ಗಮನಕ್ಕೇ ಬರಬಾರದು.

★

ತೊಂಭತ್ತು ವರ್ಷವಾದ ವೃದ್ಧನೊಬ್ಬ ನನ್ನ ಒಬ್ಬ ಸುದ್ದಿಗಾರ ಭೆಟ್ಟಿಯಾಗಿ ಅವನ ದೀರ್ಘಾಯುಸ್ಸಿನ ಗುಟ್ಟು ಕೇಳಿದಾಗ ಅವನು ಹೇಳಿದ್ದು: 'ಜೀವನದಲ್ಲಿ ಬಂದ ಸಂಕಟಗಳನ್ನೆಲ್ಲ ನಾನು ಹಾಸಿಗೆಯಲ್ಲಿ ಮಲಗಿ ಎದುರಿಸಿದ್ದೇನೆ.'

★

ಒಬ್ಬ ಯಜಮಾನನು ತನ್ನ ಸ್ತ್ರೀ ಕಾರಕೂನಳಿಗೆ ಅವಳು ಅಂದು ಮಾಡಿದ ತಪ್ಪುಗಳನ್ನೆಲ್ಲಾ ತೋರಿಸುತ್ತಿದ್ದನು. ಕೊನೆಗೆ ಅವಳು ಗಂಟೆ ನೋಡಿ ಅಂದದ್ದು: 'ಮಿ. ರಾವ್, ಈಗ ಐದು ಹೊಡೆದು ನಾಲ್ಕು ಮಿನಿಟಾಯಿತು. ನೀವು ನನ್ನ ಸಮಯದಲ್ಲೇ ನನಗೆ ಬುದ್ಧಿ ಹೇಳುತ್ತಿದ್ದೀರಲ್ಲ!'

★

"ನಾನು ನಿನ್ನೆ ಕಮಲಳ ಹತ್ತಿರ 'ನಿಮಗೆ ನಿಮ್ಮ ಮಗಳಿಗಿಂತ ಸ್ವಲ್ಪವೂ ಹೆಚ್ಚು ವಯಸ್ಸಾದಂತೆ ಕಾಣುವದಿಲ್ಲ' ಎಂದು ಸ್ತೋತ್ರ ಮಾಡಿದಾಗ ಅವಳು ಹಿಗ್ಗಿ ಹೀರೇಕಾಯಿಯಾದದ್ದನ್ನು ನೋಡಿದಿರಾ, ಸಾವಿತ್ರಮ್ಮ?"

"ಇಲ್ಲಮ್ಮಾ ನಾನು ನೋಡಲಿಲ್ಲ. ನಾನು ಅವಳ ಮಗಳ ಮುಖಾನೇ ನೋಡ್ತಾ ಇದ್ದೆ."




ನಿಮ್ಮದು ಸರಿಯಾಗಿದ್ದಾಗ ನೀವು ಸೈರಣೆ ಉಳಿಸಿಕೊಳ್ಳಬಲ್ಲಿರಿ.

ನಿಮ್ಮದು ತಪ್ಪಿದ್ದಾಗ ನೀವು ಸೈರಣೆ ಕಳೆದುಕೊಂಡರೆ ನಡೆಯುವುದಿಲ್ಲ.

★

ಅವನು: 'ನಾನು ಮುತ್ತಿಡುವಾಗ ನನ್ನವಳು ಕಣ್ಣುಮುಚ್ಚಿಕೊಳ್ಳುತ್ತಾಳೆ. ಯಾಕೋ ಏನೋ!'

ಇವನು: 'ಕನ್ನಡಿಯಲ್ಲಿ ನೋಡಿಕೋ.'

★

'ರೇಡಿಯೋದಿಂದ ಸಣ್ಣಪುಟ್ಟ ಕೀಟಗಳನ್ನು ಕೊಲ್ಲಬಹುದೆಂದು ವಿಜ್ಞಾನಿಗಳು ಹೇಳುತ್ತಾರೆ.'

'ನಮ್ಮ ರೇಡಿಯೋ ಕಾರ್ಯಕ್ರಮಗಳನ್ನು ಕೇಳಿದರೆ ಸಾಧಾರಣ ದೊಡ್ಡ ಪ್ರಾಣಿಗಳನ್ನೂ ಕೊಲ್ಲಲು ಸಾಧ್ಯವಿದೆಯೆನಿಸುತ್ತದೆ.'

ಅಟ್ಟದ ಮೇಲೆ ವಾಸಿಸುತ್ತಿದ್ದ ಒಬ್ಬ ಇಂಗ್ಲೀಷ ಹೆಣ್ಣುಮಗಳು ಅಟ್ಟದ ಬಾಲ್ಕನಿಯನ್ನು ಒರಸುತ್ತಿದ್ದಾಗ ಬಗ್ಗಿದ್ದು ಹೆಚ್ಚಾಗಿ ಕಾಲು ತಪ್ಪಿ ರಸ್ತೆಯ ಮೇಲಿನ ಕಸದ ಡಬ್ಬಿಯೊಳಗೆ ಬಿದ್ದಳು.

ಅದೇ ದಾರಿಯಲ್ಲಿ ಹೋಗುತ್ತಿದ್ದ ಚೀನಿಯನೊಬ್ಬನು ಕಸದ ಡಬ್ಬಿಯಲ್ಲಿ ಅವಳನ್ನು ಕಂಡು, "ಈ ಇಂಗ್ಲೀಷ ಜನ ಬಹಳ ದುಂದುಗಾರರು. ಹೆಂಗಸು ಇನ್ನೂ ಹತ್ತು ವರ್ಷ ತಾಳುತ್ತಿದ್ದಳು" ಎಂದ.

★

ಗಿರಾಕಿ: 'ಇದು ಪೂರಾ ಉಣ್ಣೆಯ ಸ್ವೆಟರ ಅಂತ ಹೇಳಿದಿರಿ. ಇಲ್ಲಿ ನೋಡಿರಿ, ಇದರೊಳಗೆ ಹೊಲಿದ ಪಟ್ಟಿಯಲ್ಲಿ 'ಪೂರ್ಣ ಕಾಟನ್' ಅಂತ ಬರೆದಿದೆಯಲ್ಲ!'

ಅಂಗಡಿಗಾರ: 'ಅದು ಹುಳಗಳಿಗೆ ಮೋಸ ಮಾಡಲು ಬರೆದು ಹಚ್ಚಿದ್ದು ಸ್ವಾಮೀ, ಇದು ನಿಜವಾಗಿ ಉಣ್ಣೆಯೇ.'

# ಫ್ಯಾಶನ್ ಪರೇಡ್


ಅಯ್ಯೋ! ಸಿನಿಮಾ ಸುರುವಾಗಲು ಕೇವಲ ಮೂರೇ ಗಂಟೆ! ಅಮ್ಮಯ್ಯ ಟಿಕೇಟು ರಿಜರ್ವ್ ಮಾಡಿಸಿಬಿಟ್ಟದ್ದು ಬಹಳ ಚೆನ್ನಾಯ್ತು
ಹಂ! ಸಿನಿಮಾ ತಾರೆಯಂತೆ! ನಮ್ಮ ಶಾಲೆಯಲ್ಲಿ "ಪೂರ್ ಸ್ಟುಡೆಂಟ" ಅಂತಾ ಫ್ರೀಶಿಪ್ ಗಿಟ್ಟಿಸಿದವಳು ಇವಳೇನೋ! ಇದೇ ತಾರೇನೋ!
ನನಗಿಂತ ಕೊಂಚ ಎತ್ತರವಿದ್ದಿದ್ದರೆ ಎಮ್ಮನ್ನೇ ಬಂದಿತಾ ವಾರ್ಡ್ ಮಾಡ್ತ್ಯಾ ಇದ್ದೇನಂತ ಹೇಳ್ದ್ರಾ ನಿನಗೆ ನೆನಪಿಲ್ವೇನೆ?
ಪಿ. ಅನಂತ

# ನರಬಲಿ

**ಮಿ. ತ್ರಿಯಾನಾರವರು ಇಂಗ್ಲಂಡಿನಿಂದ ಭಾರತಸಂದರ್ಶನಕ್ಕೆ ಬಂದವರು. ಆದರೆ ಅವರಿಗೆ ಭಾರತದ ಹುಳುಕು ತೆಗೆಯುವುದು ಮಾತ್ರ ಬೇಕಾಗಿತ್ತು. ಬರಗಾಲಕ್ಕೊಳಗಾದ ಪ್ರದೇಶದ ಬವಣೆ ನೋಡಿ ಅವರಿಗೆ ಅಮಿತ ಆನಂದವಾಯಿತು. ಆದರೆ ಅವರ ದುರ್ಬುದ್ಧಿಗೆ ಪ್ರಾಯಶ್ಚಿತ್ತವಾದ ಬಗೆ ಭೀಕರವಾದುದು. . . .**

ಬರೆದವರು: ಶ್ರೀಮತಿ ನರ್ಗಿಸ್ ದಲಾಲ

ತ್ರಿಗ್ಗು ದಿನ್ನೆಯ ರಸ್ತೆಯಲ್ಲಿ ಕಾರು ಪರ್ರೆನ್ನುತ್ತ ಮೃದುವಾಗಿ ಸಾಗುತ್ತಿತ್ತು. ಅದರ ತಳತಳಿಸುತ್ತಿದ್ದ ಪಕ್ಕಗಳು ಈಗ ದೂಳಿನ ಪದರುಗಳಿಂದ ಮರೆಯಾಗಿಬಿಟ್ಟಿದ್ದವು. ಸುತ್ತಲೂ ಬಿಸಿಯೇರಿ ಒಣಗಿದ ಬಂಜರು ಹೊಲಗಳು. ಅದರಾಚೆಗೆ ಗುಡ್ಡಗಳು. ಗುಡ್ಡಗಳ ಮೇಲೆ ನಸುನೀಲಿ ಹೊಗೆಯಂಥ ಮಂಜು.

ಮಿಸ್ಟರ್ ತ್ರಿಯಾನಾ ಕಾರಿನ ಕಿಡಿಕಿಯಲ್ಲಿ ಆತುರದಿಂದ ದಿಟ್ಟಿಸುತ್ತಿದ್ದರು. ಅವರು ಭಾರತವನ್ನು ನೋಡಲೆಂದು ಬಂದಿದ್ದರು. ಅದರ ಮೂಲೆ ಮೂಲೆಯನ್ನೂ ನೋಡಿಬಿಡಬೇಕೆಂದು ಅವರು ಗಟ್ಟಿಮಾಡಿಕೊಂಡಿದ್ದರು. ನಳನಳಿಸುವ ಹುಲ್ಲು ಗಾವಲುಗಳನ್ನು ಅವರು ಕಂಡಿದ್ದರು, ಹಸುರಾದ ಗುಡ್ಡಗಾಡುಗಳನ್ನು ಕಂಡಿದ್ದರು, ಇಳಿಜಾರಾದ ಚಹಾತೋಟಗಳನ್ನೂ ಸಂದರ್ಶಿಸಿದ್ದರು. ಭಗ್ನಾವಶೇಷಗಳನ್ನೂ ಗುಡಿ ಗುಂಡಾರಗಳನ್ನೂ ಹೊಸದಾಗಿ ಕಟ್ಟಿದ ಅಣೆಕಟ್ಟುಗಳನ್ನೂ ಅವರು ಪರಿಶೀಲಿಸಿ ಬಂದಿದ್ದರು. ಈಗ ಬರಗಾಲದ ಪ್ರದೇಶಗಳನ್ನು ನೋಡುವ ನಿರ್ಧಾರದಿಂದ ಅವರು ಹೊರಟಿದ್ದಾರೆ. ಹೊಟ್ಟೆಗಿಲ್ಲದೆ ಕೃಶರಾದ, ಜೋಲು ಮೋರೆಯ ಹೆಂಗಸರ, ಬಡಕಲು ಮೈಯ ಡೊಳ್ಳುಹೊಟ್ಟೆಯ ಹುಡುಗರ ಚಿತ್ರಗಳು ಬೇಕಾಗಿವೆ ಅವರಿಗೆ. ಸ್ವದೇಶಕ್ಕೆ ಮರಳಿದ ಮೇಲೆ ಅವುಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಬೇಕು; ಆದ್ದರಿಂದ ಆ ಚಿತ್ರಗಳು ಚೆನ್ನಾಗಿಯೇ ಇರಬೇಕೆಂದು ಅವರು ಬಯಸುತ್ತಿದ್ದರು.

ಕಾರಿನಲ್ಲಿದ್ದ ಇತರರಿಗೆ ಇದರಲ್ಲಿ ಏನೂ ಆಸ್ಥೆಯಿದ್ದಿಲ್ಲೆಂದು ಎದ್ದುಕಾಣುತ್ತಿತ್ತು. ಆದರೆ ಇದು ಮಿಸ್ಟರ್ ತ್ರಿಯಾನಾರನ್ನು ತಮ್ಮ ಉದ್ದೇಶದಿಂದ ಎಳ್ಳಷ್ಟೂ ವಿಚಲಿತಗೊಳಿಸಲಿಲ್ಲ. ಹೊರಗಿನ ಭೀಕರ ಜಳ ಮುಚ್ಚಿದ ಕಿಡಕಿಯ ಗಾಜನ್ನೂ ದಾಟಿ ಒಳನುಗ್ಗುತ್ತಿತ್ತು. ಧೂಳು ಒಳಗೊಸರಿ ಕಾರಿನ ಬೆಲೆಬಾಳುವ ಗಾದಿಹೊದಿಕೆಗಳನ್ನು ಮಲಿನಗೊಳಿಸಿತ್ತು.

ತ್ರಿಯಾನಾರ ಸಂಗಡಿಗರಾದ ಇಬ್ಬರು ಹೆಂಗಸರಲ್ಲಿ ಚಿಕ್ಕವಳು ಬಸವಳಿದು ಮುಖ ಒರಸಿಕೊಂಡು ಹಿಂದೆ ಒರಗಿದಳು. ಅವಳಿಗೆ ಇಪ್ಪತ್ತು ದಾಟಿರಬಹುದಷ್ಟೇ. ಅವಳ ಮುಖ ಎಳೆತನದ ಕಳೆಯಿಂದ ನಯವಾಗಿತ್ತು. ಅವಳ ಕೂದಲು ಕಪ್ಪು; ಕಣ್ಣುಗಳು ದ್ರಾಕ್ಷಾರಸದ ಬಣ್ಣ. ವಯಸ್ಸಾದ ಇನ್ನೊಬ್ಬಳು ಮಿ. ತ್ರಿಯಾನಾರ ಸೋದರಿ. ಕಾರಿನ ಗಾದಿಗಳಂತೆ ಅವಳ ಮೈಯೆಲ್ಲ ನಯವಾದ ಧೂಳಿನ ಪದರಿನಿಂದ ಮುಚ್ಚಿಹೋಗಿತ್ತು. ಅವಳ ಕೂದಲು, ಮುಖ, ಕಣ್ಣುಗಳನ್ನೆಲ್ಲ ಅದು ಆವರಿಸಿ, ಹುಬ್ಬುಗಳಿಗೂ ಕಣ್ಣೆವೆಗಳಿಗೂ ಮುದ್ದೆಮುದ್ದೆಯಾಗಿ ಅಂಟಿಕೊಂಡಿತ್ತು. ಆದರೆ ಇದೆಲ್ಲದರ ಪರವೆಯೇ ಅವಳಿಗೆ ಇದ್ದಂತೆ ಕಾಣಲಿಲ್ಲ. ಅವಳು ಕಣ್ಮುಚ್ಚಿ, ಅರೆತೆರೆದ ಬಾಯಿಯಿಂದ ಅಶಾಂತ ನಿದ್ರೆಯಲ್ಲಿದ್ದಳು.

ಕಾರಿನ ಭಾರತೀಯ ಸಾರಥಿಗೆ ಮಾತ್ರ ಈ ಉಗ್ರ ಬಿಸಿಲಿನ ಲಕ್ಷ್ಯವೇ ಇದ್ದಿಲ್ಲ. ಅವನು ಎಳೆ ಹರೆಯದವನು. ತನ್ನ ಕುಶಲ ಹಸ್ತಗಳಿಂದ, ನಯವಾದ ಕೈಗಳಿಂದ ಅವನು ಕಾರನ್ನು ಲೀಲಾಜಾಲವಾಗಿ ನಡೆಸುತ್ತಿದ್ದನು. ನಿವೃತ್ತ ಸೈನಿಕ ಅಧಿಕಾರಿಯಾದ ಅವನನ್ನು ಮಿ. ತ್ರಿಯಾನಾರಿಗೆ ಪ್ರವಾಸದಲ್ಲಿ ಮಾರ್ಗದರ್ಶಕ ಮತ್ತು ಸಹಾಯಕನೆಂದು ಕೊಡಲಾಗಿತ್ತು. ಕೌತುಕದ ಸಂಗತಿಗಳನ್ನು ತೋರಿಸಬೇಕಾದಾಗ ಹೊರತು ಅವನು ಮಾತಾಡುತ್ತಿದ್ದುದೇ ವಿರಳ.

ಮಿ. ತ್ರಿಯಾನಾ ಈಗ ಮುಂದೆ ಬಾಗಿ ಅವನಿಗೆ ಹೇಳಿದರು.

‘ ಪ್ರೀತಮಸಿಂಗ್, ಅನುಕೂಲ ಸ್ಥಳ ನೋಡಿ ಎಲ್ಲಾದರೂ ಸ್ವಲ್ಪ ನಿಲ್ಲಿಸು. ಊಟ ಮಾಡಬೇಕಲ್ಲ. ತುಸು ವಿಶ್ರಾಂತಿ ತೆಗೆದುಕೊಳ್ಳುವುದು ಒಳ್ಳೇದೆಂದು ಕಾಣುತ್ತದೆ. ’

ಕೇಳಿಸಿತೆಂದು ತೋರಿಸಲು ಪ್ರೀತಮಸಿಂಗ ತಲೆ ಆಡಿಸಿದನು. ಆದರೆ ಮಾತಾಡಲಿಲ್ಲ.

ಮಿ. ತ್ರಿಯಾನಾ ಹುಬ್ಬುಗಂಟಿಕ್ಕಿದರು. ಈ ಭಾರತೀಯ ಜನ ಅವರಿಗೇಕೋ ಸೇರುತ್ತಿರಲಿಲ್ಲ. ಅದರಲ್ಲಿಯೂ ಇಂಥ ಮೂಕ ಜಾತಿ ಸ್ವಲ್ಪವೂ ಮನಸ್ಸಿಗೆ ಬರುತ್ತಿರಲಿಲ್ಲ. ಸ್ವತಃ ಅವರು ವಾಚಾಳಿ ಜಾತಿ. ಕುಳ್ಳನಿಲುವಿನ, ದಪ್ಪ ಎಲುಬಿನ, ಬಲಿಷ್ಠ, ಭಾರದೇಹದ, ಒರಟುಚರ್ಮದ ಮನುಷ್ಯ ಅವರು. ಅವರು ಇಂಗ್ಲೀಷ ರಾಷ್ಟ್ರಿಕರು. ಬ್ರಿಟಿಶ ಪಾಸ್‌ಪೋರ್ಟು ಅವರ ಬೆಂಬಲಕ್ಕಿತ್ತು. ಆದರೆ ಅವರ ವಂಶದಲ್ಲಿ ಎಲ್ಲಿಯೋ ಯಾರೋ ಕಾಲು ಜಾರಿದಂತಿತ್ತು. ಹಾಗಾಗಿ ಮಿ. ತ್ರಿಯಾನಾರ ಮೈದೊಗಲು ಪ್ರೀತಮಸಿಂಗನದರಷ್ಟೇ ಕಂದು ಬಣ್ಣದ್ದಿತ್ತು; ಚಿಕ್ಕ ತಳತಳಿಸುವ ಕಪ್ಪು ಕಣ್ಣುಗಳೂ ಉದ್ದನ್ನ ಕರಿಗೂದಲೂ ಅದೇ ಕತೆ ಹೇಳುತ್ತಿದ್ದವು. ಸಂಶಯಾಸ್ಪದ ವಂಶದ ಜನರ ಸ್ವಭಾವವೇ ಹಾಗೋ ಏನೋ, ಇವರಿಗೂ ತಮ್ಮ ವಂಶದ ಜಂಬ ಹೇಳಿಕೊಂಡಷ್ಟೂ ತೃಪ್ತಿಯಿಲ್ಲ; ತಮ್ಮ ದೇಶದ ಹೊಗಳಿಕೆಯನ್ನೂ ಇತರ ದೇಶಗಳಿಗಿಂತ ಅದರ ಶ್ರೇಷ್ಠತ್ವವನ್ನೂ ಕೊಚ್ಚಿಕೊಂಡಷ್ಟೂ ಬೇಸರವಿಲ್ಲ. ಕರಿದೊಗಲಿನ ಜನರನ್ನು ‘ ನಿಗ್ರ ’ ಜನರೆಂದು ತಿರಸ್ಕಾರದಿಂದ ಕರೆಯುತ್ತಿದ್ದರವರು. ಇಲ್ಲಿ ಕಂಡದ್ದನ್ನೆಲ್ಲ ಟೀಕಿಸುತ್ತಲೇ ಇದ್ದರು. ಈ ಭೂಮಿಯ ನಿರ್ಜಲ ಬಂಜರುತನವನ್ನು ನೋಡಿ ಅವರಿಗೇನೋ ತಾಮಸ ಸಮಾಧಾನವೆನಿಸುತ್ತಿರಬೇಕು. ಅದೇ ಅವರು ಮೇಲಿಂದ ಮೇಲೆ ಸಂತೋಷದಿಂದ ಕೈಕೈಹಿಸುಕಿಕೊಳ್ಳುತ್ತಿದ್ದರು. ಇಂಗ್ಲೀಷ ಜನರ ಪಕ್ಷ ವಹಿಸಿದಾಕ್ಷಣ ತಮ್ಮ ತೊಗಲಿನ ಬಣ್ಣವನ್ನೂ ಕಣ್ಣಿನ ಛಾಯೆಯನ್ನೂ ಬದಲಿಸಿಕೊಳ್ಳಬಹುದೆಂದು ನಂಬಿದ್ದರೋ ಏನೊ.

ಪ್ರೀತಮಸಿಂಗ ಹಿಂದೆ ತೋಫುಖಾನೆಯಲ್ಲಿ ಅಧಿಕಾರಿಯಾಗಿದ್ದವನು. ಈ ಮಿ. ತ್ರಿಯಾನಾ ಎಲ್ಲಿ ಹುಟ್ಟಿರಬಹುದು ಎಂದವನು ಮನಸ್ಸಿನಲ್ಲೇ ವಿಚಾರಿಸುತ್ತಿದ್ದ. ಬಹುಶಃ ಇಷ್ಟೇ ನೀಲವಾದ ಆಕಾಶದ ಕೆಳಗೆ, ಇದಕ್ಕಿಂತಲೂ ಉಷ್ಣವಾದ

---

ಜಾಗತಿಕ ಕಥಾಸ್ಪರ್ಧೆಯ ಅಂಗವಾಗಿ ಭಾರತದಲ್ಲಿ ನಡೆದ ಭಾರತೀಯ ಹಾಗು ಇಂಗ್ಲೀಷ ಭಾಷೆಗಳ ಕಥೆಗಳಲ್ಲಿ ರೂ. ೧೫೦೦ ಪ್ರಥಮ ಬಹುಮಾನ ಪಡೆದ ಈ ಕಥೆಯನ್ನು ಬರೆದ ಶ್ರೀಮತಿ ದಲಾಲರು ೧೯೨೦ ರಲ್ಲಿ ಜನ್ಮವೆತ್ತಿದರು. ಭಾರತದ ಅಸಿಸ್ಟಂಟ ಸರ್ವೇಯರ ಜನರಲ್ಲರಾದ ಮೇಜರ ಜಿ. ಎ. ಎಫ್. ದಲಾಲರನ್ನು ೧೯೪೩ ರಲ್ಲಿ ಮದುವೆಯಾದ ಇವರು ಮೂರು ಮಕ್ಕಳ ತಾಯಿ. ಕಥೆ ಬರೆಯುವುದಲ್ಲದೆ ಓದುವುದು ಮತ್ತು ಚದುರಂಗದಾಟ ಅವರಿಗೆ ಪ್ರಿಯವಾಗಿವೆ.

ಹವೆಯಲ್ಲಿ ಹುಟ್ಟಿರಬೇಕು. ಆದರೆ ಅವನು ಶಿಷ್ಟಾಚಾರ ಬಲ್ಲವ. ಆದ್ದರಿಂದ ಅವನ ನಡವಳಿಕೆ ಯಾವಾಗಲೂ ಸರಿಯಾಗಿಯೇ ಇರುತ್ತಿತ್ತು. ಒಂದೊಂದು ಸಲ ಮಾತ್ರ ಅವನಿಗೂ ತುಸು ಮೋಜೆನಿಸದೆ ಇಲ್ಲ.

ಆ ದೊಡ್ಡ ಕಾರು ದಾರಿ ಬಿಟ್ಟು ಸರಿದು ಒಂದು ಭಗ್ನಾವಶೇಷದಂತೆ ತೋರುವ ಸ್ಥಳಕ್ಕೆ ಹೋಯಿತು. ಅದೊಂದು ಹಳೇ ನಾದುರಸ್ತ ಕೋಟೆ. ಅಲ್ಲಿ ಬಿಸಿಲಜಳದಿಂದ ರಕ್ಷಣೆಯಲ್ಲದೆ ಸ್ವಲ್ಪ ತಂಪು ಕೂಡ ಇತ್ತು.

ಅವರು ಕೃತಜ್ಞತೆಯಿಂದ ಕಾಲು ನೀಡಿ ಕಾರಿನಿಂದ ಹೊರಬಿದ್ದರು. ಹುಡುಗಿ ತೋಳುಗಳನ್ನು ತಲೆ ಮೇಲೆತ್ತಿ ಬೆಕ್ಕಿನಂತೆ ಆಕಳಿಸಿದಳು. ಮಿ. ತ್ರಿಯಾನಾ ಅವರು ಅವಳ ಕಡೆ ದಿಟ್ಟಿಸುತ್ತ ತುಟಿಗಳನ್ನು ನೆಕ್ಕಿಕೊಂಡು ಕೈನೀಡಿ ಅವಳ ಬರಿ ತೋಳನ್ನು ಹಿಡಿದರು.

'ಹೆಲೆನ್, ನೀನು ನೆರಳಲ್ಲಿ ನಿಲ್ಲು. ನಿನಗೆ ಬಿಸಿಲು ಹೊಡೆತ ಬಿದ್ದರೇನು ಗತಿ ? '' ಎಂದು ಅವಳ ತೋಳುಗಳನ್ನು ವಿಲಾಸದಿಂದ ಒತ್ತಿದರು.

ಹುಡುಗಿ ಮೆಲ್ಲಗೆ ಅವರ ಕೈಯಿಂದ ಬಿಡಿಸಿಕೊಂಡು ಇನ್ನೊಬ್ಬಳ ಹಿಂದೆ ನಡೆದಳು. ಅವಳಿಗೆ ಮಿ. ತ್ರಿಯಾನಾರನ್ನು ಕಂಡರೆ ಸೇರಿಕೆಯಿದ್ದಿಲ್ಲ. ಅವರ ಸೋದರಿ ಶ್ರೀಮತಿ ಜಾರ್ಜನಳ ಸಂಗಡಿಗಳಾಗಿರಲು ಆಕೆ ಒಪ್ಪಿದ್ದಳು. ಅದರಲ್ಲಿ ತನಗೆ ಮೆಚ್ಚದ ಬೇರೆ ಎಷ್ಟೋ ಸಂಗತಿಗಳೂ ಸೇರಿರಬಹುದೆಂದು ಅವಳಿಗೆ ಮೊದಲು ಗೊತ್ತಿರಲಿಲ್ಲ. ಆದರೆ ಈಗ ಅದನ್ನೆಲ್ಲ ಚಿಂತಿಸುವ ಕಾಲ ಮೀರಿ ಹೋಗಿತ್ತು.



ಅವರ ಕಾರನ್ನು ಸ್ವಲ್ಪ ದೂರದಲ್ಲಿ ಬೆಂಬತ್ತಿದ್ದ ಒಂದು ಸ್ಟೇಶನ್ ವ್ಯಾಗನ್ ಗಾಡಿ ಈಗ ನಿಂತಿತು. ಅದರಲ್ಲಿದ್ದ ಇಬ್ಬರು ಸೇವಕರು ಕಾರಿನಿಂದ ಬುಟ್ಟಿಗಳನ್ನೂ ರಗ್ಗುಗಳನ್ನೂ ಇಳಿಸತೊಡಗಿದರು. ಅವರು ಕುಶಲ ಸೇವಕಸಹಜವಾದ ಚಮತ್ಕಾರದಿಂದ ಎಲ್ಲವನ್ನೂ ತಂದು ನಿರಾತಂಕವಾಗಿ ಹರಡಿದರು.

ಈ ವರೆಗೂ ತುಟಿ ಪಿಟ್ಟೆನ್ನದ ಶ್ರೀಮತಿ ಜಾರ್ಜನ್ನಳು ಆಹಾರವನ್ನು ಹಸಿದ ಕಣ್ಣುಗಳಿಂದ ನೋಡಿ ಆತುರದಿಂದ ತನ್ನ ಒರಟು ಕೈಚಾಚಿ ಸ್ಯಾಂಡ್-ವಿಚ್ಚುಗಳನ್ನು ಬಾಯಲ್ಲಿ ತುರುಕಿಕೊಂಡಳು.

ಹೆಲೆನ್ ಅವಳ ಕಡೆ ದಿಟ್ಟಿಸಿದಳು. ಆ ನೋಟದಲ್ಲಿ ಕನಿಕರವೂ ಅಸಹ್ಯವೂ ಬೆರತಿದ್ದವು. ಪ್ರೀತಮಸಿಂಗನು ತುಸು ದೂರದಲ್ಲಿ ನಿಂತಿದ್ದನು. ತೆರೆಕೊರಳಿನ ನೀಲಿ ಶರ್ಟಿನಲ್ಲಿ ಅವನು ನಿರ್ವಿಕಾ-ರನಾಗಿ ಕಾಣುತ್ತಿದ್ದನು. ಅವನ ಮೋರೆಯ ವಿರಕ್ತ ಚರ್ಯೆಯು ಅವನಿಗೂ ಉಳಿದವರಿಗೂ ನಡುವೆ ಒಂದು ಅಭೇದ್ಯ ಗೋಡೆಯನ್ನು ನಿಲ್ಲಿಸಿತ್ತು.

ಕಾರಿನಲ್ಲಿ ಉದ್ದಕ್ಕೂ ಮಿ. ತ್ರಿಯಾನಾ ಈ ಹಿಂದೀಯುನಿಗೆ ಪದೇ ಪದೇ ಸವಾಲು ಹಾಕುತ್ತಲೇ ಇದ್ದರು. ಈ ದೇಶದ ಜನರು, ಅವರ ನಡವಳಿ ನಂಬಿಕೆಗಳು ಎಲ್ಲವನ್ನೂ ಕುರಿತು ಅವನನ್ನು ಪ್ರಶ್ನಿಸಿದ್ದರು. ಆದರೆ ಪ್ರೀತಮಸಿಂಗನು ಲೇಶವೂ ಗಾಬರಿಯಾಗದೆ ಸೌಜನ್ಯದಿಂದಲೇ ಇದ್ದನು. ಹೆಲೆನಳು ಅವನ ಬಗ್ಗೆ ಕೌತುಕಪಟ್ಟಿದ್ದಳು. ಅವನು ನಿಜವಾಗಿ ಅಷ್ಟು ನಿರ್ಭಯನಾಗಿದ್ದನೋ ಅಥವಾ ಇದು ಬರಿ ಸೋಗೋ ? ಅವನ ನಿರ್ವಿಕಾರತೆಯೇ ಮಿ. ತ್ರಿಯಾನಾರನ್ನು ಮತ್ತೂ ಮತ್ತೂ ಮಾತಾಡಿಸುತ್ತಿತ್ತು.

'ಎಂಥ ಉತ್ತಮ ದೇಶ!' ಮಿ. ತ್ರಿಯಾನಾ ವ್ಯಂಗ್ಯವಾಗಿ ಗಳಹಿದರು. 'ಸ್ವಾತಂತ್ರ್ಯಕ್ಕೆ ತುಂಬಾ ಅರ್ಹವಾಗಿದೆ ಇದು. ಈಗ ನಿನ್ನ ದೇಶಬಾಂಧವರು ಪರಕೀಯರ ಹಸ್ತಕ್ಷೇಪವಿಲ್ಲದೆ ಉಪವಾಸಬಿದ್ದು ನಿಶ್ಚಿಂತೆಯಿಂದ ಸಾಯಲಡ್ಡಿಯಿಲ್ಲ.'

ಪ್ರೀತಮ ಮೌನ. ಮಿ. ತ್ರಿಯಾನಾರಲ್ಲಿ ತೀಕ್ಷ್ಣ ಕ್ರೋಧ ಉಕ್ಕಿತು. ಈ ನಿಶ್ಚಲ ಮುಖದಿಂದ ಏನಾದರೊಂದು ಪ್ರತಿಕ್ರಿಯೆಯನ್ನು ಹೊರಡಿಸಲೇ ಬೇಕು, ಈ ನಯವಾದ ಚರ್ಮ ಕ್ರೋಧದಿಂದ ಕೆಂಪೇರುವುದನ್ನು ಕಾಣಬೇಕು, ಈ ಕಣ್ಣುಗಳು ಬೆಂಕಿ ಕಾರುವಂತೆ ಮಾಡಲೇಬೇಕೆಂದು ಅವರು ಹಟತೊಟ್ಟಂತೆ ಕಂಡಿತು. ಅವರು ಒಣಗಿ ಒಡ-

ಕೊಡಕಾಗಿ ಹಸಿದಿದ್ದ ಭೂಮಿಯ ಕಡೆ ಕೈಬೀಸಿದರು.

"ನೆರೆಹಾವಳಿಗಳು, ಬರಗಾಲಗಳು, ಲಂಚಗುಳಿತನ, ದುರಾಶೆ, ಜನಸಂಖ್ಯೆಯ ಒತ್ತಡ- ಇದಕ್ಕಿಂತ ಹೆಚ್ಚೇನು ಬೇಕು ನಿಮಗೆ? ನಾವಿಲ್ಲಿರದ ಹೊರಟು ಹೋದ ಮೇಲೆ ಇಲ್ಲಿ ಶಿಸ್ತೆಂಬುದೇ ಉಳಿದಿಲ್ಲ. ಅಧಿಕಾರದಿಂದ ತಲೆಕೆಟ್ಟ ರಾಜಕಾರಣಿಗಳ ನಿರರ್ಥಕ ಭಾಷಣಗಳ ಹೊರತು ಏನೇನೂ ಇಲ್ಲ. ಇಂಥ ಹೊಲಸು ರಾಶಿಯಲ್ಲಿರುವ ನೀವು-ನೀವು ಭದ್ರತಾ ಮಂಡಲಗಳಲ್ಲಿ ಕೂತು ಜಗತ್ತಿಗೆ ಬುದ್ಧಿ ಹೇಳಲು ಹೊರಟಿದ್ದೀರಲ್ಲಾ, ಏನು ಸೊಕ್ಕು! ಮುಂದಿಗೆ ಇದನ್ನು ಮಾಡಬೇಕು, ಹೀಗೆ ಮಾಡಬೇಕು ಎಂದು ಉಪದೇಶ ಕೊಡುವ ನಿಮ್ಮ ಅಹಂಕಾರಕ್ಕೆ ಏನನ್ನಬೇಕು!''

ಒಂದು ಕ್ಷಣ, ಪ್ರೀತಮ ಸಿಂಗನು ಮಿ. ತ್ರಿಯಾನಾರ ಮೇಲೆ ಏರಿ ಹೋಗಿ ಅವರ ಕೊಬ್ಬಿದ ಗಂಟಲನ್ನು ತನ್ನ ನೀಳವಾದ ಬೆರಳುಗಳಿಂದ ಹಿಸುಕಿಬಿಡುವನೋ ಅನಿಸಿತು. ಆದರೆ ಮರು ಕ್ಷಣದಲ್ಲಿಯೇ ಅವನು ಬಿಗಿದ ಮುಷ್ಟಿಯನ್ನು ಸಡಿಲಿಸಿ, ನಿರ್ದುಷ್ಟ ಇಂಗ್ಲೀಷಿನಲ್ಲಿ ಹೇಳಿದನು: "ಕತ್ತಲಾಗುವದರೊಳಗೆ ನಾವು ಡಾಕ ಬಂಗಲೆ ಸೇರಬೇಕಾದರೆ ಬೇಗ ಹೊರಡಬೇಕೆಂದು ನನಗೆ ತೋರುತ್ತದೆ."

ಶ್ರೀಮತಿ ಜಾರ್ಡನಳು ಒಮ್ಮೆ ಮಿ. ತ್ರಿಯಾನಾರ ಮುಖವನ್ನು, ಮತ್ತೊಮ್ಮೆ ಪ್ರೀತಮನ ಮುಖವನ್ನು ನೋಡಿದಳು. ಅವಳು ಸಂತೈಸುವ ದನಿಯಿಂದ, ತನ್ನ ಕುರಿಮುಖದ ಗಾಬರಿಯನ್ನು ಮರೆಸುತ್ತ ಹೇಳಿದಳು. "ಈ ಕೋಟೆಯ ಬಗ್ಗೆ ಏನಾದರೂ ಸೋಜಿಗದ ಸಂಗತಿ ಹೇಳುವಿಯಾ, ಮಿ. ಪ್ರೀತಮ್?''

ಪ್ರೀತಮ ಅವಳ ಕಡೆ ಹೊರಳಿ ನಸುನಕ್ಕನು. 'ಇದೊಂದು ಹಳೇ ಕೋಟೆ ಮಾತ್ರ. ಆದರೆ ಇದರ ಸುತ್ತಮುತ್ತಲ ಹಳ್ಳಿಗಳ ಬಗ್ಗೆ ಸೋಜಿಗದ ಸಂಗತಿಯೊಂದಿದೆ. ಇಲ್ಲಿ ಹಿಂದೆ ಮಳೆದೇವರ ಸಂತೋಷಕ್ಕಾಗಿ ನರಬಲಿ ಕೊಡುತ್ತಿದ್ದರು. ಈಗ ಕಾಯದೆಯಿಂದ ಅದನ್ನು ಪ್ರತಿಬಂಧಿಸಲಾಗಿದೆ ಅನ್ನಿ. ಆದರೆ ಇಂದಿಗೂ ನರಬಲಿ ಕೊಡುತ್ತಿದ್ದರೆ ಹೀಗೆ ಬರಗಾಲ ಬರುತ್ತಿದ್ದಿಲ್ಲವೆಂದು ನಂಬುವ ಜನರು ಇಲ್ಲಿ ಹಲಕೆಲವರಿದ್ದಾರೆ.'

ಶ್ರೀಮತಿ ಜಾರ್ಡನ್ನಳು ಅರ್ಧ ಉದ್ವೇಗದಿಂದ, ಅರ್ಧ ಜುಗುಪ್ಸೆಯಿಂದ ಒಮ್ಮೆ ಮೆಲ್ಲಗೆ ಚೀರಿದಳು:

'ಇಲ್ಲಿ ಮನುಷ್ಯರನ್ನು ನಿಜವಾಗಿ ಬಲಿಕೊಡುತ್ತಿದ್ದರು ಅಂತೀಯಾ?'

'ಹೇಗೆ ಕೊಡುತ್ತಿದ್ದರಪ್ಪಾ!' ಎಂದು ಹೆಲೆನ್ ಪಿಸುಗುಟ್ಟಿದಳು.

ಕಾರಿನ ಸ್ಟೇರಿಂಗಿನ ಹಿಂದೆ ಕುಳಿತುಕೊಳ್ಳುತ್ತ ಪ್ರೀತಮಸಿಂಗನು ಭುಜ ಹಾರಿಸಿ ತನಗೇನೂ ಅಷ್ಟು ಆಶ್ಚರ್ಯವೆನಿಸಿಲ್ಲೆಂದು ವ್ಯಕ್ತಪಡಿಸಿದನು.

'ಬರೇ ದೃಷ್ಟಿಭೇದ ಅಷ್ಟೇ- ನೂರಾರು ಜನರ ಜೀವ ಉಳಿಸಲು ಒಬ್ಬನ ಪ್ರಾಣಬಲಿ ಕೊಡುವುದಾಗಿತ್ತು ಇದು. ಹಾಗೆ ಕೇಳಿದರೆ, ಯಾವ ದ್ವೇಷವೂ ಇಲ್ಲದೆ ಪರದೇಶಗಳ ಜನರನ್ನು ಕೊಲ್ಲಲಿಕ್ಕೆ ತನ್ನ ದೇಶದ ಜನರನ್ನು ಕಳಿಸುವುದು ಶುದ್ಧ ಅನಾಗರಿಕವೆಂದು ಇಲ್ಲಿಯ ಜನರಿಗೆ ಅನಿಸುತ್ತದೆ. ಮೇಲಾಗಿ ಇದು ಪುರಾತನ ಕಾಲದಲ್ಲಿ ನಡೆಯುತ್ತಿದ್ದ ಸಂಗತಿ.'

ಮಿ. ತ್ರಿಯಾನಾರಿಗೆ ರೋಷ ತಡೆಯಲಿಲ್ಲ. 'ಏನು? ಈ ನಿರಕ್ಷರಕುಕ್ಷಿ ಅನಾಗರಿಕ ಜನರ ಅಸಹ್ಯ ಆಚಾರವನ್ನು ಆಧುನಿಕ ಯುದ್ಧದ ಸುಯೋಜಿತ ಸೂತ್ರಗಳಿಗೆ ಹೋಲಿಸುತ್ತೀಯಾ?' ಎಂದರವರು.

ಮತ್ತೆ ಅದೇ ಮಾತು, ಎಂದು ಕೊಂಡ ಪ್ರೀತಮಸಿಂಗ ಬೇಸರಿಕೆಯಿಂದ. ಕಾರು ಸರಳವಾಗಿ ಮುಂದೆ ಸಾಗಿತು. ಈ ಕಾರು ಎಷ್ಟು ಚೆನ್ನಾಗಿದೆ. ಇಷ್ಟು ಒಳ್ಳೇ ಕಾರನ್ನು ನಡೆಸುವ ಯೋಗ ತನಗೆ ಇನ್ನೊಮ್ಮೆ ಬರುವದೋ ಇಲ್ಲವೋ. ಅವನು ಗಂಭೀರವಾಗಿ ರಸ್ತೆಗುಂಟ ಸಾಗಿದನು. ಈ ಕೊಬ್ಬು ತುಂಬಿದ ಒರಟು ಮನುಷ್ಯ ತನ್ನ ಪತ್ರಿಕೆಯಲ್ಲಿ ಏನೇನು ಬರೆಯುವನೋ ದೇವರಿಗೇ ಗೊತ್ತು!

ಸುತ್ತಣ ಹಳ್ಳಿಗಾಡಿನಲ್ಲಿ ಹಸುರಿನ ಹೆಸರೇ ಇಲ್ಲದಂತಿತ್ತು. ಅಲ್ಲೊಂದು ಇಲ್ಲೊಂದು ಒಣಗಿದ ಮರವು ಬೋಳು ಟೊಂಗೆಗಳನ್ನು ನೀಲಾಕಾಶದಲ್ಲಿ ಚಾಚಿ ನಿಂತಿತ್ತು. ಅಲ್ಲಲ್ಲಿ ಗುಡಿಸಲುಗಳ ಗುಂಪುಗಳು ನಿರ್ಜನವಾಗಿ ಹಬ್ಬಿದ್ದವು. ಮನುಷ್ಯಮಾತ್ರನು ಕಣ್ಣಿಗೆ ಬೀಳುತ್ತಿರಲಿಲ್ಲ. ಜೀವವುಳ್ಳ ಯಾವ ಪದಾರ್ಥವೂ ಈ ದಾರಿಯಲ್ಲಿ ಎಂದೂ ಹೋಗಿದ್ದಿಲ್ಲವೋ ಅನಿಸುತ್ತಿತ್ತು.

ಕೊನೆಗೆ ಅವರು ಡಾಕ ಬಂಗಲೆ ಸೇರಿದರು. ಒಬ್ಬ ಮುದುಕನು ತೂಕಡಿಸುತ್ತ ವರಾಂಡಕ್ಕೆ ಬಂದು ದೊಡ್ಡ ಕಾರನ್ನೂ ಅದರಲ್ಲಿದ್ದವರನ್ನೂ ಆಶ್ಚರ್ಯದಿಂದ ನೋಡುತ್ತ ನಿಂತನು. ಅದೊಂದು ಸಾಮಾನ್ಯಬಂಗಲೆ. ಕುರ್ಚಿಮೇಜುಗಳೆಲ್ಲ ಧೂಳಿಡಿದು ಜೇಡರ ಬಲೆಗಳಿಂದ ಹೊಲಸಾಗಿ ಹೋಗಿದ್ದವು. ಮಂಚಗಳ ಸ್ಪ್ರಿಂಗುಗಳು ಮುರಿದುಹೋಗಿ ಕಿರಿಗುಟ್ಟುತ್ತಿದ್ದವು. ಆದರೆ ಅಷ್ಟರಲ್ಲಿ ಸ್ಟೇಶನ್ ವ್ಯಾಗನ್ ಬಂದು ತಲುಪಿದ್ದರಿಂದ ಆಳುಗಳು ಫುರ್ತಿಯ ಮಂಚಗಳನ್ನೂ ಹಾಸಿಗೆಗಳನ್ನೂ ತಂದು

ಕೂಡ್ರಿಸಿ ಮೇಲೆ ಸ್ವಚ್ಛವಾದ ಅರಿವೆಗಳನ್ನು ಹಾಸಿದರು. ಅವರು ಸಂಜೆಯ ಊಟದ ಸನ್ನಾಹದಲ್ಲಿ ತೊಡಗಿದರು.

ದೀಪಗಳ ಬೆಳಕು ಮತ್ತು ಅಪೂರ್ವವಾದ ಸದ್ದುಗದಿಬಿಡಿಗಳಿಂದ ಆಕರ್ಷಣೆಗೊಂಡಂತೆ ಕೆಲ ಹಳ್ಳಿಗರು ಬಂದು ಬಂಗಲೆಯುಆವಾರದಲ್ಲಿ ಕಾಣಿಸಿಕೊಂಡರು. ಅವರ ಮೈಯೆಲುಬುಗಳು ಹೊರ ನೀಡಿದ್ದವು. ಅವರನ್ನು ಮೊದಲು ನೋಡಿದವಳು ಹೆಲೆನ್. ಅವಳು ಚಕಿತಳಾಗಿ ಕೂಗಿದ್ದರಿಂದ ಉಳಿದವರೂ ಹೊರಗೆ ಬಂದರು. ಕೆಲ ಚಿಕ್ಕ ಮಕ್ಕಳೂ ಬಂದಿದ್ದರು. ಅವರ ಕಡ್ಡಿಯಂಥ ಕೈಕಾಲು, ಡೊಳ್ಳಿನಂಥ ಹೊಟ್ಟೆ ಯಾರಿಗಾದರೂ ಕನಿಕರ ಬರುವಂತಿದ್ದವು. ಅವರು ಶೂನ್ಯದೃಷ್ಟಿಯಿಂದ ದಿಟ್ಟಿಸುವಾಗ ಮುದುರಿದ ಮುಖಗಳಲ್ಲಿ ಕಣ್ಣುಗಳು ಹಲಸಿನ ಬೀಜಗಳಂತೆ ಕಾಣುತ್ತಿದ್ದವು.



'ಅಯ್ಯೋ, ಪಾಪ! ಪಾಪ!' ಹೆಲೆನ್ ಕನಿಕರದಿಂದ ನುಡಿದಳು.

ಮಿ. ತ್ರಿಯಾನಾರು ಹಿಡಿಸಲಾರದ ಹಿಗ್ಗಿನಿಂದ ಕೈಕೈ ಹಿಸುಕಿಕೊಂಡರು. "ನಾಳೆ ನನಗೆ ಕೆಲ ಅದ್ಭುತ ಚಿತ್ರಗಳು ಸಿಗುವುದು ಖಂಡಿತ."

ಅವರು ಪ್ರೀತಮನ ಕಡೆ ತಿರುಗಿದರು. 'ನಾಳೆ ಅವರ ಚಿತ್ರಗಳನ್ನು ತೆಗೆದುಕೊಳ್ಳುವೆನೆಂದು ಅವರಿಗೆ ಹೇಳು. ತೀರ ಬಡಕಲಾದ ಹೆಂಗಸರನ್ನೂ ಮಕ್ಕಳನ್ನೂ ಕರೆತರಲಿಕ್ಕೆ ಹೇಳು. ನಾನು ಅವರಿಗೆ ಬಕ್ಷೀಸು ಕೊಡುವೆನೆಂದೂ ಹೇಳು.'

ಬಂದಿದ್ದ ಹಳ್ಳಿಗರಲ್ಲಿ ಹಿರಿಯನಾದವನಿಗೆ ಸಿಂಗ ಸಂಕ್ಷೇಪವಾಗಿ ಏನೋ ಹೇಳಿದ. ಆ ಮುದುಕ ಮಿ. ತ್ರಿಯಾನಾರ ಕಡೆ ತಿರುಗಿ ಅವರನ್ನು ಬಹಳ ಹೊತ್ತು ದಿಟ್ಟಿಸಿದ. ಮಿ. ತ್ರಿಯಾನಾರಿಗೆ ಹೇಗೋ ಹೇಗೋ ಅನಿಸಿ ನಿಂತಲ್ಲೇ ಮಿಡುಕತೊಡಗಿದರು.

'ಅವನಿಗೇನು ಬಡಿದಿದೆಯಂತೆ? ಹೇಳಿದ್ದು ತಿಳಿಯಲಿಲ್ಲವೆ?'

ಮುದುಕನು ಅವರ ಮುಖದಿಂದ ಪ್ರೀತಮನ ಕಡೆ ಕಣ್ಣು ಹೊರಳಿಸಿ ಏನನ್ನೋ ಗುಣುಗುಟ್ಟಿದನು.

ಪ್ರೀತಮು ಹೇಳಿದ: 'ನಾಳೆ ಸೂರ್ಯೋದಯಕ್ಕೆ ಅವರ ಗುಡಿಸಲುಗಳ ಕಡೆ ನೀವೇ ಹೋಗಬೇಕಂತೆ. ಅಂದರೆ ನಿಮಗೆ ಬೇಕಾದ್ದನ್ನು ಅವರು ತೋರಿಸುವರು. ಅಲ್ಲದೆ ಮತ್ತೇನಾದರೂ ಕೌತುಕದ ಸಂಗತಿ ನೋಡಲು ನಿಮಗೆ ಮನಸಿದೆಯೇ ಎಂದು ಕೇಳುತ್ತಾರೆ.'

ಮಿ. ತ್ರಿಯಾನಾ ಮೋಜಿನಿಂದ, 'ಹೌದು ಹೌದು, ಒಂದು ನರಬಲಿ ನೋಡುವ ಮನಸಾಗಿದೆಯೆಂದು ತಿಳಿಸು' ಎಂದು ಗಹಗಹಿಸಿ ನಕ್ಕರು.

ಪ್ರೀತಮು ಸಿಂಗನು ಮೌನದಿಂದ ಅವರ ಕಡೆ ದಿಟ್ಟಿಸಿದನು. ಮಿ. ತ್ರಿಯನಾರ ಅಟ್ಟಹಾಸ ಅಲ್ಲಿಗೆ ಸ್ತಬ್ಧವಾಗಿಹೋಯಿತು. ಹಳ್ಳಿಗರು ಒಬ್ಬೊಬ್ಬರಾಗಿ ಕತ್ತಲೆಯಲ್ಲಿ ಅದೃಶ್ಯರಾದರು.

'ಭೋಜನ ಸಿದ್ಧವಾಗಿತ್ತು. ಈ ಚಿಕ್ಕ ಮಂಡಲಿಯು ಸುಗ್ರಾಸ ಭೋಜನಕ್ಕೆ ಕುಳಿತಿತು. ಎಲ್ಲವೂ ಡಬ್ಬಗಳಲ್ಲಿ ಸಿದ್ಧವಾಗಿ ಬಂದದ್ದು. ಕೆನೆ ಮತ್ತು ಸಕ್ಕರೆ ಕೂಡಿಸಿದ ಕಾಫಿಯಿಂದ ಭೋಜನ ಮುಕ್ತಾಯವಾಯಿತು.

ಹೆಲೆನಳು ಊಟದೊಡನೆ ಆಟವಾಡುತ್ತ ಕಣ್ಣೆತ್ತಿ ನೋಡಿದಳು. ಪ್ರೀತಮುಸಿಂಗನು ಊಟದ ಶಾಸ್ತ್ರ ಕೂಡ ಮಾಡಿರಲಿಲ್ಲ. ಅವನು ಕಾಫಿಯನ್ನಷ್ಟು ಸವಿಯುತ್ತಿದ್ದ. ಅವನ ದೃಷ್ಟಿ ಅವರೆಲ್ಲರ ತಲೆಗಳಿಂದಾಚೆಗೆ ವಿರಕ್ತಿಯಿಂದ ನೋಡುತ್ತಿತ್ತು. ಶ್ರೀಮತಿ ಜಾರ್ಜನ್ನಳು ಕೂಡ ಆಹಾರವನ್ನು ಏನೋ ಒಂದು ತರಹವಾಗಿ ಕಡಿಯುತ್ತಿದ್ದಳು. ಅವಳು ಪುನಃಪುನಃ ಕತ್ತಲೆಯಲ್ಲಿ ಕಣ್ಣು ಚುಚ್ಚುತ್ತಿದ್ದಳು. ಆ ಎಲಬು ನೀಡಿದ ಮೂತಿಯೊಳಗಿನ ಕಪ್ಪು ಕಣ್ಣುಗಳೇನಾದರೂ ಮತ್ತೆ ಪ್ರತ್ಯಕ್ಷವಾಗುವವೋ ಎಂದು ಅವಳು ಅಂಜಿದಂತಿತ್ತು.

ಆದರೆ ಮಿ. ತ್ರಿಯಾನಾ ಮಾತ್ರ ಆಹಾರವನ್ನು ಸವಿಸವಿದು ಉಣ್ಣುತ್ತಿದ್ದರು. ಅವರು ಜಗ್ಗಿ ಊಟ ಹೊಡೆದರು. ನಡುನಡುವೆ ಹಿಮುಶುಭ್ರವಾದ ಕರವಸ್ತ್ರದಿಂದ ತುಟಿಗಳನ್ನು ಒರಸಿಕೊಳ್ಳುತ್ತ ಅವರು ಹೆಚ್ಚುಹೆಚ್ಚು ದೊಡ್ಡ ತುತ್ತುಗಳನ್ನು ಧ್ವಂಸ ಮಾಡುತ್ತಿದ್ದರು.

ಮರುದಿನ ನಸುಕಿಯಿಂದಲೇ ಬೆಳಕು ಹರಿಯಿತು. ಬಲಗಡೆಗೆ ದೂರದಲ್ಲಿ ಬತ್ತಿದ ಬಾವಿಯ ಬಳಿ ಕೆಲ ಗಿಡಮರಗಳಿದ್ದವು. ಅದೊಂದೇ ಹಸಿರು ಭಾಗವಾಗಿದ್ದುದರಿಂದ ಕಣ್ಣುಗಳು ಮತ್ತೆ ಮತ್ತೆ ಅತ್ತ ಕಡೆಗೇ ಸುಳಿಯುತ್ತಿದ್ದವು. ಮಿ. ತ್ರಿಯಾನಾ ತಮ್ಮ ಕೆಮರಾ ಸರಿಪಡಿಸಿಕೊಂಡು ಕೊರಳಿಗೇರಿಸಿಕೊಂಡರು.

'ಬಾರಯ್ಯ ಪ್ರೀತಮ್. ಹೊರಡೋಣ ಇನ್ನು' ಎಂದು ಅವರು ಕರೆದರು.

ಪ್ರೀತಮನು ನಿರ್ವಿಕಾರವಾಗಿ, 'ನಾನು ಬರುವುದಿಲ್ಲ,' ಎಂದ.

ಮಿ. ತ್ರಿಯಾನಾರು ತಮ್ಮ ನಾಡಿ ಒಡೆದು ರಕ್ತ ಸಿಡಿಯುವುದೋ ಎಂಬಂತೆ ಅವನನ್ನು ನೋಡಿದರು.

'ಇದೆಲ್ಲ ನಡೆಯುವುದಿಲ್ಲ ನನ್ನ ಹತ್ತಿರ. ಬರಲಿಕ್ಕೇ ದುಡ್ಡು ಕೊಡುವುದಲ್ಲವೇ ನಿನಗೆ?' ಎಂದವರು ಗರ್ಜಿಸಿದರು.

'ಅಲ್ಲ' ಎಂದನಾ ತರುಣ ಭಾರತೀಯ. 'ನಿಮಗೆ ಊರು ತೋರಿಸಲಿಕ್ಕೆ ನನಗೆ ಹಣ ಕೊಡುತ್ತೀರಿ. ಬೇರೆ ಯಾವುದಕ್ಕೂ ಅಲ್ಲ.' ಅವನ ದನಿಯಲ್ಲಿ ಉದ್ವೇಗವಿರಲಿಲ್ಲ.

ಮಿ. ತ್ರಿಯಾನಾರ ಬಾಯಿ ತೆರೆದದ್ದು ತೆರೆದಂತೆಯೇ ಇತ್ತು. ಅವರು ಕಾಯ್ದು ಕೆಂಡವಾದರು. ತಡೆದುಕೊಳ್ಳಲು ಅವರು ಪ್ರಯತ್ನಿಸುತ್ತಿದ್ದುದು ಎದ್ದು ಕಾಣುತ್ತಿತ್ತು. ಮರುಮಾತಿಲ್ಲದೆ ಅವರು ಹ್ಯಾಟನ್ನು ಹಾಕಿಕೊಂಡು ಹೊರಬಿದ್ದರು. ಸೂರ್ಯನು ತನ್ನ ಪ್ರಖರಕಿರಣಗಳಿಂದ ಅವರನ್ನು ಆಕ್ರಮಿಸಿದನು. ಆದರೆ ಅವರದನ್ನು ಲಕ್ಷಿಸಲೇ ಇಲ್ಲ. ಅವರ ಹೃದಯದಲ್ಲಿ ಕ್ರೋಧ, ದ್ವೇಷಗಳು ಕುದಿಯುತ್ತಿದ್ದವು. ನೆಲ ಏರುತಗ್ಗಾಗಿತ್ತು. ಹೊಲಗಳಲ್ಲಿ ಪೈರು ಒಣಗುತ್ತ ನಿಂತಿತ್ತು. ನದಿ ಎಂದೋ ಒಣಗಿ ತನ್ನ ಮಳಲು ತುಂಬಿದ ಶುಷ್ಕ ಹೃದಯವನ್ನು ತೋರಿಸುತ್ತಿತ್ತು. ಆಗಾಗ್ಗೆ ಎಡವುತ್ತ ಅವರು ಅಂತರಂಗದಲ್ಲೇ ಶಪಿಸುತ್ತ ನಡೆದರು. ಅವರ ಪೋಷಾಕು ಹಗುರವೇ ಆಗಿದ್ದರೂ ಈ ತಾಪಕ್ಕೆ ಅದು ಕೂಡ ಬೇಗೆಯನ್ನುಂಟುಮಾಡುತ್ತಿತ್ತು. ಬೆವರು ಒಸರಿ ಬಂದು ಅವರ ಕೋಟಿನಲ್ಲಿ ಒದ್ದೆ ಚಿತ್ತಾರಗಳನ್ನು ಬರೆಯಿತು. ಅವರು ತಮ್ಮ ಲಿವೆಂಡರ ವಾಸನೆಯ ಕರವಸ್ತ್ರವನ್ನು ಜೇಬಿನಿಂದ ತೆಗೆದು ಮುಖದ ಮೇಲೆ ಆಡಿಸಿದರು. ಅಷ್ಟರಲ್ಲಿ ಗುಡಿಸಲುಗಳು ಬಂದವು.






ಹೊರಗೆ, ಇಲ್ಲವೆ ಬಾಗಿಲ ಮುಂದೆ, ಗಂಡಸರೂ ಹೆಂಗಸರೂ ನಿಶ್ಚಲರಾಗಿ ಬಿದ್ದುಕೊಂಡಿದ್ದರು. ಅವರು ಮುದುಕರೋ ಯುವಕರೋ ಎಂದು ಒಮ್ಮೆ ನೋಡಿದ್ದರೆ ತಿಳಿಯುತ್ತಲೇ ಇರಲಿಲ್ಲ ಅಷ್ಟು ಮಟ್ಟಿಗೆ ಅವರ ಮುಖಗಳು ಒಣಗಿಹೋಗಿದ್ದವು. ಇವರು ಸಮೀಪಿಸಿದರೂ ಆ ಜನರು ಏಳಲು ಯತ್ನಿಸಲಿಲ್ಲ. ಅವರ ಕಣ್ಣುಗಳು ಮಾತ್ರ ಆ ನಿಶ್ಚಲ ಮುಖಗಳಲ್ಲಿ ಮಿ. ತ್ರಿಯಾನಾರ ಕಡೆ ತಿರುಗಿದ್ದವು.

ಮಿ. ತ್ರಿಯಾನಾ ಅವರು ಅತ್ಯಂತ ಪರಿಹಾಸದ ಮುಖಮುದ್ರೆಯನ್ನು ಧರಿಸಿದರು. ತಮಗೆ ಭಾರಿ ಅದ್ಭುತ ಚಿತ್ರಗಳು ಸಿಗುವವೆಂದು ಅವ ಸಂತುಷ್ಟರಾದರು. ಒಬ್ಬಳು ಎಳೆಹರೆಯದ ಹೆಂಗಸು ಬಿದ್ದುಕೊಂಡಿದ್ದಲ್ಲಿ ಅವರು ಹೋದರು. ಅವಳು ಅರೆಬತ್ತಲೆಯಾಗಿದ್ದಳು. ಅವಳ ಎದೆಯ ಮೇಲೊಂದು ಮಗುವಿತ್ತು. ಮಿ. ತ್ರಿಯಾನಾ

ಅವಳ ಮೇಲೆ ಬಾಗಿದರು. ಮಗು ಸತ್ತು ಹೋಗಿತ್ತು. ದೊರಕಲಾರದ ಗುಟುಕಿಗಾಗಿ ನಿರರ್ಥಕ ಪ್ರಾರ್ಥನೆ ಮಾಡುತ್ತಿರುವದೋ ಎಂಬಂತೆ ಅದರ ಬಾಯಿ ತೆರೆದೇ ಇತ್ತು. ಮಿ. ತ್ರಿಯಾನಾ ಅವರು ಇನ್ನಷ್ಟು ಬಗ್ಗಿ ಅವಳ ಬಡಕಲು ಹೆಗಲ ಮೇಲೆ ತಮ್ಮ ಕೊಬ್ಬಿದ ಕೈಯನ್ನಿಟ್ಟರು. ನೆರಳಿನಿಂದ ಬೆಳಕಿಗೆ ಅವಳನ್ನು ಸಾಗಿಸುವುದಷ್ಟೇ ಅವರ ಉದ್ದೇಶವಾಗಿತ್ತು. ಆದರೆ ಒಮ್ಮಿಂದೊಮ್ಮೆ ಗಾಳಿಯಲ್ಲಿ ವಿದ್ಯುತ್ ಸ್ತಂಭನವಾದಂತಾಯಿತು. ಬೆಪ್ಪಾಗಿ ಅವರು ತುಸು ಹಿಂದೆ ಸರಿದು ಸುತ್ತಲೂ ನೋಡಿದರು.

ಎಲ್ಲ ಗುಡಿಸಲುಗಳಿಂದಲೂ ಸ್ತ್ರೀ ಪುರುಷರು ದೆವ್ವಗಳಂತೆ ನಿಶ್ಶಬ್ದವಾಗಿ ಎದ್ದು ಹೊರಟದ್ದರು. ಗುಡಿಸಲುಗಳು ಓಣಿಯ ಮೂರೂ ಸುತ್ತಲೂ ಆಯತಾಕೃತಿಯಲ್ಲಿದ್ದವು. ಇವರೀಗ ಓಣಿಯ ಮುಕ್ತ ಪಾರ್ಶ್ವದಿಂದ ನುತ್ತಿಗೆ ಹಾಕಿದರು. ಅವರು ಭೀಕರ ಮೌನದಿಂದ ಮುನ್ನುಗ್ಗುತ್ತಿದ್ದರು. ಮಿ. ತ್ರಿಯಾನಾರವರು ತಮ್ಮ ಮಂತ್ರಮುಗ್ಧ ದೃಷ್ಟಿಯನ್ನು ಅನೇಕಾನೇಕ ಕರಾಳ ನಯನಗಳು ಸೆರೆಹಿಡಿದು ನಿಲ್ಲಿಸಿವೆಯೆಂದರಿತರು. ಆ ಕಣ್ಣುಗಳಲ್ಲಿ ನಿರ್ದಯವಾದ ಭಯಾನಕ ನಿಶ್ಚಯವಿದ್ದಂತೆ ಕಾಣಿಸಿತು. ಅವರೆಲ್ಲರೂ ಮೆಲ್ಲ ಮೆಲ್ಲಗೆ ಹತ್ತಿರ ಹತ್ತಿರ ಬಂದರು.

ಮಿ. ತ್ರಿಯಾನಾರ ಸ್ಥೂಲ ದೇಹದಲ್ಲೆಲ್ಲ ಭಯದ ವಿದ್ಯುತ್ತು ಸಂಚರಿಸಿತು. ಅವರು ಭಯಭ್ರಾಂತರಾಗಿ ಸುತ್ತಲೂ ನೋಡಿ ತಂತಾವೇ ಹಿಂಜರಿದರು. ಹಿಂದೆ ಸರಿಸರಿದು ಕೊನೆಗೆ ಅವರ ಬೆನ್ನು ಗುಡಿಸಲುಗಳಿಗೆ ತಗಲಿತು. ಈಗ ನಾಲ್ಕೂ ಸುತ್ತಲೂ ಆ ಕರಾಳ ನೇತ್ರಗಳು, ಕರಾಳ ಮುಖಗಳು ರಹಸ್ಯಮಯವಾಗಿ, ಪ್ರಚಂಡವಾಗಿ, ಏಕರೂಪವಾದ ಭಾವೋದ್ರೇಕದಿಂದ ತಮ್ಮನ್ನು ನಿಸ್ಸಹಾಯರಾಗಿ ಮಾಡುವಷ್ಟು ಸಮೀಪ ಬಂದಿದ್ದುದನ್ನು ಅವರು ಕಂಡರು.

ಈಗ ಮಿ. ತ್ರಿಯಾನಾರ ಮೂಗಿಗೆ ಅವರ ಮೈಯ ನಾತ ಕೂಡ ಬಡೆಯುತ್ತಿತ್ತು. ತಾವು ಆತ್ಮರಕ್ಷಣೆಗಾಗಿ ಕಿರಿಬೆರಳನ್ನೂ ಎತ್ತದೆ ಮೃತ್ಯುಮುಖದಲ್ಲಿ ಹೊಗುತ್ತಿರುವೆನೆಂದು ಅವರಿಗೆ ಎನಿಸಿತು. ಒಮ್ಮಿಂದೊಮ್ಮೆ ಅವರು ತಮ್ಮ ಕೋಟನ್ನು ಬಿಚ್ಚಿ ನೋಟುತುಂಬಿದ ಪಾಕೀಟನ್ನು ಹೊರತೆಗೆದರು.

'ಇಲ್ಲಿ ನೋಡಿರಿ. ಇದನ್ನು ತೆಗೆದುಕೊಂಡು ಹೋಗಿರಿ,' ಎಂದವರು ತೊದಲಿದರು. ನೋಟುಗಳು ಅವರ ಕೈಯಿಂದ ಉದುರುತ್ತಿರುವುದನ್ನು ಲೆಕ್ಕಿಸುವವರಾರು? ಅವೆಲ್ಲ ಕಾಲಕೆಳಗೆ ತುಳಿಯಲ್ಪಟ್ಟದ್ದವು. ಉದುರುತ್ತಿರುವ ಹಣದ ಕಡೆ ಲಕ್ಷ್ಯವಿಲ್ಲದ್ದನ್ನು ನೋಡಿದಾಗಲೇ ಮಿ. ತ್ರಿಯಾನಾರ ಕೈಕಾಲು ಹೋದದ್ದು.

'ಅಯ್ಯೋ! ಕಾಪಾಡಿರಿ!' ಎಂದವರು ಅರಚಿಕೊಂಡರು. ಆದರೆ ತಮ್ಮ ದನಿ ಕ್ಷೀಣ ದುರ್ಬಲವಾಗಿತ್ತೆಂದು ಅವರಿಗೇ ಅನಿಸಿತು. 'ಕಾಪಾಡಿರೋ! ಕಾಪಾಡಿರಿ!'

ಆ ಕಣ್ಣುಗಳು, ಆ ಮುಖಗಳು ಮತ್ತೂ ಹತ್ತಿರಕ್ಕೆ ಬಂದವು. ಅಕಸ್ಮಾತ್ತಾಗಿ ಚೂರಿಗಳು ಥಳಥಳಿಸಿದವು. ಒಂದು ಸುದೀರ್ಘ ಮನೋವೇಧಕ ಆಕ್ರಂದನ— ಮತ್ತೆ ಎಲ್ಲವೂ ನೀರವ. ತಲೆಯ ಮೇಗಡೆ ಆಕಾಶದಲ್ಲಿ ಹದ್ದುಗಳು ಸುತ್ತುತ್ತ ಇಳಿಯತೊಡಗಿದವು.

ಡಾಕ ಬಂಗಲೆಯಲ್ಲಿ ಹಗಲು ಮೆಲ್ಲಮೆಲ್ಲನೆ ಸರಿಯಿತು. ಮಿ. ತ್ರಿಯಾನಾರವರು ಮಧ್ಯಾಹ್ನದ ಊಟಕ್ಕೆ ಬರಲಿಲ್ಲ. ಆದರೆ ಅದರಿಂದ ಯಾರೂ ಗಾಬರಿಯಾಗಲಿಲ್ಲ. ಡೊಳ್ಳು ಬಾರಿಸುವ ಸದ್ದು ಕೇಳಿದಾಗಲೇ ಅವರಿಗೆ ಅಸ್ಫುಟವಾದ ಭೀತಿಯುಂಟಾದದ್ದು.

ಉರಿಯುವ ನಿಶ್ಚಲ ವಾತಾವರಣವನ್ನು ಭೇದಿಸಿ ಡೊಳ್ಳಿನ ಸದ್ದು ಮೊದಲು ಮೃದುವಾಗಿ ಆ ಮೇಲೆ ಘೋರ ಸ್ವರದಿಂದ ಅಲೆಅಲೆಯಾಗಿ ಬರತೊಡಗಿತು. ಕೊನೆಗಂತೂ ಆಕಾಶವೆಲ್ಲ ಅದರ ತುಮುಲದಿಂದ ಪ್ರತಿಧ್ವನಿಸತೊಡಗಿತು. ಸಂಗಡಲೇ ಗಂಡಸರ ವಿಚಿತ್ರ ಧ್ವನಿಯ ಮಂತ್ರೋಚ್ಚಾರಗಳು ಕೇಳಿ ಬರುತ್ತಿದ್ದವು. ಬಂಗಲೆಯ ಆವಾರದಲ್ಲಿ ಬದ್ಧರಾಗಿದ್ದ ಅವರನ್ನು ಈ ಅವಿರತವಾದ ಡೊಳ್ಳಿನ ಸಪ್ಪಳವು ತತ್ತರಗೊಳಿಸಿತು.

ಕೊನೆಗೆ ಅವರು ಮಿ. ತ್ರಿಯಾನಾರವರನ್ನು ಹುಡುಕಲು ಹೊರಟಾಗ ಎಲ್ಲೆಲ್ಲಿಯೂ ಡೊಳ್ಳೇ ಡೊಳ್ಳಾಗಿ ಅವರಿಗೆ ಕಾಣಿಸಿತು. ಅವರ ಸುತ್ತಲೂ ಅವರ ಹಿಂದೂ ಮುಂದೂ ಡೊಳ್ಳಿನ ಉನ್ಮತ್ತ ಧ್ವನಿ ತುಮುಲಾಯಮಾನವಾಗಿತ್ತು. ಆದರೆ ಮಿ. ತ್ರಿಯಾನಾರವರನ್ನು ಯಾರೂ ನೋಡಿರಲಿಲ್ಲ. ಪ್ರಶ್ನೆ ಕೇಳಿದ್ದಕ್ಕೆಲ್ಲ ಆ ಜನರ ಶೂನ್ಯ ಮುಖವೇ ಉತ್ತರವಾಗಿತ್ತು. ಅವರು ತಲೆ ಅಲ್ಲಾಡಿಸಿ ತಾವು ಎಲ್ಲಿಂದ ಬಂದಿದ್ದರೋ ಅಲ್ಲಿಗೇ ಸರಿದು ಹೋದರು.

ಆಕಾಶದಲ್ಲಿ ಹದ್ದುಗಳು ಸುತ್ತುತ್ತಿದ್ದುದನ್ನು ಕಂಡು ಇವರು ಅತ್ತ ಹೋದರು. ಅಲ್ಲಿ ಒಂದೆಡೆ ಕೆಲ ಹದ್ದುಗಳು ಗುಂಪುಗೂಡಿದ್ದವು. ಹತ್ತಿರದಲ್ಲೇ ಮಿ. ತ್ರಿಯಾನಾ ಇದ್ದರು. ಅವರು ಅಲ್ಲಿ ತಲಪಿದಾಗ ಮಿ. ತ್ರಿಯಾನಾರವರ ಗುರುತೇ ಸಿಗುವಂತಿದ್ದಿಲ್ಲ. ಅವರನ್ನು ಅವರದೇ ಬಿಳಿ ಚಾದರದಲ್ಲಿ ಸುತ್ತಿ ಸ್ಟೇಶನ್ ವ್ಯಾಗನದಲ್ಲಿ ಎತ್ತಿಟ್ಟರು. ಶ್ರೀಮತಿ ಚಾರ್ಡನರು ಬಿಕ್ಕುತ್ತ ಕಾರನ್ನು ಹತ್ತಿದರು. ಹೆಲೆನಳು ಬಿಳುಪೇರಿದ ಮುಖದಿಂದ ಪ್ರೀತಮಸಿಂಗನನ್ನು ನೋಡಿದಳು. ಅವಳಿಗೆ ಏನೋ ಪ್ರಶ್ನೆ ಕೇಳುವ ಮನಸಾಗಿದ್ದರೂ ಧೈರ್ಯ ಬರಲಿಲ್ಲ. ಅವನೊಬ್ಬನೇ ತನ್ನ ನಿಶ್ಶಬ್ದ ದಕ್ಷತೆಯಿಂದ ಮರುಪ್ರಯಾಣದ ವ್ಯವಸ್ಥೆಯನ್ನು ಮಾಡಿದನು. ಅವರು ಹೊರಡುತ್ತಿರುವಾಗ ಮಳೆ ಬಂತು.

ಮೊದಲು ದೊಡ್ಡ ವಿರಳ ಹನಿಗಳು; ಅನೇಲೆ ಒನಕೆಮೊಳೆಯ ಧಾರೆ ಧೋ ಧೋ ಎಂದು ಸುರಿದು ಕಾರಿನ ಪಕ್ಕಗಳನ್ನು ಸಿಡಿಲಿನಂಥ ಸದ್ದಿನಿಂದ ಬಡಿಯಿತು.

ಮೂವರೂ ತುಟಬಿಚ್ಚದೆ ಒಬ್ಬರೊಬ್ಬರ ನೋರೆ ನೋಡಿದರು. ಮಳೆಯ ಸಪ್ಪಳವನ್ನೂ ಭೇದಿಸಿ ಡೊಳ್ಳುಗಳ ಉಗ್ರ, ವಿಜಯೋನ್ಮತ್ತ ನಿನಾದವು, ಈಗ ಮತ್ತೆ ಜೀವನದಾಯಕ ಮಳೆಯಿಂದ ತಣಿದ ಭೂಮಿಯ ಬುಭುಕ್ಷಿತ ಗರ್ಭದಿಂದಲೇ ಎದ್ದು ಬರುವಂತೆ, ಅವರ ಕಿವಿಗೆ ಅಪ್ಪಳಿಸುತ್ತಿತ್ತು.

ಭಾರತದಲ್ಲಿ

# ಪ್ರಜಾಪ್ರಭುತ್ವದ ಪ್ರಯೋಗ

**ಭಾರತವು ಸ್ವತಂತ್ರವಾಗಿ ಏಳು ವರ್ಷಗಳಾಗಿ ಹೋಗಿವೆ. ನಾವು ಪ್ರಜಾ-ಪ್ರಭುತ್ವ ಮಾರ್ಗವನ್ನು ಅನುಸರಿಸಲು ನಿರ್ಧರಿಸಿ ಆ ದಾರಿಯಲ್ಲಿ ದೊಡ್ಡ ಹೆಜ್ಜೆಯನ್ನಿಟ್ಟದ್ದೇವೆ. ಈ ಪ್ರಯೋಗದ ಹಿನ್ನೆಲೆಯೇನು, ಭಾರತದ ಜನತೆ ಎಷ್ಟು ಮಟ್ಟಿಗೆ ಪ್ರಜಾಸತ್ತೆಯ ಪರಂಪರೆಯುಳ್ಳದ್ದು, ಪ್ರಜಾಪ್ರಭುತ್ವವು ಇಲ್ಲಿ ಯಶಸ್ವಿಯಾಗಲು ಯಾವ ತೊಡರುಗಳ ನಿವಾರಣೆಯಾಗಬೇಕು ಎಂಬುದನ್ನು ಇಲ್ಲಿ ಚರ್ಚಿಸಿದೆ. .... .... .... ....**

ಲೇಖಕರು: ಶ್ರೀ ವೆಂಕಟರಾವ ನಾಯಕ, ಎಂ. ಎ., ಎಲ್‌ಎಲ್. ಬಿ.

ಭಾರತವು ರಾಜಕೀಯ ಸ್ವಾತಂತ್ರ್ಯವನ್ನು ಪಡೆದು ತನ್ನ ರಾಜ್ಯಸಂವಿಧಾನವನ್ನು ಪ್ರಜಾ-ಪ್ರಭುತ್ವದ ತಳಹದಿಯ ಮೇಲೆ ನಿರ್ಮಿಸಿಕೊಂಡು ಪ್ರಜಾರಾಜ್ಯವನ್ನು ಸ್ಥಾಪಿಸಿಕೊಂಡಂದಿನಿಂದ ಇಲ್ಲಿಯ ಪ್ರಜಾಪ್ರಭುತ್ವದ ಪ್ರಯೋಗದ ಫಲಿ-ತಾಂಶಗಳ ಬಗೆಗೆ ಅನೇಕ ದೇಶಗಳಲ್ಲಿ ಜಿಜ್ಞಾಸೆಯುಂಟಾಗುವದು ಸ್ವಾಭಾವಿಕ. ಹಾಗೆಯೆ ನಮ್ಮ ನಾಡಿನಲ್ಲಿಯೂ ಅದರ ಬೆಳವಣಿಗೆಯ ವಿಷಯದಲ್ಲಿ ಹಾಗು ಕಾಲಕಾಲಕ್ಕೆ ಆಗುತ್ತ ಬಂದ ಸ್ಥಿತ್ಯಂತರಗಳನ್ನು ಕುರಿತು ಕುತೂಹಲಪೂರ್ಣವಾದ ವಿವೇಚನೆಯು ನಡೆಯುತ್ತಿರುವದೂ ಸಹಜವಾಗಿದೆ. ಪರದಾಸ್ಯದಿಂದ ಮುಕ್ತವಾದ ಉತ್ತರಕ್ಷಣದಲ್ಲಿಯೆ ವಯಸ್ಕ ಮತದಾನ ಪದ್ಧ-ತಿಯನ್ನವಲಂಬಿಸಿದ ಸಾರ್ವತ್ರಿಕ ಚುನಾವಣೆಯ ಪ್ರಯೋಗವನ್ನು ಭಾರತವು ಕೈಕೊಂಡ ಸಂಗತಿಯು ಜಗತ್ತಿನಲ್ಲಿ ಅನೇಕರಿಗೆ ಅಪೂರ್ವವಾದ ಅದ್ಭುತ ಸಾಹಸವೆಂದು ತೋರಿತು. ಅಲ್ಲದೆ ಪ್ರಜೆಗಳಲ್ಲಿ ಬಹುಜನರಿಗೆ ಅಕ್ಷರಜ್ಞಾನವು ಕೂಡ ಇಲ್ಲದಿರುವಾಗ ಇಂತಹ ಸಾಹಸದ ಮುಂದಡಿ-ಯನ್ನಿಟ್ಟಿರುವುದರ ಒಳಗುಟ್ಟಾವದರೂ ವಿನಿದ್ದೀ-ತೆಂದು ಬೇರೆ ಬೇರೆ ದೇಶಗಳ ರಾಜಕಾರಣಪಟುಗಳೂ ರಾಜನೀತಿವಿಜ್ಞಾನಿಗಳೂ ಇನ್ನೂ ಕುತೂಹಲದಿಂದ ಆ ವಿಷಯವನ್ನು ಅಭ್ಯಸಿಸು-ತ್ತಲೇ ಇರುವರು. ಇಂತಹ ಪರಿಸ್ಥಿತಿಯಲ್ಲಿ ಈ ಪ್ರಯೋಗದ ವಿವಿಧ ಮುಖಗಳನ್ನು ಮತ್ತು ಅಂತರಂಗವನ್ನು ವಸ್ತುನಿಷ್ಠೈಕದೃಷ್ಟಿಯಿಂದ ಪರಾಮರ್ಶಿಸುವದು ಕ್ರಮಪ್ರಾಪ್ತವಾಗಿದೆ.

ಪ್ರಜಾಪ್ರಭುತ್ವವು ಒಂದು ರಾಜಕೀಯ ತತ್ತ್ವವೆನ್ನುವದಕ್ಕಿಂತಲೂ ಇತ್ತೀಚೆಗೆ ಅದೊಂದು ಜೀವನಮಾರ್ಗ ಅಥವಾ ಜೀವನದರ್ಶನ ಇಲ್ಲವೆ ಜೀವನವನ್ನು ಅರಿತುಕೊಳ್ಳುವ ಒಂದು ವಿಶಿಷ್ಟ ಮನೋವೃತ್ತಿಯೆಂದು ಅಂಗೀಕರಿಸುವದೇ ಹೆಚ್ಚು ಯೋಗ್ಯವೆಂದು ತಜ್ಞರು ಅರ್ಥಪೂರ್ಣ ಅಭಿ-ಪ್ರಾಯವನ್ನು ವ್ಯಕ್ತಮಾಡಿರುವರು. ಇದನ್ನು ಅರಿತವರಿಗೆ ಭಾರತದಲ್ಲಿಯ ಹೊಸ ಪ್ರಜಾಪ್ರಭುತ್ವದ ಅದ್ಭುತ ಪ್ರಯೋಗದ ಸಾಹಸವನ್ನು ಕೈಕೊಳ್ಳುವಲ್ಲಿ ಮುಂದಾಳುಗಳಲ್ಲಿದ್ದ ಅಸದೃಶ ಆತ್ಮವಿಶ್ವಾಸದ ದರ್ಶನವು ಆಗದಿರದು. ಜೀವನದ ಒಂದು ರೀತಿಯೇ ಪ್ರಜಾಪ್ರಭುತ್ವವೆಂಬ ಸೂತ್ರದಲ್ಲಿ ಹುದುಗಿದ ಮನೋಭಾವವೇನು? ಎಂಬ ಈ ಪ್ರಶ್ನೆಯನ್ನು ಆನುಷಂಗಿಕವಾಗಿ ಇಲ್ಲಿ ಎತ್ತಿ ಅದನ್ನು ಉತ್ತರಿಸಿದರೆ ಆ ಅಪೂರ್ವ ಪ್ರಯೋಗದ ಬುಡದಲ್ಲಿರುವ ರಹಸ್ಯದ ಜ್ಞಾನವು ಸಹಜವಾಗಿ ಆಗಬಹುದು. ಜನಜೀವನವನ್ನು ಸಮನ್ವಯಿಸಿ ನೋಡಿ ಶಕ್ಯವಿದ್ದಷ್ಟು ಅಧಿಕ ಪ್ರಮಾಣದಲ್ಲಿ ಸಮತ್ವದ ಅಂಶಗಳನ್ನು ಅದರಲ್ಲಿ ಕಂಡು ಆ ತಳಹದಿಯ ಮೇಲೆ ಸರ್ವಸಮ್ಮತವಾದ ಪರಸ್ಪರ ಸೌಹಾರ್ದದ ಹಾಗು ಸಂಬಂಧದ ಮಾರ್ಗವನ್ನು ರೂಪಿಸುವದೇ ಪ್ರಜಾಪ್ರಭುತ್ವದ ಮುಖ್ಯ ಪ್ರೇರಣೆ. ಈ ದೃಷ್ಟಿಯಿಂದ ಪ್ರಜೆಗಳ ಸಮಾನ ಧರ್ಮಗಳನ್ನು ಸೂಕ್ಷ್ಮವಾಗಿ ತಿಳಿದುಕೊಂಡು ಅವುಗಳ ವಿಕಾಸಕ್ಕೆ ಯೋಗ್ಯವಾದ ಅವಕಾಶವನ್ನು ಒದಗಿಸಿಕೊಡುವದೇ ಪ್ರಜಾಪ್ರಭುತ್ವದ ಕರ್ತವ್ಯವಾಗಿದೆ. ನಮ್ಮ ಸುದೈವದಿಂದ ಭಾರತದ ದಾರ್ಶನಿಕ ಹಾಗು ಸಾಂಸ್ಕೃತಿಕ ಪರಂಪರೆಯು ಈ ಮಹಾ ಪ್ರಯೋಗಕ್ಕೆ ಅತ್ಯಂತ ಪೋಷಕವೂ ಉತ್ತೇಜಕವೂ ಆಗಿದೆ. ಯಾಕಂದರೆ ಎಲ್ಲಕ್ಕಿಂತ ಮಿಗಿಲಾಗಿ ನಿರಹಂಕಾರ ಮನೋವೃತ್ತಿಗೆ ನಮ್ಮ ಜೀವನದರ್ಶನದಲ್ಲಿ ಮಹತ್ವದ ಸ್ಥಾನವನ್ನು ಕೊಡಲಾಗಿದೆ. 'ಯದ-ಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ' ಅಂದರೆ 'ಅಹಂಕಾರಯುಕ್ತನಾಗಿ ನೀನು ಯುದ್ಧ ಮಾಡುವದಿಲ್ಲೆಂದರೆ ಆ ನಿನ್ನ ವಿಚಾರವು ಪೊಳ್ಳು; ಪ್ರಕೃತಿಯು ನಿನ್ನನ್ನು ಬಗ್ಗಿಸಿ ಯುದ್ಧ ಮಾಡಹಚ್ಚುವದು' ಎಂದು ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಉಪದೇಶವೇ ನಮ್ಮ ಮಾತಿಗೆ ನಿದರ್ಶನ. ಈ ಹಿನ್ನೆಲೆಯಲ್ಲಿಯೇ ನಮ್ಮ ನಾಡಿನಲ್ಲಿ ಯಾವ ರಾಜ್ಯಸಂವಿಧಾನವೂ ಯಶಸ್ವಿಯಾಗಿದೆಯಲ್ಲದೆ ಈ ಮನೋವೃತ್ತಿಯನ್ನು ಕಳೆದುಕೊಂಡ ಮರುಗಳಿಗೆಯಲ್ಲಿಯೆ ಅರಸೊತ್ತಿಗೆಗಳಿದ್ದರೂ ಉರುಳಿವೆ; ಗಣರಾಜ್ಯಗಳಿದ್ದರೂ ಬುಡಮೇಲಾಗಿವೆ. ಆದುದರಿಂದ ಜಗತ್ತಿನಲ್ಲಿಯ ಬೇರೆ ರಾಷ್ಟ್ರಗಳಿಗೆ ನಮ್ಮ ಪ್ರಜಾಪ್ರಭುತ್ವದ ಮಹಾ ಪ್ರಯೋಗವು ಅದ್ಭುತವೆಂದು ತೋರಿದರೂ ನಮಗೆ ಅದರಿಂದಾವ ಅಚ್ಚರಿಯೂ ಆಗಿಲ್ಲ; ಆಗಲಾರದು.

*

ಇದನ್ನೇ ಬೇರೆ ಶಬ್ದಗಳಲ್ಲಿ ಹೇಳುವುದಾದರೆ ನಮ್ಮ ದೇಶದ ರಾಜಕೀಯ ಏರಿಳಿತಗಳಿಗೂ ಧರ್ಮಮೂಲವಾದ ಮನೋಭಾವನೆಗೂ ಅತ್ಯಂತ ನಿಕಟವಾದ ಸಂಬಂಧವು ಪ್ರಾಚೀನ ಕಾಲದಿಂದಲೂ ಇದೆಯೆಂದು ಹೇಳಬಹುದು. ಅಂತೆಯೆ ಅರಸನು ತಾನೇ ಸರ್ವಾಧಿಕಾರಿ, ನಿರಂಕುಶ, ಸರ್ವತಂತ್ರ ಸ್ವತಂತ್ರ ಎಂಬ ಅಪಸಿದ್ಧಾಂತವನ್ನು ಬೇರೂರಿಸಲು ಹೆಣಗಿದ ಪ್ರಸಂಗಗಳಲ್ಲೆಲ್ಲ ಕ್ರಾಂತಿಗೆ ಔತಣವನ್ನಿತ್ತಿರುವನು. "ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ಉತ್ಪಥಪ್ರತಿಪನ್ನಸ್ಯ ನ್ಯಾಯ್ಯಂ ಭವತಿ ಶಾಸನಂ" ಅಂದರೆ ಕಾರ್ಯಾಕಾರ್ಯಗಳ ಸರಿಯಾದ ವಿವೇಕವಿಲ್ಲದೆ ವ್ಯವಹರಿಸುವ ಹಾಗು ದಾರಿಯನ್ನು ಬಿಟ್ಟು ನಡೆಯುವ ಗುರುವನ್ನೂ ಹಿರಿಯನನ್ನೂ ದಂಡಿಸುವದು ನ್ಯಾಯ್ಯವಾಗಿದೆಯೆಂದು ಸ್ಪಷ್ಟವಾಗಿ ಹೇಳಲಾಗಿದೆ. ಪ್ರಹ್ಲಾದ ಚರಿತ್ರೆಯು ಈ ಮಾತನ್ನು ಚೆನ್ನಾಗಿ ನಿದರ್ಶಿಸುತ್ತಿದೆ. ಸಾಕ್ಷಾತ್ ತಂದೆಯಿದ್ದರೂ ನೀತಿ, ಧರ್ಮ ಇವುಗಳನ್ನು ಬಿಟ್ಟು ವರ್ತಿಸಿದರೆ ಆತನ ದುರ್ಮಾರ್ಗವನ್ನು ನಿಃಸ್ಪೃಹತೆಯಿಂದ ನಿಷೇಧಿಸುವದು ಮಗನ ಕರ್ತವ್ಯ; ಹಾಗೆಯೆ ಪ್ರಜಾಪೀಡಕನಾದ ರಾಜ್ಯಕರ್ತನನ್ನು ಪ್ರತಿಭಟಿಸಿ ನ್ಯಾಯನೀತಿಗಳ ಪುನರುತ್ಥಾನವನ್ನು ಮಾಡುವದು ಗುರು-ದ್ರೋಹವಲ್ಲ ಎಂಬ ಅಂಶಗಳನ್ನು ಪುರಾಣ, ಇತಿಹಾಸ, ಚರಿತ್ರೆ ಮೊದಲಾದವುಗಳಲ್ಲಿ ಹೇರಳವಾಗಿ ನಾವು ಕಾಣುತ್ತೇವೆ. ಅಂದಬಳಿಕ ಮೂಲಭೂತ-ವಾದ ಗಮಕವಾವುದೆಂಬುದು ಇದರಿಂದ ಹೊರ-ಹೊಮ್ಮುತ್ತದೆ. ಜನಸಾಮಾನ್ಯದ ಹಿತವೇ ಯಾವುದೊಂದು ಶ್ರೇಷ್ಠ ರಾಜ್ಯಪದ್ಧತಿಯ ಹೆಗ್ಗುರುತೆಂ-ಬುದನ್ನು ಬೇರೆ ಒಡೆದು ಹೇಳಬೇಕಾಗಿಲ್ಲ. ಈ ಅನುಸಂಧಾನದಿಂದ ವಿಚಾರ ಮಾಡಿದರೆ ಪ್ರಜಾಪ್ರಭುತ್ವವೇ ಇರಲಿ ಅಥವಾ ಇನ್ನೊಂದು ಪದ್ಧತಿಯೆ ಆಗಲಿ ತಾಂತ್ರಿಕವಾಗಿ ಅದಕ್ಕಿರುವ ಮಹತ್ವವು ಗೌಣವೆಂದಿನಿಸದಿರದು. ಅಂತೆಯೆ ಭಾರತದ ಜನತೆಯಲ್ಲಿ ರಾಜ್ಯಪದ್ಧತಿಗಳ ತಾಂತ್ರಿಕ ಸ್ವರೂಪಕ್ಕೆ ವಿಶೇಷ ಮಹತ್ವವನ್ನು ಕೊಡುವ ಪ್ರವೃತ್ತಿಯು ಸಾಮಾನ್ಯವಾಗಿ ಇಲ್ಲ. ಆದ್ದರಿಂದ ನಿರಕ್ಷರಿಯೆಂದು ಜನತೆಯು ತೋರಿದರೂ ಪ್ರಜಾಪ್ರಭುತ್ವ ಪದ್ಧತಿಯ ಪ್ರಯೋಗವನ್ನು ಈ ದೇಶದಲ್ಲಿ ವ್ಯಾಪಕ ಪ್ರಮಾಣದಲ್ಲಿ ಕೈಕೊಳ್ಳಲು ಧುರೀಣರಿಗೆ ಬಿಗಿಯಾಗಲಿಲ್ಲ. ಹಾಗೆಯೆ ಜನಸಾಮಾನ್ಯದ ಮನೋವೃತ್ತಿಯಲ್ಲಿ ಕಂಡುಬರುವ

ಇನ್ನೊಂದು ಮಹತ್ವದ ಅಂಶವನ್ನೂ ಕಡೆಗಣಿಸಲಾಗದು. ಅಪ್ರಾಮಾಣಿಕರೆಂದು ನಿಚ್ಚಳವಾಗಿ ಸಿದ್ಧವಾಗದಿರುವ ವರೆಗೆ ಎಲ್ಲರೂ ಪ್ರಾಮಾಣಿಕರೆಂದೂ ಪರಿಶುದ್ಧಾಂತಃಕರಣರೆಂದೂ ಪರಸ್ಪರರನ್ನು ನಂಬಿ ನಡೆಯುವ ಶ್ರದ್ಧೆಯ ಮನೋಭೂಮಿಕೆಯೆ ಅದು. ಈ ಹಿನ್ನೆಲೆಯಲ್ಲಿ ನೋಡಿದರೆ ಭಾರತದಲ್ಲಿ ಇಂದು ನಡೆದಿರುವ ಪ್ರಜಾಪ್ರಭುತ್ವದ ಪ್ರಯೋಗದಲ್ಲಿ ಯಾವ ಅದ್ಭುತತೆಯೂ ಕಾಣಲಾರದು.

ತಾತ್ತ್ವಿಕ ವಿವೇಚನೆಯ ದೃಷ್ಟಿಯಿಂದ ಇದು ಸರಿಯಿರಬಹುದು. ಆದರೆ ಪ್ರತ್ಯಕ್ಷವಾಗಿ ಇಷ್ಟು ವ್ಯಾಪಕ ಪ್ರಮಾಣದಲ್ಲಿ ಜನತೆಯು ಒಂದೇ ಕಾಲಕ್ಕೆ ತನ್ನ ಪ್ರತಿನಿಧಿಗಳನ್ನು ಆರಿಸಿ ರಾಜ್ಯಸೂತ್ರಗಳನ್ನು ಅವರ ಕೈಯಲ್ಲಿರಿಸಿದ ಉದಾಹರಣೆಯು ಇದೇ ಮೊದಲನೆಯದೆಂಬುದನ್ನು ಯಾರೂ ಅಲ್ಲಗಳೆಯರು. ಈ ದೊಡ್ಡ ಹೆಜ್ಜೆಯನ್ನಿಡುವ ಮುಂಚೆ ಭಾರತವು ಕೆಲ ಸಣ್ಣ ಅಡಿಗಳನ್ನಿಟ್ಟ ಐತಿಹಾಸಿಕ ವಾಸ್ತವಾಂಶಗಳ ತಿಳಿವಳಿಕೆಯು ಇಂದಿನ ಮಹಾಪ್ರಯೋಗದ ಪೂರ್ವಾಪರ ಜ್ಞಾನಕ್ಕೆ ತುಂಬ ಸಹಾಯಕವಾಗಿದೆ. ಹೀಗಿದ್ದರೂ ಆ ಹೆಜ್ಜೆಗಳ ಆಕಾರಕ್ಕೂ ಇಂದಿನ ಮಹಾಪ್ರಯೋಗದ ಸ್ವರೂಪಕ್ಕೂ ಮಹದಂತರವಿದೆಂಬುದನ್ನು ಮರೆಯಲಾಗದು. ಇದನ್ನು ಸರಿಯಾಗಿ ತಿಳಿದುಕೊಳ್ಳದಿರುವದರಿಂದಲೇ ಇವತ್ತಿನ ಪ್ರಜಾಪ್ರಭುತ್ವ ಪ್ರಯೋಗದ ಯಶೋಮಾರ್ಗದಲ್ಲಿ ಅಡಿಗಡಿಗೆ ತೊಂದರೆಗಳುಂಟಾಗುತ್ತಿವೆ. ಆ ತೊಂದರೆಗಳಾವುವೆಂಬುದನ್ನು ಮುಂದೆ ತೋರಿಸಬಹುದು.

ಪ್ರಜಾಪ್ರಭುತ್ವದ ಪ್ರಯೋಗವು ಆಧುನಿಕ ಭಾರತದಲ್ಲಿ ಆರಂಭವಾಗಿ ಸುಮಾರು ಒಂದು ನೂರು ವರ್ಷಗಳಾದವೆಂದು ಹೇಳಬಹುದು. ಈ ಅವಧಿಯಲ್ಲಿ ಅದು ಅನೇಕ ಮಾರ್ಪಾಡುಗಳನ್ನು ಹೊಂದಿದೆ. ಎಲ್ಲಕ್ಕಿಂತ ಮೊದಲು ಆಳರಸರಿಗೆ ಸಲಹೆಗಾರರಾಗಿ ಕೆಲ ಜನ ಪ್ರತಿನಿಧಿಗಳನ್ನು ಆಳರಸರೇ ಆರಿಸಿಕೊಂಡುದು ಮುಸುಮುಸುಕಾದ ಮೊದಲಹೆಜ್ಜೆ. ಮುಂದೆ ಅದು ವಿಸ್ತಾರಿತವಾಗಿ ಕೆಲ ವಿಶಿಷ್ಟ ವರ್ಗದ ಹಾಗು ಆಸ್ತಿಯ ಪ್ರಮಾಣದ ತಳಹದಿಯ ಮೇಲೆ ಜನತೆಗೆ ಮತಾಧಿಕಾರವನ್ನೂ ಕೊಟ್ಟು ಅದರಿಂದ ಆರಿಸಲ್ಪಟ್ಟ ಪ್ರತಿನಿಧಿಗಳ ಸಲಹೆಗಳನ್ನು ಪಡೆಯುವ ಕ್ರಮವನ್ನು ಕೈಕೊಂಡುದು ಎರಡನೆಯ ಪಾದ. ದ್ವಿದಲ ರಾಜ್ಯಪದ್ಧತಿಯನ್ನು ಬಳಕೆಯಲ್ಲಿ ತಂದುದು ಮೂರನೆಯ ಪಾದ. ಪ್ರಾಂತಿಕ ಸ್ವಾಯತ್ತತೆಯು ನಾಲ್ಕನೆಯ ಅಡಿ. ಈ ಪ್ರಕಾರ ಮೊದಲು ಇಟ್ಟ ನಾಲ್ಕು ಅಡಿಗಳ ಸ್ವರೂಪವನ್ನು ಒಳಹೊಕ್ಕು ನೋಡಿದವರಿಗೆ ಅವುಗಳಲ್ಲಿ ಜನತೆಗೆ ಇರಬೇಕಾಗಿದ್ದ ಪ್ರತಿನಿಧಿಗಳ ಮುಖ್ಯ ಹೊಣೆಗಾರಿಕೆಯ ಅಭಾವವು ಒಡೆದು ಕಂಡುಬಂದಿದೆ. ಅಲ್ಲದೆ ಪ್ರಜಾಪ್ರಭುತ್ವದ ಆವಿಷ್ಕಾರವು ನಿಜವಾಗಿ ತಳದಿಂದಲೇ ಆಗಬೇಕಾಗುತ್ತದೆಂಬ ತತ್ತ್ವಕ್ಕೆ ವಿರುದ್ಧವಾದ ರೀತಿಯಲ್ಲಿ ಜನತೆಯ ಮೇಲೆ ಹೊರಗಿನಿಂದ ಪ್ರಜಾಪ್ರಭುತ್ವದ ಆಣಕದಂತಿದ್ದ ಒಂದು ಪದ್ಧತಿಯನ್ನೂ ಅಂಟಿಸಿದಂತೆ ತಿರುವುಮುರುವು ಚಿತ್ರವು ಅಲ್ಲಿ ಎದ್ದು ಕಾಣದಿರದು. 'Democracy requires accuountability '' ಅಂದರೆ " ಪ್ರಜಾ ಪ್ರಭುತ್ವಕ್ಕೆ ಹೊಣೆಗಾರಿಕೆಯು ಅವಶ್ಯವಾಗಿದೆ'' ಎಂಬ ಹರ್ಬರ್ಟ ಮಾರಿಸನ್ನರ ಮಾತಿನ ಮಾನದಂಡದಿಂದ ಆಗಿನ ಪ್ರಯೋಗಗಳನ್ನು ಅಳೆದು ನೋಡಿದರೆ ಅದರ ವಿಕೃತ ಸ್ವರೂಪವು ಬಹಿರಂಗಪಡುತ್ತದೆ. ಅರ್ಥಾತ್ ಏವಮಾಹೂತ ಪ್ರಜಾಪ್ರಭುತ್ವ ಪ್ರಯೋಗವು ಕಾರ್ಯತಃ ಯಶಸ್ವಿಯಾಗಲಿಲ್ಲ. ಅದರಿಂದ ದಿನೇ ದಿನೇ ಅಸಂತೋಷವು ಹೆಚ್ಚೆಚ್ಚು ಬೆಳೆದು ಕೊನೆಗೆ ಸಂಪೂರ್ಣ ಸ್ವಾತಂತ್ರ್ಯವೇ ಪ್ರಜಾಪ್ರಭುತ್ವದ ಪ್ರಯೋಗಕ್ಕೆ ಅನುಕೂಲವಾದ ಹಾಗು ಅವಶ್ಯವಾದ ಹದವುಳ್ಳ ನೆಲವೆಂದು ಮನವರಿಕೆಯಾಗಿ ಸ್ವಾತಂತ್ರ್ಯಸಂಪಾದನೆಯ ಪ್ರಯತ್ನಗಳು ವೇಗದಿಂದ ನಡೆದು ಯಶಸ್ವಿಯಾಗಿಇಂದಿನ ಪ್ರಜಾಪ್ರಭುತ್ವಕ್ಕೆ ಎಡೆಮಾಡಿಕೊಟ್ಟಿರುವವು.

*

ಈ ಹೊಸ ಪರಿಸ್ಥಿತಿಯಲ್ಲಿ ನಮ್ಮ ಪ್ರಜಾಪ್ರಭುತ್ವವು ಕಾರ್ಯ ಮಾಡಬೇಕಾಗಿದೆ. ಆದರೆ ಇನ್ನೂ ನಮ್ಮ ಪ್ರಜಾಪ್ರಭುತ್ವವು ಗತಕಾಲದ ಕೆಲ ಅನಿಷ್ಟ ಪ್ರವೃತ್ತಿಗಳಿಂದ ಬಿಡುಗಡೆಹೊಂದಿಲ್ಲ. ಅವುಗಳಲ್ಲಿ ಪ್ರಜಾಪ್ರಭುತ್ವದ ಅಂಗವಾಗಿರುವ ಯಾವ ಸಂಸ್ಥೆಯಲ್ಲಿಯೆ ಆಗಲಿ ಪ್ರತಿನಿಧಿಯಾಗಿರುವವನು ತಾನು ಮಾಡಿದ ಹಾಗು ಮಾಡಬೇಕಾದ ಕಾರ್ಯವನ್ನು ಕುರಿತು ತನ್ನ ಮತವಾರರಿಗೆ ಲೆಕ್ಕವನ್ನು ಒಪ್ಪಿಸಬೇಕಾಗುವದೆಂಬ ಅರಿವಿಲ್ಲದಂತೆ ನಡೆಯುವದು ಅವುಗಳಲ್ಲಿ ಮುಖ್ಯವಾದುದಾಗಿದೆ. ವಿಶೇಷತಃ ಇತ್ತೀಚೆಗೆ ಪ್ರಜಾಪ್ರಭುತ್ವದ ಕಾರ್ಯಕ್ಷೇತ್ರವು ವಿಸ್ತೃತವಾಗಿ ಆರ್ಥಿಕ ಹಾಗು ಸಾಮಾಜಿಕ ಪುನಾರಚನೆಯಲ್ಲಿಯೂ ಅದಕ್ಕೆ ಮಹತ್ವದ ಭೂಮಿಕೆಯುಂಟಾಗಿರುವದರಿಂದ, ಅಂದರೆ ಇಂದಿನ ಪ್ರಭುತ್ವವು ಕಲ್ಯಾಣಕರ ಪ್ರಭುತ್ವವೆಂಬ ಸ್ವರೂಪವನ್ನು ಧರಿಸಿದಂದಿನಿಂದ ಪ್ರಜಾಪ್ರಭುತ್ವದಹೊಣೆಗಾರಿಕೆಯು ಹೆಚ್ಚಿದೆ. ಆದರೆ ದುರ್ದೈವದಿಂದ ಇದಕ್ಕೆ ತಕ್ಕ ಮನೋಭೂಮಿಕೆಯು ಜನಸಾಮಾನ್ಯದಲ್ಲಿಯೂ ಅದರ ಪ್ರತಿನಿಧಿಗಳಲ್ಲಿಯೂ ಸರಕಾರದ ಅಧಿಕಾರಿಗಳಲ್ಲಿಯೂ ಮಂತ್ರಿಗಳಲ್ಲಿಯೂ ಬೆಳೆದುಬಂದಿಲ್ಲ. ಅದರಿಂದ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಲ್ಲಾಗಲಿ ಸಹಕಾರಿ ಸಂಘದಲ್ಲಾಗಲಿ ಇಲ್ಲವೆ ಸರಕಾರದ ಇತರ ಅಂಗಗಳಲ್ಲಾಗಲಿ ಅವಶ್ಯವಾದ ವಿಶಾಲ ದೃಷ್ಟಿ, ಆಡಳಿತದ ಬಿಗುವು, ಜನೋಪಯೋಗಿ ಕಾರ್ಯದಲ್ಲಿ ಆಸ್ಥೆ ಇವುಗಳು ಕಂಡುಬರುತ್ತಿರುವದಿಲ್ಲ. ಪಕ್ಷಪಂಗಡ, ಜಾತಿ ಮತ, ಭಾಷೆ, ಉಪಭಾಷೆ, ಮೊದಲಾದವುಗಳಿಗೇ ಅವಾಸ್ತವ ಮಹತ್ವವನ್ನು ಕೊಟ್ಟು ನಿಜವಾದ ಹಿತಕರವಾದ ಧೋರಣವಾವುದೆಂಬುದನ್ನು ಕಡೆಗಣಿಸುವ ಪ್ರವೃತ್ತಿಯು ಪ್ರಜಾಪ್ರಭುತ್ವ ಸಂಸ್ಥೆಗಳಲ್ಲಿಯೂ ರಾಜಕೀಯ ಪಕ್ಷಗಳ ರಚನೆ, ಕಾರ್ಯಪದ್ಧತಿ ಮೊದಲಾದವುಗಳಲ್ಲಿಯೂ ಹೆಚ್ಚಾಗಿ ಕಂಡುಬರುತ್ತಿದೆ. ಅರ್ಥಾತ್ ಪ್ರಜಾಪ್ರಭುತ್ವ ಸಂಸ್ಥೆಗಳನ್ನು ತಮ್ಮ ಅಧಿಕಾರ ಬಲ ಪ್ರದರ್ಶನದ ರಂಗಸ್ಥಲಗಳನ್ನಾಗಿ ಮಾಡಿಕೊಳ್ಳುವ ಒಲವು ಒಡೆದು ಕಾಣುತ್ತಿದೆ. ಪ್ರಜಾಪ್ರಭುತ್ವದ ಯಶಸ್ಸಿಗೆ ಇದು ದೊಡ್ಡ ಗಂಡಾಂತರ. ಈ ಪ್ರವೃತ್ತಿಯ ಮೂಲಕ ಸರಕಾರದ ಸೇವಕರನ್ನು ಹೇಗೆ ನಡೆಸಿಕೊಳ್ಳಬೇಕೆಂಬುದನ್ನು ತಿಳಿದುಕೊಳ್ಳುವ ಯೋಗ್ಯತೆಯಾಗಲಿ ಹೃದಯೌದಾರ್ಯವಾಗಲಿ ಮಂತ್ರಿಗಳಲ್ಲಿ ಇಲ್ಲದಂತಾಗುವದು ಆಶ್ಚರ್ಯದ ಸಂಗತಿಯಲ್ಲ. ಹರ್ಬರ್ಟ ಮಾರಿಸನ್ನರು ಹೇಳಿದಂತೆ ಸರಕಾರದ ಆಡಳಿತ ಶಾಖೆಯನ್ನು ನಡೆಸುವಲ್ಲಿ ಸರಕಾರದ ಸೇವಕರನ್ನು ಹೇಗೆ ನಡೆಸಿಕೊಳ್ಳಬೇಕೆಂಬುದನ್ನು ಅರಿಯದಂತಹ ಶುಂಠ ಮಂತ್ರಿಯು ಒಂದು ದೊಡ್ಡ ಕುತ್ತು. ಹಾಗೆಯೆ ತನ್ನ ಮನೋನಿರ್ಧಾರವಿಲ್ಲದ ಮತ್ತು ಕೇವಲ ಕೈಕೆಳಗಿನ ಅಧಿಕಾರಿಗಳ ಕೈಗೊಂಬೆಯಾಗಿ ವರ್ತಿಸುವ ಮಂತ್ರಿಯೂ ಒಂದು ಗಂಡಾಂತರ.

ಭಾರತದಲ್ಲಿಯ ನೂತನ ಪ್ರಜಾಪ್ರಭುತ್ವದ ಭವಿತವ್ಯವು ಸುಸ್ವರೂಪದ್ದಾಗಬೇಕಾದರೆ ಜನತೆಯಲ್ಲಿ ಸಾಮಾನ್ಯವಾಗಿ ಪ್ರಾಮಾಣಿಕತೆಯು ಹೆಚ್ಚಾಗಬೇಕು. ಅಧಿಕಾರಿಗಳ ಕಾರ್ಯಕ್ಷಮತೆ ಬೆಳೆಯಬೇಕು. ನೀತಿನಿಷ್ಠುರತೆಯೂ ನ್ಯಾಯನಿರ್ದಾಕ್ಷಿಣ್ಯವೂ ಎಲ್ಲೆಡೆಯಲ್ಲಿಯೂ ನೆಲೆಗೊಳ್ಳಬೇಕು.



ಮಗು: "ಅವ್ವನ್ನ ಊದಿದವರು ಯಾರಪ್ಪಾ ? ''

# ಕೋರ್ಟಿನಲ್ಲಿ ಗೆದ್ದ ಎತ್ತು




ಗೊರೂರು ರಾಮಸ್ವಾಮ್ಯಯ್ಯಂಗಾರರಿಂದ

ವಿದ್ಯಾಶಂಕರ, ಮಹಾತ್ಮಾ ಗಾಂಧಿಯವರಿಂದ ಸ್ಥಾಪಿತವಾದ ಬೆಂಗಳೂರಿನ ಅಖಿಲ ಭಾರತ ಚರಖ ಸಂಘದ ಖಾದಿ ವಸ್ತ್ರಾಲಯದಲ್ಲಿ ವ್ಯವಸ್ಥಾಪಕನಾಗಿದ್ದ. ದೇಶದ ನಾನಾ ಭಾಗಗಳಿಂದ ಖಾದಿ ವಸ್ತ್ರಗಳನ್ನು ತರಿಸಿ ಅದನ್ನು ಮಾರುವುದು ಅವನ ಕೆಲಸವಾಗಿತ್ತು. ಖಾದಿ ಬಟ್ಟೆಯ ಗಂಟುಗಳು ರೈಲಿನಲ್ಲಿ ಪ್ರತಿದಿನವೂ ಬೆಂಗಳೂರಿಗೆ ಬರುತ್ತಿದ್ದವು. ರೈಲು ನಿಲ್ದಾಣದಿಂದ ಅವುಗಳನ್ನು ವಸ್ತ್ರಾಲಯಕ್ಕೆ ತರಲು, ಒಂಟೆತ್ತಿನ ಒಂದು ಗಾಡಿ ಇಟ್ಟುಕೊಂಡಿದ್ದ ಒಬ್ಬ ಸಾಹೇಬ (ಮುಸಲ್ಮಾನ) ಹಿಂದಲಿಂದಲೂ ನಿಯಮಿತನಾಗಿದ್ದ. "ಖಾದಿ ಪವಿತ್ರವಾದ ಕಾರ್ಯ. ಇದಕ್ಕೆ ಸಾತ್ವಿಕರ ಸಂಪರ್ಕವೇ ಬೇಕು. ಖಾದಿರ (ಮುಸಲ್ಮಾನ ಗಾಡಿಯವ) ಬಹಳ ನಿಷ್ಠ. ನಮಾಜ ಮಾಡುವುದನ್ನು ಎಂದೂ ತಪ್ಪಿದವನಲ್ಲ. ಖುರಾನ್ ಚೆನ್ನಾಗಿ ಗೊತ್ತು. ಆ ವಠಾರದ ಮುಸಲ್ಮಾನರಿಗೆಲ್ಲ ಇವನೇ ಪುರೋಹಿತ. ಕೋರ್ಟು ಕಚೇರಿಗೆ ಒಬ್ಬರನ್ನೂ ಕಳುಹಿಸದೆ ಅವರ ವ್ಯಾಜ್ಯಗಳನ್ನೆಲ್ಲ ಇವನೇ ತೀರ್ಮಾನ ಮಾಡುತ್ತಾನೆ. ಇವನ ವಾಕ್ಯ ಅವರಿಗೆ ಖುರಾನ್. ಇವನಲ್ಲಿರುವ ಎಲ್ಲಕ್ಕಿಂತ ಹೆಚ್ಚಾದ ಗುಣ, ಇವನು ಕುಡುಕನಲ್ಲ'' ಎಂದು ಹೇಳಿ ಹಿಂದಲ ವ್ಯವಸ್ಥಾಪಕರು ಖಾದಿರನನ್ನು ಶಿಫಾರಸು ಮಾಡಿ, ವರ್ಗವಾದ ಬೇರೆ ವಸ್ತ್ರಾಲಯಕ್ಕೆ ಹೋಗಿದ್ದರು. ಹೊರನೋಟಕ್ಕೂ ಖಾದಿರ ಅಚ್ಚ ಮುಸಲ್ಮಾನನಾಗಿ ತೋರುತ್ತಿದ್ದ. ಚೂಪಾದ, ಎಂದಿಗೂ ಬೋಳಿಸದಿದ್ದ ಅವನ ಗಡ್ಡವನ್ನು ನೋಡಿದರೇ ಸಾಕು. ಪೈಗಂಬರ್ ಮಹಮ್ಮದರ ಪಕ್ಕಾ ಶಿಷ್ಯನಂತೆ ತೋರುತ್ತಿತ್ತು.

ರೈಲಿನಲ್ಲಿ ಮೂಟೆಗಳು ಬಂದು, ರೈಲ್ವೆ ರಸೀತಿ ವಸ್ತ್ರಾಲಯದ ವ್ಯವಸ್ಥಾಪಕರಿಗೆ ರಜಿಸ್ಟರ ಪೋಸ್ಟಿನಲ್ಲಿ ಬರುತ್ತಿದ್ದವು. ರಸೀತಿಗಳಲ್ಲಿ ನಮೂದಾಗಿರುವ ರೈಲು ಕರವನ್ನೂ ರಸೀತಿಯನ್ನೂ ವಿದ್ಯಾಶಂಕರ, ಖಾದಿರನ ಕೈಲಿ ಕೊಟ್ಟು ಸ್ಟೇಶನ್‌ಗೆ ಕಳುಹಿಸುತ್ತಿದ್ದ. ಖಾದಿರ ಗಂಟುಗಳನ್ನು ಬಿಡಿಸಿಕೊಂಡು, ತನ್ನ ಗಾಡಿಯಲ್ಲಿ ಹಾಕಿಕೊಂಡು ವಸ್ತ್ರಾಲಯಕ್ಕೆ ತಂದು ಹಾಕಿ, ಮೂಟೆಗೆ ಎಂಟಾಣೆಯಂತೆ ಬಾಡಿಗೆ ಮುರಿದುಕೊಂಡು ಲೆಕ್ಕ ತೀರ್ಮಾನ ಮಾಡಿ ಹೋಗುತ್ತಿದ್ದ. ಬೆಂಗಳೂರಿನ ಖಾದಿ ಅಂಗಡಿ ಹುಟ್ಟಿದಂದಿನಿಂದ ಹೀಗೆಯೇ ನಡೆಯುತ್ತಿತ್ತು. ವಿದ್ಯಾಶಂಕರರೂ ಆ ಮಾಮೂಲನ್ನೇ ಅನುಸರಿಸುತ್ತಿದ್ದರು.

ವಸ್ತ್ರಾಲಯಕ್ಕೆ ಉಣ್ಣೆ ಬಟ್ಟೆಗಳು, ಛಳಿಗಾಲದಲ್ಲಿ ಕಾಶ್ಮೀರದಿಂದ ವಿಶೇಷವಾಗಿ ಬರುತ್ತಿದ್ದವು. ಅವುಗಳು ತ್ವರಿತವಾಗಿ ಬೇಕಾಗಿದ್ದುದರಿಂದ—ಪದ್ಧತಿಗೆ ವಿರೋಧವಾಗಿ-ವಿದ್ಯಾಶಂಕರರು ಅವುಗಳನ್ನು ರೇಲ್ವೆ ಪಾರ್ಸಲಲ್ಲಿ ತರಿಸಿದರು. ಪಾರ್ಸಲ್ ಕರವೇ ಇನ್ನೂರು ರೂಪಾಯಿ ಆಯಿತು. ಸಾಧಾರಣವಾಗಿ ಎಲ್ಲ ಗಂಟುಗಳನ್ನೂ ಗುಡ್ಸ್‌ನಲ್ಲಿ ತರಿಸುತ್ತಿದ್ದರಿಂದ, ರೈಲುಕರ ಹಿಂದೆ ಯಾವಾಗಲೂ ಒಂದೇ ಸಲಕ್ಕೆ ಅಷ್ಟು ಆಗಿರಲಿಲ್ಲ. ಖಾದಿರ್‌ಗೆ ರೈಲು ರಸೀತಿಯನ್ನೂ ಹಣವನ್ನೂ ಕೊಡುವಾಗ "ಬಹುಶಃ ಹಿಂದೆ ಯಾವಾಗಲೂ ಇವನ ಕೈಗೆ ಇಷ್ಟೊಂದು ಹಣವನ್ನು ನಾವು ರೈಲುಕರಕ್ಕಾಗಿ ಕೊಟ್ಟಿರಲಿಲ್ಲ'' ಎಂಬುದು ವಿದ್ಯಾಶಂಕರರಿಗೆ ಹೊಳೆಯಿತು. ಮರುಕ್ಷಣದಲ್ಲಿಯೇ "ಈ ಸಲದ ರೈಲುಕರವೇ, ಪಾರ್ಸಲ್ ಆದುದರಿಂದ ಹೆಚ್ಚು'' ಎಂಬ ಭಾವ ಅವರ ಮನಸ್ಸನ್ನು ಖಾದಿರ್‌ನಿಂದ ಬೇರೆ ಕಡೆಗೆ ತಿರುಗಿಸಿತು. ಆ ಮಧ್ಯಾಹ್ನ ಖಾದಿರ ಮೂಟೆಗಳನ್ನು ತೆಗೆದುಕೊಂಡು ಬರಲಿಲ್ಲ. ಮೂಟೆಗಳು ಬಾರದಿದ್ದರೆ ಮರುದಿವಸ ಬರುವುದು ಅವನ ಪದ್ಧತಿಯಾಗಿದ್ದುದರಿಂದ, ವಿದ್ಯಾಶಂಕರರು ಆ ವಿಷಯವನ್ನು ಕುರಿತು ಯೋಚಿಸಲಿಲ್ಲ.

ಮಾರನೆಯ ದಿನವೂ ಖಾದಿರ ಮೂಟೆಗಳನ್ನು ತರಲಿಲ್ಲ. ಅಂದು ಭಾನುವಾರವಾಗಿದ್ದುದರಿಂದ ಪಾರ್ಸೆಲ್ ಆಫೀಸಿಗೆ ರಜ ಇರಬಹುದೆಂದು ವಿದ್ಯಾಶಂಕರರು ಸುಮ್ಮನಾದರು. ಸೋಮವಾರವೂ ಖಾದಿರ್ ಬರದಿರಲು ವಿದ್ಯಾಶಂಕರರಿಗೆ ಯೋಚನೆ ಪ್ರಾರಂಭವಾಯಿತು. ರೈಲು ಸ್ಟೇಶನ್‌ನಲ್ಲಿ ಹೋಗಿ ನೋಡಿದಾಗ ಪಾರ್ಸೆಲ್‌ಗಳು ನಾಲ್ಕು ದಿನಗಳ ಹಿಂದೆಯೇ ಅಲ್ಲಿ ಬಂದು ಬಿದ್ದಿರುವುದು ಅವರಿಗೆ ತಿಳಿಯಿತು. ಸಕಾಲದಲ್ಲಿ ತೆಗೆದುಕೊಳ್ಳದುದಕ್ಕಾಗಿ ಒಂದೆರಡು ದಿನಗಳ ದಂಡ ( ಡಮರೇಜ್ ) ಸಹ ಕೊಡಬೇಕಾಗಬಹುದೆಂದು ಅವರಿಗೆ ತಿಳಿಯಿತು. ಅವರು ಕೂಡಲೇ ಖಾದಿರನ ಅನ್ವೇಷಣಕ್ಕೆ ಹೊರಟರು. ಆದರೆ ಖಾದಿರ್ ಎಲ್ಲಿರಬಹುದೆಂದು ಅವರಿಗೆ ತಿಳಿದಿರಲಿಲ್ಲ. ವಸ್ತ್ರಾಲಯದಲ್ಲಿದ್ದ ಉಳಿದ ಅವರ ಸಹನೌಕರರಿಗೂ ಆ ಸಂಗತಿ ತಿಳಿದಿರಲಿಲ್ಲ. ಕೊನೆಯಲ್ಲಿ ವಸ್ತ್ರಾಲಯದ ದರ್ಜಿಗಳ ಪೈಕಿ ಒಬ್ಬ "ಖಾದಿರ್ ಮಾರ್ಕೆಟನ ಹಿಂಭಾಗದಿಂದ ನಿತ್ಯ ಗಾಡಿ ಹೊಡೆದುಕೊಂಡು ಬರುತ್ತಾನೆ. ಅಲ್ಲಿ ಎಲ್ಲಿ-ಯಾದರೂ ಮನೆ ಇರಬಹುದು'' ಎಂದ. ವಿದ್ಯಾ-ಶಂಕರರು ಮಾರ್ಕೆಟ್ ಸುತ್ತ ನೂರಾರು ಗಸ್ತು ಹೊಡೆದರು. ಖಾದಿರನ ಸುಳಿವೇ ಗೊತ್ತಾಗಲಿಲ್ಲ. ಹೀಗೆ ಸಂಧ್ಯಾಕಾಲದವರೆಗೆ ಹುಡುಕಿದ ಮೇಲೆ ಕೊನೆಗೆ, ಒಂದು ಹಾಳು ಮಸೀದಿಯ ಹೊರಗೋಡೆಗೆ ಬಿದಿರು ಚಾಪೆಯ ಒಂದು ತಡಿಕೆ ಕಟ್ಟಿಕೊಂಡು, ಖಾದಿರ ಅಲ್ಲಿ ವಾಸಿಸುತ್ತಿರುವುದು ವಿದ್ಯಾಶಂಕರರಿಗೆ ತಿಳಿಯಿತು. ವಿದ್ಯಾಶಂಕರರು ಆ ಗುಡಿಸಲಿನ ಬಾಗಿಲಿಗೆ ಹೋದಾಗ ಒಳಗಿನಿಂದ "ಘೋಷ, ಬರಬೇಡಿ'' ಎಂಬ ಧ್ವನಿ ಕೇಳಿಸಿತು. ಖಾದಿರ ಕೈಗೆ ದುಡ್ಡು ಸಿಕ್ಕಿದಾಗಿನಿಂದ ನಾಲ್ಕು ದಿನಗಳೂ ಒಂದೇ ಸಮನಾಗಿ ಕುಡಿಯುತ್ತಿರುವುದು ಗೊತ್ತಾಯಿತು. ವಿದ್ಯಾಶಂಕರರು ಖಾದಿರನ ಹೆಂಡತಿಗೆ ಹೇಳಿ ಅವನ ಜೇಬಿನಲ್ಲಿದ್ದ ರೈಲ್ವೆ

---

**ಖಾದಿ ಭಾಂಡಾರದ ವಿದ್ಯಾಶಂಕರರು ೨೦೦ ರೂಪಾಯಿ ವಸೂಲ ಮಾಡಲು ಗಾಡೀವಾಲ ಖಾದಿರನ ಗಾಡಿ ಜಪ್ತು ಮಾಡಿಸಿದರು. ಅದೇ ಅವರ ಕಷ್ಟಗಳಿಗೆ ಪೀಠಿಕೆಯಾಯಿತು. ಅವರು ಪಟ್ಟಪಾಡು ನೋಡಿರಿ. . . . . .**

---

ಪಾರ್ಸೆಲ್ ರಸೀತಿಯನ್ನು ತೆಗೆಸಿಕೊಂಡು, ಸ್ಟೇಶನಿಗೆ ಪೋಗಿ ರೈಲ್ವೆ ಕರವನ್ನೂ ಹೆಚ್ಚಿಗೆ ಡವುರೇಜ್‌ನ್ನೂ ತೆತ್ತು, ಉಣ್ಣೆಬಟ್ಟೆಗಳನ್ನು ಬಿಡಿಸಿಕೊಂಡು ಬಂದರು. ಅನಂತರ ವಿಚಾರಿಸಿದುದರಲ್ಲಿ "ಖಾದಿರ ದೊಡ್ಡ ಪೋಕರಿ, ದಗಾಕೋರ, ಯಾವಾಗಿನಿಂದಲೂ ಹೀಗೆಯೇ '' ಎಂಬುದು ಅವರಿಗೆ ಗೊತ್ತಾಯಿತು.

ತಮ್ಮ ಅಜಾಗರೂಕತೆಗಾಗಿ ತಾನೇ ಇನ್ನೂರು ರೂಪಾಯಿಗಳನ್ನು ವಸ್ತ್ರಾಲಯಕ್ಕೆ ಕೊಟ್ಟು ಖಾದಿರ್ ತಿಂದ ಹಣವನ್ನು ಸರಿದೂಗಿಸಬೇಕೆಂದು ವಿದ್ಯಾಶಂಕರರು ತೀರ್ಮಾನಿಸಿದರು. ಆದರೆ ಅವರ ಸಹನೌಕರರು "ಕೊನೆಯಲ್ಲಿ ಹಾಗೆ ಮಾಡುವುದು ಇದ್ದೇ ಇದೆ. ಈಗ ಹಾಗೆ ಮಾಡಿದರೆ ಚರಖಾ ಸಂಘದ ಕೇಂದ್ರ ಕಛೇರಿಯವರು ಏನು ಭಾವಿಸಬಹುದು? ವಸೂಲಿಗಾಗಿ ನಮ್ಮ ಪ್ರಯತ್ನಗಳನ್ನೆಲ್ಲ ಮಾಡಲೇಬೇಕು. ಖಾದಿರನ ಮೇಲೆ ಸಿವಿಲ್, ಕ್ರಿಮಿನಲ್ ಎರಡರಲ್ಲಿಯೂ ಮೊಖದ್ದಮೆ ಹೂಡಬೇಕು'' ಎಂದು ಪುಸಲಾಯಿಸಿದರು. ವಿದ್ಯಾಶಂಕರರಿಗೆ ಕೋರ್ಟಿಗೆ ಹೋಗುವುದು ನಿಜವಾಗಿ ಇಷ್ಟವಿರಲಿಲ್ಲ. ಕೇಂದ್ರ ಕಛೇರಿಯಲ್ಲಿ ತಮ್ಮ ಸತ್ತೆವನ್ನು ಸ್ಥಾಪಿಸಲು ಇದು ಆವಶ್ಯಕವೆಂದು ಅವರ ಮಿತ್ರರೆಲ್ಲರೂ ಒತ್ತಾಯಪಡಿಸಿದ ಮೇಲೆ ಅವರು ಮೊಖದ್ದಮೆಯನ್ನು ಅಡ್ವೊಕೇಟ್ ಶ್ರೀನಿವಾಸನಿಗೆ ವಹಿಸಿದರು.

ಕೆಲವು ವಕೀಲರು, ಕಕ್ಷಿಗಾರನಲ್ಲಿರುವ ಹಣ ಪೂರ್ಣವಾಗಿ ಮುಗಿಯುವವರೆಗೆ ಅವನಿಂದ ಶುಲ್ಕವನ್ನು ಎಳೆಯುತ್ತಲೇ ಇರುತ್ತಾರೆ. ಆದರೆ ಶ್ರೀನಿವಾಸ, ಕಕ್ಷಿಗಾರ ತಂದಿಟ್ಟ ಬುತ್ತಿಯನ್ನೇ ಹೊಡೆದುಬಿಡುವ ವಕೀಲನಲ್ಲ. ಕೋರ್ಟಿನ ಸ್ಟಾಂಪ್‌ನ್ನು ಕೈಯಿಂದ ಹಾಕುವುದು ಮಾತ್ರವಲ್ಲದೆ ಶ್ರೀನಿವಾಸ, ವಿದ್ಯಾಶಂಕರ ಕಕ್ಷೆಗಾರನನ್ನು ತನ್ನ ಗಾಡಿಯಲ್ಲಿ ಕೂರಿಸಿಕೊಂಡು ಕೋರ್ಟಿಗೆ ಕರೆದುಕೊಂಡು ಹೋಗಿ ವಿಚಾರಣೆಯಾದ ನಂತರ ಹಿಂದಕ್ಕೆ ಕರೆದುಕೊಂಡು ಬರುತ್ತಿದ್ದ. ಮಹಾತ್ಮ ಗಾಂಧಿಯವರ ಚಳವಳಿ ಪ್ರಾರಂಭವಾದಂದಿನಿಂದ ಖಾದಿ, ಅಸಹಕಾರ, ಕರನಿರಾಕರಣ, ಸೇವಾದಲ ರಾಜದ್ರೋಹ, ಧ್ವಜಸತ್ಯಾಗ್ರಹ ಇವುಗಳೆಲ್ಲದರ ಆಪಾದಿತರಾದ ದೇಶಭಕ್ತರ ಪರವಾಗಿ, ಒಂದು ಕಾಸನ್ನೂ ತೆಗೆದುಕೊಳ್ಳದೆ, ಅನೇಕ ವೇಳೆ ತಮ್ಮ ಕೈಯಿಂದಲೇ ಹಣ ಖರ್ಚು ಮಾಡಿಕೊಂಡು ವಾದಿಸುತ್ತಿದ್ದ ಲಾಯರು ಶ್ರೀನಿವಾಸ. ಖಾದಿ ಲಾಯರೆಂಬುದೇ ಅವರಿಗೆ ಹೆಸರು.

ವಿದ್ಯಾಶಂಕರರಿಗೂ ಶ್ರೀನಿವಾಸನಿಗೂ ತಮ್ಮ ಹಣ ಹಿಂದಕ್ಕೆ ಬರಬಹುದೆಂಬ ಆಸೆ ಇದ್ದುದು ಒಂದೇ ಮಾರ್ಗದಿಂದ. ಅದೇ ಖಾದಿರ್‌ನ ಎತ್ತು ಮತ್ತು ಗಾಡಿ. ಆ ಎತ್ತು ಗಾಡಿಯನ್ನು ಹರಾಜು ಮಾಡಿಸಿದರೆ ಇನ್ನೂರು ರೂಪಾಯಿಗಳೂ ಕೋರ್ಟ್ ವೆಚ್ಚವೂ ಧಾರಾಳವಾಗಿ ಹುಟ್ಟುವುದೆಂದು ಖಾದಿರ್‌ನ ಒಂಟೆತ್ತು ಗಾಡಿಯನ್ನು ನೋಡಿದವರೆಲ್ಲ ಹೇಳುತ್ತಿದ್ದರು. ಆ ಗಾಡಿ ಮತ್ತು ಎತ್ತನ್ನು ಇಂಜಂಕ್ಷನ್ ಜಪ್ತಿ (ಡಿಕ್ರಿ ಆಗುವುದಕ್ಕಿಂತ ಮುಂಚೆ ಜಪ್ತಿ) ಮಾಡಿಸಬೇಕೆಂದು ಕೊರ್ಟ್‌ನಲ್ಲಿ ಅಡ್ವೊಕೇಟ ಶ್ರೀನಿವಾಸ ವಾದಮಾಡಿದುದರಿಂದ ಕೋರ್ಟು ಅದಕ್ಕೆ ಅನುಮತಿ ಇತ್ತಿತು. ಇಂಜಂಕ್ಷನ್ ಜಪ್ತಿ ವಾರಂಟನ್ನು ತೆಗೆದುಕೊಂಡು ಕೋರ್ಟು ಅಮೀನರೂ ವಾದಿ ವಿದ್ಯಾಶಂಕರರೂ ಖಾದಿರನ ಬಿದಿರು ತಡಿಕೆ ಗುಡಿಸಲಿನ ಬಳಿ ಹೋದರು. ಖಾದಿರ ಮನೆಯಲ್ಲಿರಲಿಲ್ಲ. ಬಾಗಿಲಿನಲ್ಲಿ ಎತ್ತು ಗಾಡಿ ಇರಲಿಲ್ಲ. ಎತ್ತು ಗಾಡಿ ನಿಲ್ಲುವುದಕ್ಕೂ ಅಲ್ಲಿ ಜಾಗ ಇರಲಿಲ್ಲ. ಮಾಡುವುದೇನೆಂದು ತೋರದೆ ಅವರು ಮತ್ತೆ ಕೋರ್ಟಿನ ಕಡೆ ಹೊರಟರು. ಮಾರ್ಕೆಟ್ ಮುಂದೆ ಅವೆನ್ಯೂ ರೋಡ್‌ನ ಚೌಕಕ್ಕೆ ಬಂದಾಗ ದೂರದಲ್ಲಿ ಅವೆನ್ಯೂ ರೋಡ್‌ನಲ್ಲಿ ಖಾದಿರ್‌ನ ಬಿಳಿ ಒಂಟೆತ್ತಿನ ಗಾಡಿ ಒಳ್ಳೇ ಜೋರಾಗಿ ತಮ್ಮ ಕಡೆಗೇ ಬರುತ್ತಿರುವುದು ಅವರಿಗೆ ಕಂಡಿತು.

ವಿದ್ಯಾಶಂಕರರೂ ಅಮೀನರೂ ಗಾಡಿ ಹತ್ತಿರಕ್ಕೆ ಬರುವವರೆಗೆ ಒಂದು ಅಂಗಡಿಯ ಮುಂದೆ ನಿಂತಿದ್ದರು. ಅಂಗಡಿಯ ಎದುರಿಗೆ ಗಾಡಿ ಬಂದ ಕೂಡಲೆ ಇಬ್ಬರೂ ಅದನ್ನು ಹೋಗಿ ಮುತ್ತಿದರು. ಬಲಿಷ್ಠವಾಗಿ ಆನೆಯಂತಿದ್ದ ಎತ್ತು, ಸ್ವಲ್ಪ ಇಳಿಜಾರಾಗಿದ್ದ ಟಾರ್ ರಸ್ತೆಯಲ್ಲಿ ಸರಸರನೆ ಸಾಗುತ್ತಿದ್ದುದರಿಂದ ಅದನ್ನು ತತ್‌ಕ್ಷಣ ನಿಲ್ಲಿಸುವುದು, ನಿಪುಣ ಸಾರಥಿಯಾದ ಖಾದಿರ್‌ನಿಗೂ ಸಾಧ್ಯವಾಗಲಿಲ್ಲ. ಹತ್ತುಮಾರು ಮುಂದೆ ಹೋಗಿ ಗಾಡಿ ನಿಂತ ಮೇಲೆ ಅಮೀನರು ಖಾದಿರ್‌ಗೆ "ನಿನ್ನ ಎತ್ತು ಗಾಡಿ ಜಪ್ತಿ ಮಾಡಿದ್ದೇನೆ. ನಡಿ ಕೋರ್ಟಿಗೆ ಹೊಡೆದುಕೊಂಡು'' ಎಂದರು. ಖಾದಿರ ಕೋಪದಿಂದ ಒಂದು ಸಲ ಅಮೀನರನ್ನೂ ಮತ್ತೊಂದು ಸಲ ವಿದ್ಯಾಶಂಕರರನ್ನೂ ನೋಡಿದ. ಅಮೀನರು ದರ್ಪದಿಂದ "ನನ್ನ ಮುಂದೆ ನಿನ್ನ ಜೋರು ನಡೆಯುವುದಿಲ್ಲ. ನಡೆ ಕೋರ್ಟಿಗೆ'' ಎಂದು ಗದರಿಸಿದರು! ವಿದ್ಯಾಶಂಕರರೂ ಅಮೀನರಿಗೆ ಸಹಾಯ ಮಾಡಬೇಕೆಂಬ ಉದ್ದೇಶದಿಂದ ಎತ್ತಿನ ಮೂಗುದಾರವನ್ನು ಹಿಡಿದರು. ಖಾದಿರ ಗಾಡಿಯಿಂದಿಳಿದು ಹೊರಟೇಹೋದನು.

ಅವೆನ್ಯು ರೋಡಿನಲ್ಲಿ ಒಂದು ಗಾಡಿ ಸುಮ್ಮನೆ ಅರ್ಧ ಗಂಟೆ ನಿಂತು ಬಿಟ್ಟರೆ ಜನ ಕೇಳುತ್ತಾರೆಯೆ? ಮೋಟಾರು ಜಟಕ ಲಾರಿ ಬೈಸಿಕಲ್ ಕಾಲಾಳು ಎಲ್ಲ ಹಿಂದೆ ಮುಂದೆ ಗೇರಾಯಿಸಿ ನಿಂತುಬಿಟ್ಟವು. ಗಾಡಿ ನಿಂತಿದ್ದ ಅಂಗಡಿಯವನಂತೂ ವಿದ್ಯಾಶಂಕರರನ್ನು ಒಂದೇ ಸಮನೆ ಗದರಿಸುತ್ತಿದ್ದ "ಗಾಡಿ ಮುಂದಕ್ಕೆ ಹೊಡೆಯುವದಕ್ಕೆ ನಿನಗೇನು ರೋಗ'' ಎಂದು ವಿದ್ಯಾಶಂಕರರನ್ನು ತಿವಿಯುವಂತೆಯೇ ಒಬ್ಬ ಜಟಕಾದವ ರೇಗಿದ. ಪಾಪ ವಿದ್ಯಾಶಂಕರರಿಗೆ ಯುದ್ಧಭೂಮಿಯಲ್ಲಿ ಸಿಕ್ಕಿಕೊಂಡ ನಿರಾಯುಧ ಸೈನಿಕನಂತೆ ದಿಕ್ಕೇ ತೋರದಾಯಿತು. ಅವರು ಅಮೀನರಿಗೆ "ಖಾದಿರ್ ಹೊರಟೇ ಹೋದ. ನಾವೂ ಇದನ್ನು ಇಲ್ಲಿಯೇ ಬಿಟ್ಟು ಹೊರಟು ಹೋಗಿಬಿಡೋಣ. ಆದಂತೆ ಆಗಲಿ'' ಎಂದರು. ಅವರಿಗೆ ಸದ್ಯ ಈ ಸ್ಥಳದಿಂದ ತಪ್ಪಿಸಿಕೊಂಡು ಹೋದರೆ ಸಾಕು ಎನಿಸಿತು. ಅಮೀನರು "ಛೆ ಛೆ ಎಲ್ಲಿಯಾದರೂ ಉಂಟೆ? ನಾನು ಜಪ್ತಿ ಮಾಡದಿದ್ದರೆ ನೀವು ಹೇಳಿದಂತೆ ಆಗಬಹುದಾಗಿತ್ತು. ಈಗ ಜಪ್ತಿಯಾದ ಮೇಲೆ, ಮಾಲು ಸರ್ಕಾರಕ್ಕೆ ಸೇರಿಹೋಯಿತು. ಕೋರ್ಟಿಗೆ ಹಾಜರುಪಡಿಸದೆ ಹೋದರೆ ನಾವಿಬ್ಬರೂ ಸಜಾ ಹೋಗಬೇಕಾಗುತ್ತೆ. ಎಲ್ಲಿ ಎತ್ತಿನ ಹಗ್ಗ ಹಿಡಿದುಕೊಂಡು ಗಾಡಿ ಹೊಡೆಯಿರಿ, ನಾನೂ ನಿಮ್ಮ ಹಿಂದೆಯೇ ಕುಳಿತುಕೊಂಡು ಸಹಾಯ ಮಾಡುತ್ತೇನೆ. ಕೋರ್ಟಿಗೆ ಹೋಗೋಣ. ಖಾದಿರ್ ಅಲ್ಲಿಗೆ ಬಂದೇಬರುತ್ತಾನೆ'' ಎಂದರು.

ವಿದ್ಯಾಶಂಕರರು ಹೇಗೋ ಗಾಡಿ ಹತ್ತಿ ಕುಳಿ

ತರು. ಗಾಡಿಯ ಮೂಕಿ, ಎತ್ತಿನ ಹೆಗಲಿನ ಮೇಲೆ, ಮೇಲಕ್ಕೂ ಕೆಳಕ್ಕೂ ತಕ್ಕಡಿಯ ಕೋಲಿನಂತೆ ತೂಗಾಡುತ್ತಿತ್ತು. ಗಾಡಿ ಎರಡು ಚಕ್ರಗಳ ಮೇಲೆ ನಿಂತಿದ್ದರೂ ವಿದ್ಯಾಶಂಕರರಿಗೆ ಅದು ಹೇಗೋ ಒಂದೇ ಚಕ್ರದ ಮೇಲೆ ನಿಂತಿರುವಂತೆಯೂ ತಾವು ಸ್ವಲ್ಪ ಅಲುಗಾಡಿದರೂ ಗಾಡಿಯೇ ನೆಲಕ್ಕೆ ಮಗುಚಿಕೊಳ್ಳುವಂತೆಯೂ ತೋರಿತು. ಅವರು ಹೇಗೋ ಒಂದು ಬಗೆಯ ಸಮತೂಕದಲ್ಲಿ ಗಾಡಿಯ ಮೇಲೆ ಕುಳಿತರು. ಎತ್ತಿಗೆ ಮೂಗುದಾರ ಹಾಕಿ, ಅದಕ್ಕೆ ಕಟ್ಟಿದ್ದ ಒಂದೇ ಹಗ್ಗವನ್ನು ಗಾಡಿಯವನು ಎತ್ತನ್ನು ಬೇಕಾದ ಕಡೆಗೆ ತಿರುಗಿಸಲು ಉಪಯೋಗಿಸುತ್ತಿದ್ದ. ವಿದ್ಯಾಶಂಕರರಿಗೆ ಆ ಒಂದು ಹಗ್ಗವನ್ನು ತಾವು ಹಿಡಿದುಕೊಂಡ ಕೂಡಲೇ, ಇದಕ್ಕೆ ಕುದುರೆಗೆ ಲಗಾಮು ಇರುವಂತೆ ಎರಡು ಕಡೆಗಳಿಗೂ ಹಗ್ಗ ಬೇಕು ಎಂದು ತೋರಿತು. ಅವರ ಹಿಂದೆ ಕುಳಿತಿದ್ದ ಅಮೀನರು ಸ್ವಲ್ಪ ಆಚೆ ಈಚೆ ಅಲುಗಾಡಿದರೂ ಗಾಡಿ ಸಮತೂಕ ತಪ್ಪಿದಂತೆ, ಎಲ್ಲಿ ಬಿದ್ದೇ ಬಿಡುವುದೋ ಎಂಬಂತೆ ಓಲಾಡುತ್ತಿತ್ತು.

ವಿದ್ಯಾಶಂಕರರಿಗೆ ಎಲ್ಲಕ್ಕಿಂತ ಹೆಚ್ಚು ಆಶ್ಚರ್ಯವಾದ ಸಂಗತಿಯೆಂದರೆ, ಆ ಬಲಿಷ್ಠವಾದ ಎತ್ತು, ಇವರು ಗಾಡಿಯ ಮೇಲೆ ಕುಳಿತುಕೊಂಡ ಮೇಲೆ ಏನು ಮಾಡಿದರೂ ಒಂದು ಹೆಜ್ಜೆ ಕೂಡ ಮುಂದಕ್ಕೆ ಹೋಗದುದು. ವಿದ್ಯಾಶಂಕರರು ಚಾವಟಿಯಿಂದ ಎಷ್ಟು ಏಟು ಕೊಟ್ಟರೂ ಅದು ನಿರ್ಲಕ್ಷ್ಯವಾಗಿ ಸುಮ್ಮನೆ ನಿಂತೇ ಇತ್ತು. ಕೊನೆಗೆ ಒಂದು ಸಲ ಇದ್ದಕ್ಕಿದ್ದಂತೆ ಒಂದೇ ಏಟಿಗೆ ನಾಗಾಲೋಟದಲ್ಲಿ ಓಡತೊಡಗಿತು. ಈ ಮೊದಲು ಅದನ್ನು ಹೊರಡಿಸುವುದಕ್ಕೆ ಹೇಗೆ ವಿದ್ಯಾಶಂಕರರಿಗೆ ಆಗಲಿಲ್ಲವೋ, ಈಗ ಅದನ್ನು ತಡೆಯುವುದಕ್ಕಾಗಲಿ, ತಮಗೆ ಬೇಕಾದ ಕಡೆಗೆ ಗಾಡಿಯನ್ನು ತಿರುಗಿಸುವುದಕ್ಕಾಗಲಿ, ವಿದ್ಯಾಶಂಕರರಿಗೆ ಸಾಧ್ಯವಾಗಲಿಲ್ಲ. ಆನೆಯ ಮರಿಯಂತೆ ನಾಗಾಲೋಟದಲ್ಲಿ ಓಡುತ್ತಿತ್ತು ಆ ಎತ್ತು! ಗಾಡಿಯಿಂದ ಯಾರಿಗೂ ಅಪಾಯವಾಗದಿರಲೆಂದು ವಿದ್ಯಾಶಂಕರರು ರಸ್ತೆಯಲ್ಲಿ ಮುಂದೆ ಇದ್ದವರನ್ನು ಎಚ್ಚರಿಸುತ್ತಾ ಗಟ್ಟಿಯಾಗಿ ಕೂಗುತ್ತಿದ್ದರು. ಆದರೂ ಎತ್ತು ಸರ್ಕಲ್‌ನ ಲಾಂದ್ರದ ಕಂಬದ ಎತ್ತರವಾದ ದಿನ್ನೆ ಏರಿ, ಬೈಸಿಕಲ್ ಸವಾರನೊಬ್ಬನನ್ನು ಕೆಡವಿ ಒಂದು ಜಟಕಾ ಗಾಡಿಯ ಚಕ್ರಕ್ಕೆ ಡಿಕ್ಕಿ ಹೊಡೆದು, ಸಿಮೆಂಟಿನ ಕಸದ ತೊಟ್ಟಿಯನ್ನು ಉರುಳಿಸಿ ವಿದ್ಯಾಶಂಕರರನ್ನೂ ಅಮೀನರನ್ನೂ ನಡುರಸ್ತೆಯಲ್ಲಿ ಕುಕ್ಕರಿಸಿತು. ಅವರಿಬ್ಬರೂ ಗಾಡಿಯಿಂದ ಬೀಳಲಿಲ್ಲ. ಆದರೆ ಗಾಡಿಯ ಎರಡೂ ಚಕ್ರಗಳೂ ಆ ಕಡೆಗೊಂದು ಈ ಕಡೆಗೊಂದು ಕಿತ್ತುಕೊಂಡು ಹೋಗಿ ಚರಂಡಿಗಳಿಗೆ ಬಿದ್ದುದರಿಂದ ಗಾಡಿ ನೆಲಕ್ಕೆ ಕುಕ್ಕರಿಸಿತ್ತು. ಇಲ್ಲದೆ ಹೋಗಿದ್ದರೆ ವಿದ್ಯಾಶಂಕರರೂ ಅಮೀನರೂ ಇನ್ನೂ ಎಷ್ಟು ದೂರ ಆ ನಿಲ್ಲದ ಬಂಡಿಯಲ್ಲಿ [ನಾನ್‌ಸ್ಟಾಪ್] ಸವಾರಿ ಮಾಡಬೇಕಾಗುತ್ತಿತ್ತೋ. ಖಾದಿರ್, ಗಾಡಿ ಬಿಟ್ಟು ಹೋಗುವಾಗ ಕಸಾಣಿಯನ್ನು ಕಿತ್ತುಕೊಂಡು ಹೋಗಿದ್ದುದು ಅನಂತರ ಅಮೀನರಿಗೆ ಗೊತ್ತಾಯಿತು. ಅಮೀನರು ಜತೆಯಲ್ಲಿಲ್ಲದೆ ಹೋಗಿದ್ದರೆ ವಿದ್ಯಾಶಂಕರರು ಗಾಡಿಯನ್ನು ಅಲ್ಲಿಯೇ ಬಿಟ್ಟು ಓಡಿಬಿಡುತ್ತಿದ್ದರು. ಆದರೆ ವಿರಾಟಪರ್ವದಲ್ಲಿ ಗೋಗ್ರಹಣ ಕ್ಷೇತ್ರದಿಂದ ಉತ್ತರನನ್ನು ಹಿಂದಕ್ಕೆ ಹೋಗಗೊಡದ ಬೃಹನ್ನಳೆ ಅರ್ಜುನನಂತೆ, ಅಮೀನರು ವಿದ್ಯಾಶಂಕರರನ್ನು ಕೋರ್ಟಿಗೆ ಹೋಗಿ ಎತ್ತು ಗಾಡಿ ಸ್ವಾಧೀನಕ್ಕೆ ತೆಗೆದುಕೊಂಡಲ್ಲದೆ ಬಿಡುವವರಾಗಿರಲಿಲ್ಲ. ಅಮೀನರೇ ಇನ್ನೊಂದು ಒಂಟೆತ್ತಿನ ಗಾಡಿ ಬಾಡಿಗೆಗೆ ಹಿಡಿದು, ಅದರ ಮೇಲೆ ಖಾದಿರನ ಚಕ್ರಗಳನ್ನೂ ಗಾಡಿಯನ್ನೂ ಇಡಿಸಿ, ಹಿಂದುಗಡೆ ಹಗ್ಗದಲ್ಲಿ ಎತ್ತನ್ನು ಹಿಡಿದುಕೊಳ್ಳುವಂತೆವಿದ್ಯಾಶಂಕರರಿಗೆ ಹೇಳಿದರು. ಯಾವ ಅವೆನ್ಯೂ ರೋಡ್‌ನಲ್ಲಿ ಗಾಡಿ ನಾಗಾಲೋಟದಲ್ಲಿ ಓಡಿದ್ದಿತೋ ಅದೇ ರೋಡ್‌ನಲ್ಲಿ ಈಗ ಆ ಗಾಡಿಯನ್ನೇ ಮತ್ತೊಂದು ಗಾಡಿಯ ಮೇಲೆ ಹೇರಿಕೊಂಡು, ಎತ್ತನ್ನು ಹಿಂದೆ ಎಳೆದುಕೊಂಡು ಹೋಗುವುದು ವಿದ್ಯಾಶಂಕರರಿಗೆ ಬೇಕಿರಲಿಲ್ಲ. ಅವರು ಯಾರುಯಾರನ್ನು ಕಾಣಬಾರದೆಂದು ಬಯಸುತ್ತಿದ್ದರೋ ಅವರೆಲ್ಲ ಈಗ ಅವರ ಎದುರಿಗೇ ಬರತೊಡಗಿದರು. ಅವರು ಎರಡು ಗಂಟೆಗೆ ಕೋರ್ಟನ್ನು ತಲಪಿದರು. ಮುರಿದ ಗಾಡಿಯನ್ನು ಎತ್ತುವುದಕ್ಕೆ, ಗಾಡಿ ಬಾಡಿಗೆಗೆ, ಅಮೀನರ ತಿಂಡಿಗೆ ಆ ದಿನವೇ ವಿದ್ಯಾಶಂಕರರಿಗೆ ಹದಿನೈದು ರೂಪಾಯಿ ಖರ್ಚಾಗಿತ್ತು.

ಕೋರ್ಟಿನ ಮುಂದೆ ಎತ್ತು ಮತ್ತು ಮುರಿದ ಗಾಡಿಯನ್ನು ವಿದ್ಯಾಶಂಕರರೂ ಅಮೀನರೂ ಹಾಜರ್ಮಾಡಿದಾಗ ಗಂಟೆ ಮೂರುವರೆ ಆಗಿತ್ತು. ಆಗ ನ್ಯಾಯಾಧಿಪತಿಗಳ ಮುಂದೆ ಒಬ್ಬ ಮುಲ್ತಾನಿ ಸೇಟ್ ಹಾಜರಾದನು. ಅವನ ಹೆಸರು ಟೇಕಂದಾಸ್ ಎಂದು. ಅವನು ಕೋರ್ಟಿಗೆ 'ಎತ್ತು ಗಾಡಿ ನನ್ನದು. ಖಾದಿರ ನನ್ನ ಆಳು. ಅವನನ್ನು ಇವರು ಅನ್ಯಾಯವಾಗಿ ಹಿಡಿದುಕೊಂಡು ಬಂದಿದ್ದಾರೆ. ಎತ್ತು ಗಾಡಿ ನನಗೆ ಹಿಂದಕ್ಕೆ ಕೊಡಿಸಬೇಕು. ನಷ್ಟವಾಗಿರುವ ಇವತ್ತಿನ ಬಾಡಿಗೆ ಹತ್ತು ರೂಪಾಯಿ ಕೊಡಿಸಬೇಕು. ಗಾಡಿಯನ್ನು ಮುರಿದು ಹಾಕಿದ್ದಾರೆ. ಅದರ ನಷ್ಟ ನೂರು ರೂಪಾಯಿ ಕೊಡಿಸಬೇಕು' ಎಂದು ಮುಚ್ಚಳಿಕೆ ಕೊಟ್ಟನು. ಅವನು ಒಬ್ಬ ವಕೀಲರನ್ನೂ ಗೊತ್ತು ಮಾಡಿಕೊಂಡಿದ್ದನು. ನ್ಯಾಯಾಧಿಪತಿಗಳು ಎರಡು ಕಡೆಯ ವಕೀಲರ ವಾದವನ್ನೂ ಖಾದಿರನ ಹೇಳಿಕೆಯನ್ನೂ ಕೇಳಿ 'ಮೊಖದ್ದಮೆ ತೀರ್ಮಾನವಾಗುವವರೆಗೆ ಎತ್ತು ಗಾಡಿ, ವಾದಿಯಾದ ವಿದ್ಯಾಶಂಕರರ ವಶದಲ್ಲಿಯೇ ಇರಲಿ. ಕೋರ್ಟಆರ್ಡರು ಆದಾಗ ಅವರು ಅವುಗಳನ್ನು ಸರಿಯಾದ ಸ್ಥಿತಿಯಲ್ಲಿ ಹಾಜರ್‌ಪಡಿಸಬೇಕು' ಎಂದು ಅಪ್ಪಣೆ ಮಾಡಿದರು. ಅಮೀನರಿಗೆ ಬಹಳ ಸಂತೋಷವಾಯಿತು. ಅವರು ವಿದ್ಯಾಶಂಕರರ ವೆಚ್ಚದಲ್ಲಿ ಮತ್ತೊಂದು ಸಲ ಕಾಫಿ ಕುಡಿದು, ಕೃತಕೃತ್ಯರಾಗಿ ಮನೆಗೆ ಹೋದರು. ಆ ವೇಳೆಗೆ ಐದು ಗಂಟೆಯಾದುದರಿಂದ ಕೋರ್ಟು ಬರಖಾಸ್ತು ಆಯಿತು.

ಸುಮಾರು ಹತ್ತು ನಿಮಿಷಗಳೊಳಗೇ, ಜೇನಿನ ಗೂಡಿನಂತಿದ್ದ ಕೋರ್ಟ ಆವರಣ ಬರಿದಾಗಿ ಮೌನವಾಯಿತು. ಮೋಟಾರಿನಲ್ಲಿಹೋಗುವವರು ಬೈಸಿಕಲ್‌ನಲ್ಲಿ ಹೋಗುವವರು ನಡೆದುಕೊಂಡು ಹೋಗುವವರು ಎಲ್ಲರೂ ತಮ್ಮ ತಮ್ಮ ನಿವಾಸ ಸ್ಥಳಗಳಿಗೆ ಹೊರಟುಹೋದರು. ಕೋರ್ಟಿನ ಆವರಣದಲ್ಲಿ ಉಳಿದವರು ವಿದ್ಯಾಶಂಕರರೊಬ್ಬರೇ. ಒಂದು ಮರದ ಕೆಳಗೆ ಅವರ ಮುರುಕಲು ಗಾಡಿ ಬಿದ್ದಿತ್ತು. ಅದರ ಮುರಿದ ಚಕ್ರಗಳನ್ನು ಆ ಮರಕ್ಕೆ ಒರಗಿಸಿದ್ದರು. ಅದೇ ಮರಕ್ಕೆ ಎತ್ತನ್ನೂ ಹಗ್ಗದಲ್ಲಿ ಬಿಗಿದಿದ್ದರು. ಆ ದಿನದ ಚಟುವಟಿಕೆಗಳನ್ನು ಬೆಳಗಿನಿಂದ ಜ್ಞಾಪಿಸಿಕೊಂಡು,ವಿದ್ಯಾಶಂಕರರಿಗೆ ಆ ಗಾಡಿ ಎತ್ತು ಯುದ್ಧ ಭೂಮಿಯ ಏಕಮಾತ್ರ ಅವಶೇಷವಾಗಿ ತೋರಿತು. ಎತ್ತನ್ನೂ ಗಾಡಿಯನ್ನೂ ಏನು ಮಾಡಬೇಕು, ಎಲ್ಲಿಗೆ ಸಾಗಿಸಬೇಕು. ಮನೆಯಲ್ಲಿ ನನಗೆ ಇರುವುದಕ್ಕೇ ಜಾಗ ಸಾಲದಲ್ಲ ಎಂದೆಲ್ಲ ಅವರು ಯೋಚಿಸುತ್ತಿರುವಾಗ, ಕೋರ್ಟ ಮುಗಿದ ಮೇಲೆ ಅದರ ಚಾವಡಿಯನ್ನು ಮನೆಯಾಗಿ ಮಾಡಿಕೊಳ್ಳುವ ಭಿಕ್ಷುಕರ ತಂಡ ಅಲ್ಲಿಗೆ ಬಂದಿತು. ಅವರು ಮೊದಲೇ ಗೊತ್ತಾಗಿದ್ದಂತೆ ತಮ್ಮ ತಮ್ಮ ಜಾಗೆಗಳನ್ನು ತಾವು ಆಕ್ರಮಿಸಿಕೊಂಡು ಅಲ್ಲಿ ತಮ್ಮ ಮಡಿಕೆ, ಈಚಲು ಚಾಪೆ, ಕಾಗದದ ಚಾಪೆ, ಭಿಕ್ಷಾಪಾತ್ರೆ ಇವುಗಳನ್ನು ವ್ಯವಸ್ಥಿತವಾಗಿ ಇಟ್ಟುಕೊಳ್ಳತೊಡಗಿದರು. ಐದು ಗಂಟೆಯಾದ ಮೇಲೆ ತಮ್ಮ ಸ್ವರಾಜ್ಯವಾದ ಆ ಸ್ಥಳದಲ್ಲಿ ವಿದ್ಯಾಶಂಕರರೇ ಅವರಿಗೆ ಆಗಂತುಕರಾಗಿ ತೋರಿದರು. ವಾಸ್ತವವಾಗಿ ವಿದ್ಯಾಶಂಕರರು ಒಬ್ಬ ಭಿಕ್ಷುಕನ ಸ್ಥಳವನ್ನೇ ಆಕ್ರಮಿಸಿಕೊಂಡು ನಿಂತಿದ್ದರು. ಸುತ್ತಲೂ ನೋಡಿದಾಗ ಅವರಿಗೆ 'ತಾವು ಮಾಡಬೇಕಾದ ಕಾರ್ಯವೇನೆಂಬುದು ಇವರೆಲ್ಲರಿಗೂ ಗೊತ್ತು. ಆದರೆ ನಾನೊಬ್ಬ ಮಾತ್ರ ಈಗ ಕರ್ತವ್ಯ ಮೂಢನಾಗಿದ್ದೇನೆ' ಎಂದು ತೋರಿತು. ವಿದ್ಯಾಶಂಕರರಿಗೆ ಆ ಬೆಳಗಿನಿಂದ ಆಹಾರವಿರಲಿಲ್ಲ. ಹಸಿವಿನಿಂದಲೂ ಅವರು ಕಂಗೆಟ್ಟಿದ್ದರು. ಅವರ ದೃಷ್ಟಿ, ಹಾಗೆಯೇ ತಮ್ಮ ಆಸ್ತಿಯಾದ ಎತ್ತಿನ ಕಡೆಗೆ ಹೋಯಿತು. ಇದ್ದಕ್ಕಿದ್ದಂತೆ ಎತ್ತಿನ ಕಣ್ಣಿನಲ್ಲಿ ಅವರಿಗೆ ಏನೋ ಒಂದು ಹೊಸ ನೋಟ, ಮನುಷ್ಯನ ನೋಟ, ತೋರಿತು. ಅದು ಕೂಡ ಇವರ ಸಂಕಟವನ್ನು ನೋಡಲಾರದೆ 'ಅಯ್ಯೋ ಪಾಪ' ಎನ್ನುವಂತಿತ್ತು. ಅದರ ಆ ಆತ್ಮೀಯ ನೋಟವನ್ನು ನೋಡಿ ವಿದ್ಯಾಶಂಕರರಿಗೆ 'ಪಾಪ ಇದಕ್ಕೂ ಬೆಳಗಿನಿಂದ ಹೊಟ್ಟೆಗಿಲ್ಲ' ಎಂದು ಎತ್ತಿನಲ್ಲಿ ಕನಿಕರವುಂಟಾಯಿತು.

ಸಂಜೆಯಾದ ಮೇಲೆ ಎಲ್ಲರೂ ಸಮಸ್ಯೆಗಳನ್ನೆಲ್ಲ ಬದಿಗೊತ್ತಿ ನಿರ್ಯೋಚನೆಯಿಂದ ತಮ್ಮ ತಮ್ಮ ನಿವಾಸಗಳನ್ನು ಸೇರುತ್ತಾರೆ. ಹಕ್ಕಿಗಳೂ ದನಗಳೂ ಸಹ ವಿಶ್ರಾಂತಿ ತೆಗೆದುಕೊಳ್ಳುತ್ತವೆ. ಭಿಕ್ಷುಕರೂ ತಮ್ಮ ತಮ್ಮ ಸ್ಥಳಗಳಲ್ಲಿ ಶಾಂತರಾಗಿ ಕುಳಿತಿದ್ದರು. ಆದರೆ ವಿದ್ಯಾಶಂಕರರಿಗೆ ಹೊಸ ಸಮಸ್ಯೆ ಪ್ರಾರಂಭವಾಗಿತ್ತು. ಎತ್ತನ್ನು ಏನು

ಮಾಡುವುದು ? ಕಣ್ಣಿಗೆ ಘೋರವಾದ ಆ ಮುರುಕಲು ಗಾಡಿಯನ್ನು ಏನು ಮಾಡುವುದು ? ಬೆಂಗಳೂರಿನಲ್ಲಿ ವಿದ್ಯಾಶಂಕರರು ತಿಂಗಳಿಗೆ ನಲವತ್ತು ರೂಪಾಯಿ ಸಂಪಾದಿಸುತ್ತಾ ಎರಡೇ ಕೊಠಡಿಗಳ ಮನೆಯಲ್ಲಿದ್ದವರು. ಮನೆಯುವರಿಗೇ ಸ್ಥಳ ಸಾಲುತ್ತಿರಲಿಲ್ಲ. ಎತ್ತನ್ನು ಮನೆಗೆ ಹೊಡೆದುಕೊಂಡುಹೋದರೆ ಮನೆಯುವರೆಲ್ಲಾ ಬೀದಿಯಲ್ಲಿಯೇ ಇರಬೇಕಾಗುತ್ತಿತ್ತು. ವಿದ್ಯಾಶಂಕರರು ಮತ್ತೆ ಒಂದು ಎತ್ತಿನ ಗಾಡಿ ಬಾಡಿಗೆಗೆ ಮಾಡಿಕೊಂಡು ಕೂಲಿಯಾಳುಗಳಿಂದ ತಮ್ಮ ಮುರಿದ ಗಾಡಿಯನ್ನು ಅದರ ಮೇಲೆ ಹೇರಿಸಿಕೊಂಡು ಹಿಂದಲಂತೆ ಎತ್ತನ್ನು ಕೈಯಲ್ಲಿ ಹಿಡಿದುಕೊಂಡು ಗಾಡಿಯಮೇಲೆ ಕುಳಿತು ತಮ್ಮ ಮನೆಗೆ ಹೊರಟರು. ಮತ್ತೆ ಅದೇ ಅವನ್ಯೂ ರೋಡಿನಲ್ಲಿ ಹೋಗುವಾಗ ಅವರು ಹಿಂದೆ ನೋಡಿದ್ದ ಅಂಗಡಿಯವರ ಕಣ್ಣಿಗೆ ಬೀಳಬಾರದೆಂದು ಮುಖ ಮುಚ್ಚಿಕೊಂಡಿದ್ದರು. ತಮ್ಮ ಮನೆಯ ಬಾಗಿಲಿನಲ್ಲಿ ಗಾಡಿ ಇಳಿಸಿ, ಬಾಡಿಗೆ ಕೊಟ್ಟು ಕಳುಹಿಸುವ ವೇಳೆಗೆ ಅವರ ಕೈಯಿಂದ ಮತ್ತೆ ೮ ರೂಪಾಯಿ ಖರ್ಚಾಗಿತ್ತು. ಬಾಗಿಲಿಗೆ ಅಡ್ಡಲಾಗಿ ಮುರಕಲು ಗಾಡಿ ಬಿದ್ದಿತ್ತು. ವಿದ್ಯಾಶಂಕರರು ಒಂದು ಅಂಗಡಿಗೆ ಹೋಗಿ ಒಂದೂವರೆ ರೂಪಾಯಿಯ ಹುಲ್ಲು ತಂದು ಎತ್ತಿಗೆ ಹಾಕಿದರು. ಇದ್ದ ಎರಡು ಕೊಠಡಿಗಳ ಪೈಕಿ, ಒಂದರಲ್ಲಿ ಎತ್ತನ್ನು ಕಟ್ಟಿ ಹಾಕಿ ಮನೆಯವರೆಲ್ಲ ಅಡಿಗೆ ಮನೆಯಲ್ಲಿಯೇ ರಾತ್ರಿಯನ್ನು ಕಳೆದರು. ಆ ರಾತ್ರಿಯೆಲ್ಲಾ ಅವರಿಗೆ ನಿದ್ರೆ ಬರಲಿಲ್ಲ. ಕೋರ್ಟು, ಎತ್ತು, ಅಮೀನ, ಖಾದಿರ್, ಮುರಿದ ಗಾಡಿ, ಭಿಕ್ಷುಕರು, ಟೇಕಂದಾಸ್, ಎತ್ತಿಗೆ ಜಾಗ, ನಿತ್ಯ ಎತ್ತಿನ ಹುಲ್ಲು ಖರ್ಚು ಈ ವಿಕೃತ ಮಾಯಾಲೋಕದಲ್ಲಿ ವಿದ್ಯಾಶಂಕರರು ಜ್ವರಪೀಡಿತರಾದವರಂತೆ ರಾತ್ರಿಯನ್ನು ಕಳೆದರು. ಅವರು ಎದ್ದು ಎತ್ತನ್ನು ಬೀದಿಗೆ ಕಟ್ಟುವವರೆಗೆ, ಮನೆಯವರಿಗೆ ಅಡಿಗೆ ಮನೆಯಿಂದ ಈಚೆಗೆ ಬರಲು ಅವಕಾಶವಿಲ್ಲದುದರಿಂದ ಮನೆಯವರು ಅಲ್ಲಿಯೇ ಇರಬೇಕಾಗಿತ್ತು. ಬಾಗಿಲಿಗೆ ಅಡ್ಡವಾಗಿ ಬಿದ್ದಿದ್ದ ಮುರಕಲು ಗಾಡಿಯನ್ನು ದಾಟಿಕೊಂಡೇ ಮನೆಯವರು ತಿರುಗುತ್ತಿದ್ದರು.

ಬೇರೇನೂ ಮಾಡುವುದಕ್ಕೆ ತೋರದೆ, ಬೆಳಗಾದ ಕೂಡಲೆ ವಿದ್ಯಾಶಂಕರರು ಎತ್ತನ್ನು ಹಿಡಿದುಕೊಂಡು ಅಡ್ವೊಕೇಟ್ ಶ್ರೀನಿವಾಸನ ಆಫೀಸಿಗೆ ಚಿಕ್ಕಪೇಟೆಗೆ ಹೋದರು. ಅಡ್ವೊಕೇಟ್‌ರ ಆಫೀಸ ಇದ್ದದ್ದು ಮಹಡಿಯ ಮೇಲೆ. ,ಎತ್ತು ಸರಾಗವಾಗಿ ಮಹಡಿಯ ಮೇಲೆ ಏರುವುದಾಗಿದ್ದರೆ ಅವರು ಅದನ್ನೂ ಮೇಲಕ್ಕೆ ನಡೆಸಿಕೊಂಡು ಹೋಗುತ್ತಿದ್ದರು. ಆದರೆ ಈಗ ಮಹಡಿಯ ಕೆಳಗೆ ಕಟಕಟೆಗೆ ಎತ್ತನ್ನು ಕಟ್ಟಿ ಹಾಕಿದರು. ಎತ್ತು ಮಹಡಿಯ ಮೆಟ್ಟಲಿಗೆ ಸರಿಯಾಗಿ ಅಡ್ಡವಾಗಿ ಮಲಗಿಕೊಂಡುಬಿಟ್ಟಿತು. ಮಹಡಿ ಹತ್ತುವದಕ್ಕೂ ಇಳಿಯುವುದಕ್ಕೂ ಅದು ಯಾರಿಗೂ ಅವಕಾಶ ಕೊಡುತ್ತಿರಲಿಲ್ಲ. ನಂದಿಕೇಶ್ವರನಂತೆ ಬೆಟ್ಟದ ಆಕಾರದಲ್ಲಿ ಮಹಡಿಯ ಮೆಟ್ಟಲುಗಳ ಬುಡದಲ್ಲಿ ಮಲಗಿದ್ದ ಎತ್ತು, ತನಗೆ ನಾಲ್ಕು ಏಟು ಬಿದ್ದರೂ ನ್ಯೈತಿಮಿರವೇ ಹೋಯಿತೆಂದು, ಮಲಗಿದ್ದ ಜಾಗ ಬಿಟ್ಟು ಅಲುಗಾಡುತ್ತಿರಲಿಲ್ಲ. ಯಾವ ಬೇಟೆ ನಾಯಿಯನ್ನು ಸಾಕಿಕೊಂಡಿದ್ದರೂ ಅಡ್ವೊಕೇಟರಿಗೆ ಇಂತಹ ರಕ್ಷಣೆ ದೊರಕುತ್ತಿರಲಿಲ್ಲ. ವಿದ್ಯಾಶಂಕರರ ಸಂಕಟ ಹೆಚ್ಚಾಗಿದ್ದರೂ ಸ್ವಾಭಾವಿಕವಾಗಿ ವಿನೋದಪ್ರಿಯರಾಗಿದ್ದ ಅಡ್ವೊಕೇಟರಿಗೆ ಸನ್ನಿವೇಶದ ಸ್ವಾರಸ್ಯ ರಸವತ್ತಾಗಿಯೇ ತೋರುತ್ತಿತ್ತು. ಈಶ್ವರನ ಬಾಗಿಲನ್ನು ಕಾಯುತ್ತಿದ್ದ ಬಸವೇಶ್ವರನಂತೆ ಮಲಗಿದ್ದ ಆ ಶ್ವೇತ ವೃಷಭ, ಒಬ್ಬಿಬ್ಬರು ಯೋಗ್ಯರಾದ ಕಕ್ಷಿಗಾರರನ್ನು ತಡೆದರೂ ಅನೇಕ ಕಿರುಕುಳದ ನಿರುದ್ಯೋಗಿಗಳನ್ನು ತಮ್ಮ ಬಳಿ ಬರದಂತೆ ಮಾಡಿದುದರಿಂದ ಅಡ್ವೊಕೇಟರಿಗೆ ಎತ್ತಿನ ಮೇಲೆ ಅಸಮಾಧಾನವೇ ಇರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅವರಿಗೆ ಸ್ವಾರಸ್ಯವಾಗಿ ತೋರಿದ ಸಂಗತಿಯೆಂದರೆ, ದಿನಕ್ಕೆ ಹತ್ತು ರೂಪಾಯಿ ದುಡಿದು ತನ್ನ ಹೊಟ್ಟೆಯನ್ನೂ ಖಾದಿರ್‌ನ ಹೊಟ್ಟೆಯನ್ನೂ ಬಹುಶಃ ಟೇಕಂದಾಸನ ಹೊಟ್ಟೆಯನ್ನೂ ಸಾಕಿದ ಆ ಎತ್ತು ಗಾಡಿ, ವಿದ್ಯಾಶಂಕರರ ಕೈಗೆ ಬಂದ ಕೂಡಲೇ, ವಿದ್ಯಾಶಂಕರರ ಪೂರ್ತ ಸಂಬಳ ಅದರ ಹುಲ್ಲಿಗೇ ವೆಚ್ಚವಾಗಿ ಅವರಿಗೆ ಒಂದು ಕಾಸೂ ಲಾಭ ಬರದಿದ್ದುದು. ಅಷ್ಟೇ ಅಲ್ಲ, ಆ ಎತ್ತಿನ ಕೈಯಿಂದ ತಪ್ಪಿಸಿಕೊಳ್ಳಲು ಏನಾದರೂ ವಿದ್ಯಾಶಂಕರರಿಗೆ ಸಾಧ್ಯವಾಗದುದು-ಎತ್ತು ವಿದ್ಯಾಶಂಕರರ ಸ್ವಾಧೀನಕ್ಕೆ ಬರಲಿಲ್ಲ. ವಿದ್ಯಾಶಂಕರರು ಎತ್ತಿನ ಸ್ವಾಧೀನಕ್ಕೆ ಹೋದರು ಎಂಬುದನ್ನು ನೆನೆದು ನೆನೆದು, ಅಡ್ವೊಕೇಟರಿಗೆ ನ್ಯಾಯಾಧಿಪತಿಗಳು ಎಷ್ಟೇ ಗಂಭೀರ ಮುಖಭಾವದಲ್ಲಿದ್ದರೂ ನಗು ಉಂಟಾಗುತ್ತಿತ್ತು.

ನಿತ್ಯ ಒಂದು ರೂಪಾಯಿ ಐದು ಆಣೆ ನಾಲ್ಕು ಪೈ ಸಂಪಾದಿಸುತ್ತಿದ್ದ ವಿದ್ಯಾಶಂಕರರು ಎತ್ತಿಗೆ ದಿನಕ್ಕೆ ಒಂದೂವರೆ ರೂಪಾಯಿ ಖರ್ಚು ಮಾಡಬೇಕಾಗುತ್ತಿತ್ತು. "ಸದ್ಯ ಜನ ಹುಲ್ಲು ತಿನ್ನುವುದಿಲ್ಲ. ಇಲ್ಲದಿದ್ದರೆ ಎತ್ತಿಗೆ ಹುಲ್ಲು ಸಹ ಸಿಕ್ಕುತ್ತಿರಲಿಲ್ಲ'' ಎಂದುಕೊಂಡರು ಅವರು. ಹೀಗೆ ಸುಮಾರು ಹದಿನೈದು ದಿನ ಎತ್ತು ಹುಲ್ಲು ತಿನ್ನುತ್ತಾ ಅಡ್ವೋಕೇಟರ ಬಾಗಿಲಿಗೇ ಕಾವಲಾಗಿತ್ತು. ಕೋರ್ಟಿನವರು ಕೇಳಿದಾಗ ಎತ್ತನ್ನು ಸರಿಯಾದ ಸ್ಥಿತಿಯಲ್ಲಿ ಹಾಜರು ಪಡಿಸದಿದ್ದರೆ ದಂಡ ಕೊಡಬೇಕಾದೀತೆಂದು ಅಡ್ವೋಕೇಟ್‌ರು ಸೂಚಿಸಿದರು. ವಿದ್ಯಾಶಂಕರರು ನಿತ್ಯ ಒಂದೂವರೆ ರೂಪಾಯಿಯ ಹುಲ್ಲು ತಿನ್ನಿಸುತ್ತಿದ್ದರೂ ಕೆಲಸವಿಲ್ಲದುದರಿಂದಲೋ ಏನೋ, ಎತ್ತು ದಿನದಿನಕ್ಕೆ ಬಡಕಲಾಗುತ್ತ ಬರತೊಡಗಿತ್ತು-ಕೊನೆಗೆ ಎತ್ತಿಗೆ ಹುಲ್ಲು ಹಾಕಲು ಅವರಿಗೆ ಸಾಧ್ಯವಾಗದಾಗ, ಒಂದು ರಾತ್ರಿ ಅವರು ಕಳ್ಳನಂತೆ ಎತ್ತನ್ನು ಅಡ್ವೊಕೇಟ್‌ರ ಬಾಗಿಲಿನಿಂದ ಹೊಡೆದುಕೊಂಡು ಹೋಗಿ, ಖಾದಿರನ ತಡಿಕೆ ಗುಡಿಸಲಿನ ಮುಂದೆ ಕಟ್ಟಿಬಿಟ್ಟರು. ಸಾಧಾರಣವಾಗಿ ಹೆಜ್ಜೆ ಇಡುವುದಕ್ಕೇ ಹಿಂತೆಗೆಯುತ್ತಿದ್ದ ಎತ್ತು ಖಾದಿರನ ಮನೆದಾರಿಗೆ ತಿರುಗಿಸಿದ ಕೂಡಲೇ ಸರಾಗವಾಗಿ, ತನಗೆ ಪ್ರಿಯವಾದ ಜಾಗಕ್ಕೆ ಹೋಗುತ್ತಿರುವುದು ಗೊತ್ತಾಗಿದ್ದಂತೆ ಸರಸರನೆ ಹೊರಟುಬಿಟ್ಟಿತು. ಎತ್ತನ್ನು ಖಾದಿರನ ಬಾಗಿಲಿನಲ್ಲಿ ಕಟ್ಟುತ್ತಿರುವಾಗ ಅವನಿಗೆ ಎಲ್ಲಿ ಎಚ್ಚರವಾಗಿ ತನ್ನ ಕಳ್ಳತನ ಗೊತ್ತಾಗಿಬಿಡುವುದೋ ಎಂದು ವಿದ್ಯಾಶಂಕರರಿಗೆ ಭಯವಾಗಿತ್ತು. ಮಾರನೆ ದಿನ ಬೆಳಿಗ್ಗೆ ಅವರು ಮೊದಲಿನಂತೆ ಮತ್ತೊಂದು ಎತ್ತಿನ ಗಾಡಿ ಬಾಡಿಗೆಗೆ ಗೊತ್ತು ಮಾಡಿ, ಅದರಲ್ಲಿ ತಮ್ಮ ಬಾಗಿಲಿನಲ್ಲಿದ್ದ ಮುರುಕು ಗಾಡಿಯನ್ನು ಹಾಕಿ ಖಾದಿರನ ಮನೆಯ ಗುರುತನ್ನು ಹೇಳಿ ಅಲ್ಲಿಗೆ ಹಾಕುವಂತೆ ಬಾಡಿಗೆ ಸಹ ಕೊಟ್ಟು ಕಳುಹಿಸಿಬಿಟ್ಟರು! ಬಹು ದಿನಗಳಿಂದ ಅವರಿಗೆ ಇರದಿದ್ದ ಮನಶ್ಶಾಂತಿ ಅಂದು ಉಂಟಾಯಿತು.

*    *    *

ಆ ಮಧ್ಯಾಹ್ನ ಅವರು ಅವೆನ್ಯೂ ರೋಡಿನಲ್ಲಿ ಹೋಗುತ್ತಿರುವಾಗ ಖಾದಿರ ಗಾಡಿಯನ್ನು ಸರಿಮಾಡಿಕೊಂಡು ಅದರ ಮೇಲೆ ೧೦-೧೨ ದೊಡ್ಡ ದೊಡ್ಡ ಮೂಟೆ ಹೇರಿಕೊಂಡು ಹೋಗುತ್ತಿದ್ದುದನ್ನು ನೋಡಿದರು. ಆಗಲೂ ಸಹ ಅವರಿಗೆ "ಇದನ್ನಿಟ್ಟುಕೊಂಡು ನಾನು ಮಾಡುವದೇನು? ನಾನು ಮಾಡಿದುದೇ ಸರಿ'' ಎಂಬ ಭಾವ ಮತ್ತೆ ಉಂಟಾಯಿತು. ಅಮಾನತ್‌ನಲ್ಲಿ ಇಟ್ಟಿದ್ದ ಮಾಲು ಹೀಗೆ ಫೋಲು ಆದುದಕ್ಕೆ ಅವನನ್ನು ಹೇಗೆ "ಬಚಾವ್'' ಮಾಡಿದರೋ ಅದು ಅಡ್ವೊಕೇಟ್ ಶ್ರೀನಿವಾಸರಿಗೆ ಮಾತ್ರ ಗೊತ್ತು. ಕೆಲವು ದಿನಗಳ ನಂತರ ಅಖಿಲ ಭಾರತ ಕೇಂದ್ರ ಚರಖಾ ಕಛೇರಿಯಿಂದ "ನೀವು ಖಾದಿರ್‌ಗೆ ಕೊಟ್ಟು ಕಳಕೊಂಡ ಇನ್ನೂರು ರೂಫಾಯಿಗಳನ್ನು ಕರಡು ಸಾಲದ (Bad debt) ಖಾತೆಗೆ ನರ್ಗಾಯಿಸಿದೆ. ನೀವು ಕೋರ್ಟಿಗೆ ಹೋಗಬೇಕಾದುದಿರಲಿಲ್ಲ. ಅನ್ಯಾಯಕ್ಕೆ ಪ್ರತೀಕಾರ ಮಾಡಬಾರದೆಂಬ ಮಹಾತ್ಮರ ವಾಕ್ಯ [Resist not evil] ಅಖಿಲ ಭಾರತ ಚರಖಾ ಸಂಘದ ಕೆಲಸಗಾರರಿಗೆ ತಿಳಿದಿರಬೇಕು,'' ಎಂದು ಕಾಗದ ಬಂತು.

ವಿದ್ಯಾಶಂಕರರು "ನಾನು ಸುಮ್ಮನೆ ಇದ್ದಿದ್ದರೆ ನೂರಾರು ರೂಪಾಯಿ ಉಳಿಯುತ್ತಿತ್ತು. 'ಕೋರ್ಟಿಗೆ ಹೋದವನು ಸತ್ತ' ಎಂಬುದನ್ನು ಕಲಿಯಲು ದಂಡ ತೆತ್ತಂತೆ ಆಯಿತು. ಆದರೆ ಇದರಲ್ಲಿಯೂ ಒಂದುಒಳ್ಳೆಅಂಶವಿದೆ. ಅದೇ ಶ್ರೀನಿವಾಸನಂತಹ ಅಡ್ವೊಕೇಟರು ಮತ್ತು ಅವರ ಸ್ನೇಹ'' ಎಂದುಕೊಂಡು ಶಾಂತರಾದರು.



# ಕಲಾಕೃತಿಗಳ ಪರಿಚಯಕ್ಕೆ

**'ಕಲೆಯ ಸೃಷ್ಟಿಯಾಗಲಿ' ಎಂದು ಎಂಥ ಅಧಿಕಾರಸಂಪನ್ನನೂ ಹೇಳಿ ಮಾಡಿಸಲಾರ. ಆದರೆ ನಿಜವಾದ ಕಲೆ ತಲೆಯೆತ್ತಿದಾಗ, ತಲೆಯೆತ್ತಿದಲ್ಲಿ ಅದನ್ನು ಗುರುತಿಸಲು ಜನತೆಗೆ ಶಿಕ್ಷಣ ಕೊಡುವುದು ನಮ್ಮ ಕೈಯಲ್ಲಿದೆ. ಸರಕಾರವು ಕಲೆಗೆ ಪ್ರೋತ್ಸಾಹ ಕೊಡುವ ಹೆಮ್ಮೆ ಕೊಚ್ಚಿಕೊಳ್ಳದೆ ಕಲೆಯ ಪರಿಚಯದ ವ್ಯವಸ್ಥೆಮಾಡುವದೊಳಿತು. . .**

ಲೇಖಕರು: ಶ್ರೀ ಶಿವರಾಮ ಕಾರಂತ

ಶಿಲ್ಪ, ಸಂಗೀತ, ನೃತ್ಯ, ಚಿತ್ರ ಮೊದಲಾದ ಕಲೆಗಳು, ಒಂದೊಂದು ಜನದ, ದೇಶದ, ಕಾಲದ ಮನಸ್ಸನ್ನು ಆಯಾ ಕಾಲದ ಆಯಾ ದೇಶದ ಕಲಾವಿದರ ಮೂಲಕ ಹೊರಹೊಮ್ಮಿಸುತ್ತವೆ. ಎಂಬುದರಿಂದ ಯಾವುದೇ ದೇಶದ ಹಿರಿಮೆಯನ್ನು ಸಂಸ್ಕೃತಿಯನ್ನು ಕುರಿತು ಹೇಳುವಾಗ ಅಲ್ಲಿನ ಕಲೆಗಳನ್ನು ಕುರಿತು ಹೇಳದಿದ್ದರೆ, ಆ ಮಾತು ಅಪೂರ್ಣವಾಗುತ್ತದೆ. ಪ್ರತಿಯೊಂದು ದೇಶದವರಿಗೂ ತಂತಮ್ಮ ಕಲೆಗಳ ವಿಚಾರದಲ್ಲಿ ಹೆಮ್ಮೆ ಇರುವುದು ಸ್ವಾಭಾವಿಕವೆ. ಕಾಲಪ್ರವಾಹದಲ್ಲಿ ಒಂದೇ ಬಗೆಯಲ್ಲಿ ಅಲ್ಲದಿದ್ದರೂ ಒಂದೊಂದು ರೀತಿಯಿಂದ ಒಂದೊಂದು ಕಲೆಯು ಉಚ್ಛ್ರಾಯ ಸ್ಥಿತಿಗೆ ಬಂದುದನ್ನೂ ಅವನತಿಗೆ ಮುಟ್ಟಿದ್ದುದನ್ನೂ ನಾವು ಕಾಣಬಹುದು.

ಇಂಥ ಏರಿಳಿತಗಳಿಗೆ ಏನು ಕಾರಣವೆಂದು ಹೇಳುವುದು ಕಷ್ಟ. ಜನರಲ್ಲಿ ಹಣ ಕಡಿಮೆಯಾಯಿತು. ಅವರು ಕಲಾವಿದರಿಗೆ ಕೊಡುವ ಪ್ರೋತ್ಸಾಹ ಕಡಿಮೆಯಾಯಿತು; ಅವರಿಗೆ ಸ್ವಾತಂತ್ರ್ಯವಿರಲಿಲ್ಲ— ಎಂಬ ಏನಾದರೂ ಕಾರಣದಿಂದ 'ಇಂಥ ಕಾಲದಲ್ಲಿ ಅಂಥ ಕಲೆ ಅವನತಿಗಿಳಿಯಿತು. ಜನ ಅದನ್ನು ಮರೆತರು'— ಎಂದು ಹೇಳಿ ಸಾಮಾನ್ಯವಾಗಿ ನಾವು ಸಮಾಧಾನ ತಂದುಕೊಳ್ಳುತ್ತೇವೆ. ಒಂದು ಕಾಲದಲ್ಲಿ ಚಿತ್ರಕಲೆ ಬೆಳೆಯುತ್ತಿರುವಾಗಲೆ ಶಿಲ್ಪ ಬೆಳೆಯದಿರುವುದುಂಟು. ಸಂಗೀತ, ನೃತ್ಯಗಳು ಅವನತಿಗಿಳಿಯಲೂಬಹುದು ಅಂಥ ನಿದರ್ಶನಗಳನ್ನು ಕಾಣುವಾಗ ಏನು ಸಮಾಧಾನ ಹೇಳಿಕೊಳ್ಳಬೇಕು? ಹಣವಿದ್ದರೆ, ಪ್ರೋತ್ಸಾಹವಿದ್ದರೆ ಯಾವ ಕಲೆಯೂ ಹುಟ್ಟುತ್ತದೆ, ಬೆಳೆಯುತ್ತದೆ ಎಂಬ ನಿಯಮವುಂಟೇ ? ಅವೆರಡೂ ಸೇರಿ ಕಲೆಯ ಹೆಸರಿನಲ್ಲಿ, ಕಲೆಯಲ್ಲದುದನ್ನು ಕೊಂಡಾಡುವ ಕಾಲವಾಗಿ ಬಂದು ಜನರ ಅಭಿರುಚಿಯ ಮಟ್ಟವೇ ಕೀಳಾದುದನ್ನೂ ನಾವು ಇತಿಹಾಸದಿಂದ ತಿಳಿಯುವದಕ್ಕೆ ಅವಕಾಶವಿದೆ.

ಕಲೆಗೆ ಪ್ರೋತ್ಸಾಹ ಬೇಕು; ಕಲಾವಿದನಿಗೂ ಪ್ರೋತ್ಸಾಹ ಬೇಕು.— ಈ ಮಾತು ನಿಜ. ಆದರೆ ಪ್ರೋತ್ಸಾಹದಿಂದಲೇ ಕಲಾವಿದ ಹುಟ್ಟುವುದಿಲ್ಲ, ಕಲೆಯೂ ಹುಟ್ಟುವುದಿಲ್ಲ. ಸಾಹಿತ್ಯವೂ ಹಾಗೆಯೇ. ಯಾವುದೋ ಒಂದು ಬಗೆಯ ಸಂಸ್ಕಾರವು ಜನತೆಯಲ್ಲಿ ಉಳಿದಿದ್ದು, ಆ ಸಂಸ್ಕಾರದ ದೆಸೆಯಿಂದ ಅನುಕೂಲದಿಂದ ಇಲ್ಲವೆ ಪ್ರತಿಕೂಲದಿಂದ ಕೆಲವೊಂದು ಸೂಕ್ಷ್ಮ ವ್ಯಕ್ತಿಗಳ ಮನಸ್ಸು ಜಾಗೃತವಾಗಿ, ಅನುಭವಗಳ ಹಿಗ್ಗು ತಗ್ಗಿನಲ್ಲಿ ಅವರು ತೇಲಾಡಿ, ಅವರ ಮನಸ್ಸು ಪರಿಣತಗೊಂಡು—ಕಲಾಸೃಷ್ಟಿಗೆ ಪ್ರೇರಣೆಯನ್ನು ಕೂಡ ಕೊಡಬಹುದು. ಆವರಣ, ಪ್ರೇರಣೆ ಅನುಭವಗಳನ್ನು ಒದಗಿಸಿಕೊಡುವ ಸಮಾಜವೊಂದು ಮೊದಲಿಗೆ ಉಂಟಾಗಿರಬೇಕು. ಇಂಥ ಕಲೆ ಹೇಗೆ ಇರಬೇಕು — ಎಂದು ಹೇಳುವುದಾಗಲಿ ನಿರ್ದೇಶಿಸುವುದಾಗಲಿ, ಯಾವೊಂದು ಜನಾಂಗದ ಹತೋಟಿಯಲ್ಲೂ ಇಲ್ಲದ ಸಂಗತಿ. ಒಬ್ಬ ಶ್ರೀಮಂತನೊ ಅರಸನೊ ಸರಕಾರದ ನಿರಂಕುಶ ಅಧಿಕಾರಿಯೊ ಪ್ರಜಾಪ್ರಭುತ್ವದಲ್ಲಿ ಆರಿಸಿ ಬಂದ ಅಧ್ಯಕ್ಷನೊ— ತಾನು ಕಲೆಗಳನ್ನು ಮೇಲೆತ್ತುತ್ತೇನೆ ಎಂದು ಸಾರುವದು ಒಣ ಜಂಭ. ಒಂದು ಜನಸಮುದಾಯದ ಮನಸ್ಸಿನಲ್ಲಿಯೇ ಅಂಥ ಆಕಾಂಕ್ಷೆ ಮೂಡಿದಲ್ಲಿ ಮಾತ್ರ ಅದು ಕಲಾವಿದನ ಬಾಳಿಗೆ ಹಿತಕರವಾದೀತು. ಆದರೆ ಅದರಿಂದಲೇ ಕಲಾಕೃತಿಗಳು ಹುಟ್ಟಿಯಾವು, ಹುಟ್ಟಬೇಕೆಂಬ ನಿಯಮವಿಲ್ಲ. ಸರಕಾರವೇ ಆಶ್ರಯದಾತರೋ ಕಲೆಗಳ ಉಚ್ಛ್ರಾಯವನ್ನು ಬಯಸುವುದಾದಲ್ಲಿ —ತಮ್ಮ ದೇಶದ ಇಲ್ಲವೆ ಅನ್ಯ ದೇಶಗಳ, ಉತ್ತಮ ಕಲೆಗಳ ಪರಿಚಯವನ್ನು ಜನಕ್ಕೆ ಮಾಡಿಕೊಡುವುದಕ್ಕೆ ಪ್ರಯತ್ನಿಸಬಹುದು.

ಕಲಾವಿದನು ಒಂದೊಂದು ಜನದ, ದೇಶದ ಅದೃಷ್ಟದ ಫಲ; ಸುದೈವ ಎಂದರೂ ಸಂದೀತು. ಅವನಿದ್ದೂ ಅವನನ್ನು ಗುರುತಿಸಲಾರದಂಥ ಜನವರ್ಗವಿರಬಹುದು. ಅವನು ಸತ್ತ ಮೇಲೆ ಅವನನ್ನು ಎತ್ತಿ ಹಿಡಿದು, ಮರಣಾನಂತರದ ಗೌರವವನ್ನೆಲ್ಲಾ ಸಲ್ಲಿಸಬಹುದು. ಅವನು ಬದುಕಿದಾಗ ತಂತಮ್ಮ ಅಭಿಮಾನ, ಆಶ್ರಯಗಳನ್ನು ಕಲೆಯ ಸೋಗಿನಲ್ಲಿ ಮೆರೆಯುವ—ತಮ್ಮ ಆಪ್ತರಿಗೊ, ಇಷ್ಟರಿಗೊ, ತಮ್ಮ ಅಹಂಕಾರವನ್ನು ಪೋಷಿಸುವ ವಂಚಕರಿಗೊ ದಾನಮಾಡಿ, ಒಳ್ಳೆಯ ವಸ್ತುವನ್ನು ಜನ ಗುರುತಿಸಿ ತಿಳಿಯುವುದಕ್ಕೆ ಏನೇನು ಅಡಚಣೆಗಳು ಬೇಕೊ, ಅದನ್ನೆಲ್ಲ ತಿಳಿದೋ ತಿಳಿಯದೆಯೋ ತಂದೊಡ್ಡಬಹುದು. ಗೌರವ,ಆಶ್ರಯ,ಬಹುಮಾನ--ಎಂದೊಡನೆಯೇ ಜನಕ್ಕೆ ಒಂದಲ್ಲ ಒಂದು ಬಗೆಯ ಲಾಭದ ಪ್ರತಿಫಲದ ಆಸೆಯುಂಟಾಗುವುದರಿಂದ, ಅರ್ಹರಲ್ಲದವರು ಮುಂದೆ ಬಂದು ಈ ಬಗೆಯ ಅಪಾತ್ರ ದಾನಕ್ಕೆ ಇನ್ನಷ್ಟು ಅವಕಾಶವಿದೆ. ಇದಕ್ಕಾಗಿ ನಿರ್ಮಿಸುವಂಥ ಸಂಸ್ಥೆಗಳಲ್ಲಿ, ಕಲೆಗೆ ಆಶ್ರಯವನ್ನು ಹಂಚಬೇಕೆಂದಿರುವ ಸಂಸ್ಥೆಗಳಲ್ಲಿ, ಈ ಕೆಲಸ ಮಾಡುವುದಕ್ಕೆ ಆಯಾ ಕಲೆಗಳ ಪರಿಜ್ಞಾನವನ್ನು ಗಳಿಸಿದ, ಅವುಗಳ ವಿಶಾಲಕ್ಷೇತ್ರವನ್ನು ನಿರೀಕ್ಷಿಸಿದ ಎಷ್ಟು ಮಂದಿಯನ್ನು ನಾವು ಕಾಣಬಹುದು? ನೆಪಕ್ಕೆ ಕೆಲವರಿರಬಹುದು. ಅಂಥವರನ್ನು ಮೀರಿಸುವ ಅಧಿಕಾರ, ಸಂಖ್ಯೆಗಳು ಉಳಿದವರ ಕೈಯಲ್ಲಿದ್ದು, ಮಾಡುವ ಕೆಲಸಕ್ಕೆ ಯೋಗ್ಯ ರೂಪ ಬರಲಾರದ ಸಂಭವವೇ ಅಧಿಕ. ಹೀಗಿರುವಲ್ಲಿ ಇಂಥದನ್ನು ಮಾಡದಿದ್ದರೂ ಯಾವ ಹಾನಿಯೂ ಆಗಲಾರದು.

ಕಲೆಯ ಪರಿಚಯವನ್ನು ಜನಕ್ಕೊದಗಿಸುವ ಕೆಲಸ ಮುಖ್ಯವಾದುದು. ಬಲ್ಲವರು ಅದಕ್ಕಾಗಿ ದುಡಿದು ಜನಕ್ಕೂ ಕಲಾವಿದನಿಗೂ ನಡುವೆ ಬೇಕಾದ ತಿಳಿವಿನ ಆವರಣವನ್ನು ಹುಟ್ಟಿಸುವುದು ಇನ್ನಷ್ಟು ಮುಖ್ಯವಾದುದು. ಕಲೆಯ ಪರಿಚಯಕ್ಕೆ ವಿಘಾತಕವಾದ ತಪ್ಪು ಗ್ರಹಿಕೆಗಳನ್ನು, ಅಸಂಗತ ಪ್ರವೃತ್ತಿಗಳನ್ನು, ದುಷ್ಟ ಅಭಿರುಚಿಗಳನ್ನು ನಿವಾರಿಸಿಕೊಳ್ಳಬೇಕಾದದ್ದು ಇನ್ನೂ ಮುಖ್ಯ ಕೆಲಸ. ಭಾರತದಂತಹ ದೇಶದಲ್ಲಿ ಧಾರಾಳವಾದ, ಸುಂದರವಾದ, ಶಕ್ತಿಯುತವಾದ ಕಲಾಸಂಪ್ರದಾಯಗಳು ಪರಂಪರೆಯಿಂದ ನಮ್ಮ ಕೈಗೆ ಬಂದಿವೆ. ಈ ಪರಂಪರೆಯನ್ನು ಕೆಡಿಸುವುದಕ್ಕೆ, ಕಲೆಯಲ್ಲದ ದಾರಿಗೆ ತಿರುಗಿಸುವುದಕ್ಕೆ, ಸಂಪ್ರದಾಯವನ್ನೇ ಕಡಿದು ಮೂಲೆಪಾಲು ಮಾಡುವುದಕ್ಕೆ, ಹಿಂದಿನವರೂ ಹೊಣೆಗಾರರಾಗಿದ್ದಾರೆ; ಇಂದಿನ ನಾವೂ ಹಾಗೇ ಮಾಡುತ್ತಿದ್ದೇವೆ. ಇಂದು ನಮ್ಮಲ್ಲಿ ಉಂಟಾಗಿರುವ ವಾತಾವರಣ — ಹಿಂದಿನ ಶಿಲ್ಪ, ಚಿತ್ರ, ಗೀತ, ನೃತ್ಯ ಯಾವುವನ್ನೂ ಅರ್ಥ ಮಾಡಿಕೊಳ್ಳಲಾರದ ಸ್ಥಿತಿಯಲ್ಲಿದೆ. ಏಕೆ ಹೀಗಾಯಿತು? ಆಗದಂತೆ ಏನು ಮಾಡಬೇಕು--ಎಂಬುದನ್ನು ವಿಚಾರಿಸುವುದೂ ನಮ್ಮ ಕರ್ತವ್ಯ. ನಮ್ಮ ಹಳೆಯ ಶಿಲ್ಪವನ್ನೇ ಆಗಲಿ, ಚಿತ್ರವನ್ನೇ ಆಗಲಿ ಜನಗಳ ಮುಂದಿರಿಸಿದರೆ, ಮುಂದಿರಿಸುವಾಗ ಒಳ್ಳೆಯದನ್ನೂ ಕೆಟ್ಟದನ್ನೂ ಸೇರಿಸಿ ಜತೆಯಲ್ಲೇ ಇರಿಸಿದರೆ, ನೋಡುವ ಜನ 'ಇವೆರಡೂ ಚೆನ್ನಾಗಿವೆ'- ಎಂದು ಹೊಗಳಿಬಿಡಬಹುದು. 'ಇವೆರಡಕ್ಕೂ

ಅರ್ಥವಿಲ್ಲ' ಎಂದು ತೆಗಳಿ ಬಿಡುವುದುಂಟು. ಹಳೆಯದರಲ್ಲಿ ಒಳ್ಳೆಯದಿದೆ, ಕೆಟ್ಟದಿದೆ, ಅನುಕರಣೆ ಇದೆ; ಸೌಂದರ್ಯವಿದೆ; ಸುಂದರವಲ್ಲದ್ದಿದೆ. ಒಂದು ಕಲಾ ಸಂಪ್ರದಾಯವನ್ನು ತಿಳಿದರೂ ಕಲಾಕೃತಿಯನ್ನು ಗುರುತಿಸಿ ಮೆಚ್ಚುವುದು ಸುಲಭವಲ್ಲ. ಅದಕ್ಕೆ ನೋಡುವವನ ಮನಸ್ಸೂ ಸಂಸ್ಕೃತವಾಗಿರಬೇಕು. ಈ ಮಾತು ಇಂದಿನ ಕಲೆಗಳಿಗೂ ಒಪ್ಪುತ್ತದೆ.

ಹಿಂದಿನವರೂ ತಮ್ಮ ಅನೇಕ ಕಲೆಗಳ ಅವನತಿಗೆ ಕಾರಣವಾದರು ಎಂದು ನುಡಿದೆ.

ಆ ಸಂಪ್ರದಾಯ ಮತ್ತು ಕೃತಿಗಳಿಗೆ ಯಾರು ಹೊಣೆಯೋ ಅವರೇನೇ ಅದನ್ನೇ ಕೆಡಿಸುವುದಕ್ಕೂ ಕಾರಣರು ಎಂಬುದು ನಿರ್ವಿವಾದದ ಮಾತು. ಇದಕ್ಕೆ ಕೆಲವು ನಿರ್ದಿಷ್ಟ ಉದಾಹರಣೆಯನ್ನು ನಾನು ಕೊಡಬೇಕಾಗುತ್ತದೆ. ಸಾರನಾಥದ ಬುದ್ಧ ವಿಗ್ರಹವನ್ನು ಅಥವಾ ಅನುರಾಧಪುರದ ಬುದ್ಧವಿಗ್ರಹವನ್ನು—ಅನಂತರದ ಕೆಲವು ವಿಗ್ರಹಗಳಿಗೆ ಹೋಲಿಸುವ. ಗುಪ್ತಕಾಲದ ಸೂರ್ಯ, ವಿಷ್ಣು ಮೊದಲಾದ ದೇವತೆಗಳ ವಿಗ್ರಹಗಳನ್ನು ಬೇಲೂರಿನ ಚನ್ನಕೇಶವನೊಂದಿಗೋ ಹಳೆಬೀಡಿನ ಧಾರೇಶ್ವರ ದೇವಾಲಯದ ಹೊರಗಣ ಗೊಂಬೆಗಳಿಗೋ ಹೋಲಿಸಿ ನೋಡೋಣ. ಹಾಗೆಯೇ ಹದಿಮೂರು ಹದಿನಾಲ್ಕನೆಯ ಶತಮಾನದ ರಜಪೂತ ಚಿತ್ರಗಳನ್ನು ಕಾಂಗ್ರಾ ಕಣಿವೆಯ (ಒಂದೇ ಸಂಪ್ರದಾಯದ ವಿವಿಧ ಫಲಗಳು) ಚಿತ್ರಗಳಿಗೆ ಹೋಲಿಸುವ. ಸಂಗೀತದಲ್ಲಿ ತ್ಯಾಗರಾಜ, ಪುರಂದರ, ತುಲಸೀದಾಸ, ಸೂರದಾಸರ ಮೂಲ ಕೃತಿಗಳನ್ನು ಅವುಗಳ ಮೂಲರೂಪಕ್ಕೆಷ್ಟೇ ಇರಿಸಿಕೊಂಡು, ಅದನ್ನೇ ಒಂದು ತಾಸಿನ ತನಕ ವಿಸ್ತರಿಸುವ ರಾಗತಾಲಸಾರ್ವಭೌಮರಾದ ಆಧುನಿಕ ಭಾಗವತರ ಹಾಡುವಿಕೆಗೆ ಹೋಲಿಸುವ. ಆಗ ಪೂರ್ವವಸ್ತುವಿಗೂ ಅಪರ ವಸ್ತುವಿಗೂ ಇರುವ ಅಂತರ ಸ್ಪಷ್ಟವಾಗಿ ಕಾಣುತ್ತದೆ. ಅದು ಅಜಗಜಾಂತರವಲ್ಲ, ಅಜ-ದಿಗ್ಗಜಾಂತರ. ಎಲ್ಲಿಯೋ ನಡುವಣ ಕಾಲದಲ್ಲಿ ನಮ್ಮ ಜನವರ್ಗ ಅದರಲ್ಲಿಯೂ ಕಲೆಯ ಹೆಸರಿನಲ್ಲಿ ಹಾಡಿದವರು, ಕೆತ್ತಿದವರು, ಬರೆದವರು—ತಪ್ಪಿ ಅಡ್ಡ ಹಾದಿ ಹಿಡಿದುದು ಸ್ಪಷ್ಟವಾಗಿ ಕಾಣಿಸುತ್ತದೆ. ನಾನು ಮೇಲೆ ವಿವರಿಸಿದ ಮೂಲ ಕೃತಿಗಳಲ್ಲಿ—ಪ್ರಜ್ಞಾಬದ್ಧವಾದ ಪಾಂಡಿತ್ಯದ ಲವಲೇಶವಿಲ್ಲ. ತಂತ್ರಶಾಸ್ತ್ರದ ಆರ್ಭಟೆ, ವಿಸ್ತಾರಗಳೊಂದೂ ಇಲ್ಲ. ಮೊಹೆಂಜೊದಾರೊ, ಹರಪ್ಪಾಗಳ ಮುದ್ರೆ, ಗೊಂಬೆಗಳನ್ನು ಕಂಡರೆ ಅಲ್ಲಿನ ಕಲಾವಿದನಲ್ಲಿ ಇನ್ನೂ ಸರಳ ಮನಸ್ಸು, ಸ್ಪಷ್ಟ ಭಾವಗಳನ್ನು ಪ್ರಜ್ಞೆಯ ಅರಿವಿಲ್ಲದೆ, ಪ್ರತಿಭೆಯ ಒತ್ತಡದಿಂದ ಭಾವಕ್ಕೆ ರೂಪು ಕೊಟ್ಟು ಅದ್ಭುತ ಶಕ್ತಿಯನ್ನು ಕಾಣಬಹುದು. ಅಂಥ ಶಕ್ತಿಯುಳ್ಳವರು ಎಂದೆಂದೂ ಕೆಲವರೇ ಇರುತ್ತಾರೆ. ಅಂಥವರು ಮಾತ್ರ ಭಾವದ ಗಾತ್ರಕ್ಕೆ ಸಮನಾದ ಕೃತಿಯನ್ನೇ ನಿರ್ಮಿಸಬಹುದು. ಅನುಭವ, ಭಾವಗಳನ್ನು ಅದುಮಿ ಹಿಡಿಯಲಾರದ ಒತ್ತಡದಿಂದಲೇ ಕಲೆಯ ಸೃಷ್ಟಿಯಾಗಬೇಕೆಂದು ನಡೆದುಕೊಂಡಲ್ಲಿ ಅಂಥ ಪ್ರೇರಣೆಯಿಲ್ಲದ ಎಂಥ ವಿದ್ವತ್ತೂ, ತಂತ್ರಶಾಸ್ತ್ರವೂ ಬಣ್ಣಬೆಡಗೂ—ಎಂದೂ ಚಿತ್ರವಾಗದು, ಶಿಲ್ಪವಾಗದು, ಸಂಗೀತವಾಗದು. ಹಾಗಿದ್ದರೆ ಅಂಥ ಶಕ್ತಿಯಿಲ್ಲದಂಥ ಶಿಷ್ಯಪರಂಪರೆ ಏನು ಮಾಡಬೇಕು?

ಯಾವ ಗುರುವೂ—ತನ್ನ ಶಿಷ್ಯನಲ್ಲಿ ಕಲೆಗೆ ಬೇಕಾದ ಪ್ರತಿಭೆಯನ್ನು ಕಲ್ಪಿಸಲಾರ. ಭಾವಾನುಭವಗಳಿಗೆ ಪರಿಸ್ಫುರಿಸಬೇಕಾದ ಹೃದಯವು ಶಿಷ್ಯನಲ್ಲಿ ಮೊದಲಿಗೆ ಇದ್ದೇ ತೀರಬೇಕು. ಗುರು ಹೇಳಿಕೊಡಬಹುದಾದುದು—ಅವನು ಪ್ರಕಟಿಸಬಹುದಾದ ದಾರಿ, ರೀತಿಗಳನ್ನು ಎಷ್ಟೋ ಬಾರಿ ಅದು ಪರಂಪರೆಯ ಶೈಲಿಯನ್ನು ಅನುಸರಿಸುತ್ತದೆ. ತನ್ನಲ್ಲಿ ಜೀವ ಭಾವಗಳಿಲ್ಲದವನು ಶೈಲಿಯ ಹೆಣವನ್ನು ಹೊತ್ತುಕೊಂಡು 'ಕಲಾವಿದ' ನೆಂಬ ಅಹಂಕಾರ ತಾಳಿ ಮೆರೆಯತೊಡಗುತ್ತಾನೆ. ಆಗ 'ಕಲೆ'ಗೆ ದೊರಕಬೇಕಾದ ಮನ್ನಣೆಯನ್ನು 'ತಾನು' ಗಳಿಸುವ ಚಪಲದಿಂದ, ಅವನಲ್ಲಿ ಪಾಂಡಿತ್ಯ, ಶಾಸ್ತ್ರಪ್ರದರ್ಶನ ಬೆಳೆದೇ ಬೆಳೆಯುತ್ತದೆ. ಆಗ ಬೆಳೆಯುವುದು, ಮೆರೆಯುವುದು, ಮನ್ನಣೆಯ ಲಾಭವನ್ನು ಪಡೆಯುವುದು—ಸಾಧನ, ಶಾಸ್ತ್ರ, ಪಾಂಡಿತ್ಯ, ತಂತ್ರಗಳು ಮಾತ್ರ ಅದು ಕಸುಬುಗಾರಿಕೆ. ಕಸುಬುಗಾರಿಕೆ 'ಕಲೆ'ಯೆನಿಸಿಕೊಳ್ಳತೊಡಗಿತು ನಮ್ಮ ದೇಶದಲ್ಲಿ. ಭಾವದ ಪ್ರೇರಣೆ ಇಲ್ಲದಿದ್ದರೂ ಚಿತ್ರ, ಶಿಲ್ಪ ಮಾಡಲು ಹೊರಟ ಜನಗಳಿಂದ ಈ ಶಾಸ್ತ್ರ ಪ್ರದರ್ಶನದ ಕೆಲಸ ನಡೆದೇ ನಡೆಯುತ್ತದೆ. ಇಂಥದು ನಮ್ಮ ದೇಶದಲ್ಲಿ ಅಪಾರವಾಗಿ ಬೆಳೆದಿದೆ. ಅದು ಎಷ್ಟೊಂದು ವಿಶೇಷವಾಗಿ ಬೆಳೆದಿದೆ ಎಂದರೆ ಈ 'ಸಾಧನವೇ' ಧ್ಯೇಯವಾಗಿದೆ. ಅವರಿಗೆ ದೇಹವೇ ಜೀವವಾಗಿದೆ. ಶಾಸ್ತ್ರದ ಡೊಂಬರಾಟವೇ 'ಕಲೆ' ಯಾಗಿದೆ. ಗುಪ್ತಕಾಲೀನ ವಿಗ್ರಹಗಳಲ್ಲಿನ ಸ್ಫೂರ್ತಿ, ಸಾರನಾಥ ಬುದ್ಧ ವಿಗ್ರಹದ ಧೀಮಂತ ರೂಪ,ಆ ಹಳೇಬೀಡು ಬೇಲೂರುಗಳ ಗೋಡೆಯಲ್ಲಿ ಕಾಣಿಸುವುದಿಲ್ಲವೇಕೆಂದರೆ, ಇಲ್ಲಿ ಕಾಣುವುದು ಕಸುಬುಗಾರಿಕೆ, ವಿಚಿತ್ರವಾದ ಅಲಂಕಾರ. ಈ ಕಸುಬುಗಾರರು ಕೆತ್ತಿದ್ದು ದೇವಿ, ದೇವರುಗಳ ರೂಪವನ್ನಾದರೂ ಆ ದೇವತೆಗಳು ತೊಟ್ಟ ಆಭರಣ, ಅಲಂಕಾರಗಳಷ್ಟೇ, ಭಾರವಾದ ಮೊದ್ದು, ಜಡ, ಸ್ಫೂರ್ತಿ ಹೀನ ಗೊಂಬೆಗಳ ಸಾಲು ಅದು. ಶಿಲ್ಪಕ್ಕೆ ಅತಿ ಹೆಚ್ಚಿನ ಪ್ರೋತ್ಸಾಹ, ರಾಜಮನ್ನಣೆ ದೊರೆತ ಕಾಲವೇ ಇದಾದರೆ, ಶಿಲ್ಪದ ಅತ್ಯಂತ ಅವನತ ರೂಪ ಕಾಣಬಹುದಾದ ಕಾಲವೂ ಅದೇನೆ.

ಈ ಮಾತು ಎಷ್ಟು ನಿಜವೋ, ಒಂದು ಸಂಪ್ರದಾಯದಲ್ಲಿ ಎಷ್ಟೇ ಕೊರತೆ ತುಂಬಿದ್ದರೂ ಅದರ ಪರಿಚಯವಿಲ್ಲದೆಯೆ ಆ ಮೂಲಕವಾಗಿ ಪ್ರಕಟವಾಗುವ ಕಲಾಕೃತಿಗಳ ಪರಿಚಯವಾಗುವುದು ಕಷ್ಟವೆಂಬ ಮಾತು ಅಷ್ಟೇ ನಿಜ. ಕಲಾವಿದನ ಹೃದಯಕ್ಕೂ ಜನತೆಯ ಮನಸ್ಸಿಗೂ ಸೇತುವೆಯನ್ನು ನಿರ್ಮಿಸಿ ವ್ಯವಹಾರವನ್ನು ಸಾಧ್ಯವನ್ನಾಗಿ ಮಾಡುವ ಹೊಣೆಯು ಸಂಪ್ರದಾಯದ್ದು. ಸಂಪ್ರದಾಯ ಪರಿಚಯಕ್ಕೆ ಸಹಾಯವಾಗಬೇಕು.

ಆದರೆ ಕಲಾವಿದನು ಸಂಪ್ರದಾಯದ ಆಳಲ್ಲ; ಅರಸು. ಸಂಪ್ರದಾಯ ಅವನಿಗಾಗಿ ಇದೆ. ಅವನೇ ಅದನ್ನು ಹುಟ್ಟಿಸುವವನು, ಬೆಳೆಯಿಸುವವನು. ಅವನಿಗೆ ಅದು ತೊಡಕಾಗಿ ಕಂಡಲ್ಲಿ ಅದನ್ನು ತಡೆಯುವವನು.

ಕಲಾವಿದನು ನಮ್ಮ ಕಣ್ಣ ಮುಂದೆ ಇರಲಿ ಇಲ್ಲದಿರಲಿ, ಅವನ ಕೃತಿಯ ಪರಿಚಯ, ಪ್ರಭಾವಗಳು ನಮ್ಮ ಮೇಲೆ ಉಂಟಾಗುವದಕ್ಕೆ ನಮ್ಮಲ್ಲಿ ಎಂಥ ಸಂಸ್ಕೃತಿ ಇರಬೇಕೆಂದು— ಈಗ ವಿಚಾರಿಸೋಣ. ಒಂದೊಂದು ಬಗೆಯ ಕಲೆಗೂ ಆಯಾ ಸಾಧನಗಳ ವೈಶಿಷ್ಟ್ಯದಿಂದ ಬೇಕಾಗುವ ಪರಿಚಯದ ರೂಪ ಬದಲಾಗುತ್ತದೆ. ಆದರೆ ಒಂದರ ವಿಸ್ತಾರವನ್ನು ತಿಳಿದಲ್ಲಿ- ಇನ್ನೊಂದರ ರೀತಿ ಬಗೆಗಳನ್ನು ವಿಸ್ತಾರಗಳನ್ನು ಊಹಿಸಿಕೊಳ್ಳುವದು ಸಾಧ್ಯ. ಅದುದರಿಂದ ಈ ಪ್ರಸ್ತಾಪಕ್ಕೆ ಉದಾಹರಣೆಯಾಗಿ ಚಿತ್ರಲೇಖನಕ್ಕೆ ಸಂಬಂಧಿಸಿದ ನಾಲ್ಕು ಮಾತುಗಳನ್ನು ನಾನಿಲ್ಲಿ ಹೇಳುತ್ತೇನೆ. ನಮ್ಮ ದೇಶದ ಮತ್ತು ಅನ್ಯದೇಶಗಳ ಅನೇಕಾನೇಕ ಚಿತ್ರಗಳನ್ನು ನೋಡಿದ ಮೇಲೆ, ನಾನು ಕಲಿಯಬೇಕಾದುದು ಎಷ್ಟಿದೆ—ಎಂಬುದರ ಅರಿವಿನಿಂದ, ಈ ಮಾತನ್ನು ಬರೆಯುತ್ತಿದ್ದೇನೆ. ಬರಿಯ ಮಿತವಾದ ಅವರಣದಲ್ಲಿ

ಬೆಳೆದು, ಏನೋ ನಾಲ್ಕು ವಿಮರ್ಶೆಯ ಮಾತುಗಳನ್ನು ಆಡುವಷ್ಟು ಸುಲಭದ ವಿಷಯ ಇದಲ್ಲ. ಒಂದು ಚಿತ್ರ 'ನಮಗೆ ರುಚಿಸಿತು,' ಇಲ್ಲವೆ 'ಇಲ್ಲ' ಎಂಬುದರ ಮೇಲೆ ಕಲೆಯ ಮಹಿಮೆ ಹೊಂದಿಕೊಂಡಿಲ್ಲ. ಕಲಾವಿದನ ಬಾಳಿನಿಂದ ನಮ್ಮ ಬಾಳಿಗೆ ಒಂದು ಸ್ಫೂರ್ತಿ ದೊರೆಯಬೇಕು; ಅವನ ಅನುಭವಗಳಿಂದ ನಮ್ಮ ಅನುಭವಗಳ ತೂಕ, ಹೊಳಪು ಹೆಚ್ಚಬೇಕು-ಎಂಬ ಆಕಾಂಕ್ಷೆಯು ನಮ್ಮಲ್ಲಿ ಮೊದಲು ಮೂಡಬೇಕಾಗುತ್ತದೆ. ಕಲಾವಿದನ ಮನಸ್ಸೇನು? ಯಾವುದೇ ಚಿತ್ರದಲ್ಲಿ ಬರೆದುದೇನು-ಅವನ ಸಾಧನವೇನು, ಆ ಸಾಧನ ಎಷ್ಟು ಮಟ್ಟಿಗೆ ಅವನ ಆಶಯವನ್ನು ಪೂರ್ಣಗೊಳಿಸಿದೆ-ಎಂಬುದನ್ನು ತಿಳಿಯಬಲ್ಲವನು ರಸಿಕನೂ ಸಹೃದಯಿಯೂ ವಿಮರ್ಶಕನೂ ಆಗಬಲ್ಲ. ಕಲಾವಿದ ಹೇಳುವ ವಿಷಯ ಅವನಿಗೇನೆ ಬಿಟ್ಟಿದ್ದು. ಅವನ ಬಾಳಿಗೆ, ಅವನ ಅನುಭವಕ್ಕೆ ಅವನು ಹೊಣೆಗಾರ. ಅವನ ಅನುಭವ ಅವನ ಪಾಲಿಗೆ ನಿಜವಾಗಿರಬೇಕು. ಅದು ನಮ್ಮ ಪಾಲಿಗೆ ಸಮ್ಮತವಾಗದಲ್ಲಿ ಅವನ ತಪ್ಪಿಲ್ಲ. ನಮ್ಮ ಸಂಕುಚಿತ ನೋಟದ ತಪ್ಪು ಅದು. ಆತನ ಅನುಭವಗಳ ಒತ್ತಡ, ಭಾವವಿಲಾಸ ಏನನ್ನು ಹೇಳಲು ಹೊರಟಿದೆ ಎಂಬುದನ್ನು ನಾವು ತೆರೆದ ಮನಸ್ಸಿನಿಂದ ನೋಡಬೇಕು. ಕೃತಿಯ ತುಲನೆಯ ಮಟ್ಟಿಗೆ, ತಾತ್ಕಾಲಿಕವಾಗಿ ನಾವು ಅದನ್ನು ಒಪ್ಪಲೂ ಬೇಕು. ಐವರು ಗಂಡಂದಿರುಳ್ಳ ಪಾಂಚಾಲೆ, ಗಂಡನಿಲ್ಲದೆ ಮಗುವನ್ನು ಹೆತ್ತ ಮೇರಿ, ಕರ್ಣನ ತಾಯಿ ಕುಂತಿಯರು ನಮಗೆ 'ಅನೀತಿವಂತ'ರೆಂದಾಗಲಿ, ಅವಾಸ್ತವಿಕರೆಂದಾಗಲಿ ಕಾಣಿಸಬಾರದು. ಹೊರಗಿನ ಸಂಬಂಧಕ್ಕಿಂತ-ಗಂಡ-ಹೆಂಡಿರು, ತಾಯಿ-ಮಗು, ದೇವ-ದೈವ ಜನ್ಮಗಳ ಕಲ್ಪನೆ ಬರುವಂತೆ ಹಿಂದಿನವರು ಒಂದು ರೀತಿ ನಡೆ ಹೇಳಿದರು. ಅದನ್ನೇ ಕಲಾವಿದ ಒಪ್ಪಿದ. ಅಲ್ಲಿಂದ ಆ ಸಂಬಂಧದ ಸೌಂದರ್ಯದರ್ಶನವನ್ನು ಕಂಡು ಚಿತ್ರ ಬರೆದ.

ಈ ದರ್ಶನಗಳು ಕೃತಿಯಲ್ಲಿ ಮೂಡುವುದಕ್ಕೆ ಏನು ಕಾರಣ? ಅವನು ತನ್ನ ಸೃಷ್ಟಿಯಲ್ಲಿ ಹೇಳುತ್ತಿರುವ ಅಂಶವೇನು? ಹೇಳುವಂತೆ ಮಾಡಿದ ಅವನ ಮನೋಧರ್ಮವೇನು? ಅವನ ದೃಷ್ಟಿಯ ನೋಟಕ್ಕೂ ನಮಗೂ ಇರುವ ಅಂತರವೇನು?-ಇದನ್ನು ತರ್ಕಿಸಬೇಕಾದದ್ದು ಮುಂದಿನ ಹೆಜ್ಜೆ.

ಒಬ್ಬ ಚಿತ್ರಕಾರ-ನಿಸರ್ಗದ ಚಿತ್ರ ಬರೆಯಬಹುದು; ಮನುಷ್ಯರ, ಪ್ರಾಣಿಗಳ-ಚಿತ್ರ ಬರೆಯಬಹುದು; ದಂತಕಥೆಗಳ ವ್ಯಕ್ತಿಗಳನ್ನು ಚಿತ್ರಿಸಲು ಹೋಗಬಹುದು. ನಿಸರ್ಗವನ್ನು ಕಂಡಾಗ, ವ್ಯಕ್ತಿಯನ್ನು ಕಂಡಾಗ, ಪುರಾಣ ಕಥನವನ್ನು ನೆನೆದಾಗ ಏನು ಅವನ ಕಣ್ಣ ಮುಂದೆ ಇದ್ದಿರಬಹುದು, ತನ್ನ ಮೆಚ್ಚಿಕೆಯ, ಜುಗುಪ್ಸೆಯ, ಆನಂದದ, ಸತ್ಯ ಕಲ್ಪನೆಯ ಯಾವುದನ್ನು ಆತ ಈ ಚಿತ್ರದಲ್ಲಿ ಹೇಳತೊಡಗಿದ್ದಾನೆ? ಚಿತ್ರಕಲೆ ಅವನ ಸಾಧನವಾದರೆ-ಆ ಸಾಧನಕ್ಕೆ ನೆರವಾಗುವ ವಸ್ತುಗಳಾವವು?

ನಮ್ಮ ಪ್ರಾಪಂಚಿಕ ಅನುಭವಗಳೆಲ್ಲವೂ ಇಂದ್ರಿಯಗೋಚರವಾಗಿದ್ದು, ಅವು ಮನಸ್ಸಿನ ಪಟಲದಲ್ಲಿ ಬಗೆಬಗೆಯ ಭಾವನೆಗಳನ್ನು ಮೂಡಿಸಬಲ್ಲವು. ಒಂದು ನಿಸರ್ಗದ ನೋಟವನ್ನೋ, ಹೆಣ್ಣು ಇಲ್ಲವೆ ಗಂಡಿನ ಆಕೃತಿಯನ್ನೊ ಕಂಡರೆ- ಆ ನೋಟ ಯಾವುದೋ ಭಾವನೆಯನ್ನು ಅಂತರಂಗದಲ್ಲಿ ಕೆರಳಿಸಬೇಕು. ಅಂಥದನ್ನು ಚಿತ್ರಕಾರ ಬರೆದಿದ್ದಾನೆಂದುಕೊಳ್ಳಿ. ಆಗ ಆತ ನೋಡಿದ ನೋಟವನ್ನು ಇದ್ದಕ್ಕಿದ್ದಂತೆ ಬರೆಯುತ್ತಾನೆಯೋ, ಬರೆಯಬೇಕೇ ಎಂಬ ಪ್ರಶ್ನೆ ಮೊದಲಿಗೆ ಬರುತ್ತದೆ. ಆಗ-ಅಂಥ ಒಂದೇ ನೋಟವನ್ನು ಹತ್ತು ಮಂದಿ ಚಿತ್ರಕಾರರು ಚಿತ್ರಗಳಲ್ಲಿ ನಿರೂಪಿಸಿದರೆ-ವಸ್ತುಗಳ ರೂಪ ಯಥಾವತ್‌ಬಹಿರಾಕಾರಜನ್ಯವಾದ ಚಿತ್ರ ಒಂದೇ ಆಗಿರಬೇಕು. ಅದು ಅನುಕರಣೆ; ಯಾಂತ್ರಿಕತೆ, ಸೃಷ್ಟಿಯಲ್ಲ. ಚಿತ್ರಕಾರ ಸೃಷ್ಟಿಕಾರ, ಕಂಡ ವಸ್ತುಗಳಲ್ಲಿ ತನ್ನ ಪ್ರೇರಣೆಗಳಿಗೆ, ಭಾವನೆಗಳಿಗೆ ಕಾರಣವಾದ ಅಂಶಗಳನ್ನಷ್ಟೆ, ವಸ್ತುಗಳನ್ನಷ್ಟೆ ಆತ ಆರಿಸಿಕೊಳ್ಳುತ್ತಾನೆ. ಪ್ರೇರಿತವಾದ ಭಾವನೆಯನ್ನು ಪ್ರಕಟಿಸುವುದಕ್ಕೆ ಕಂಡ ಅಂಶಗಳನ್ನು, ಯಾವ ರೀತಿಯಿಂದ ತಿರುಗಿ ವ್ಯವಸ್ಥೆಗೊಳಿಸಿದರೆ, ತನ್ನ ಅಂತರಂಗದ ಪ್ರತಿಕ್ರಿಯೆಗೆ ಮೂರ್ತರೂಪ ಬರುತ್ತದೆ-ಎಂದು ನೋಡುವುದು ಅವನ ಆಶೆ. ಕಂಡ ನೋಟದಲ್ಲಿ-ಕಾಣುವ ವಸ್ತುಗಳು ರೇಖೆಗಳಿಂದ, ಬಣ್ಣಗಳಿಂದ, ವಿವಿಧ ಗಾತ್ರಗಳಿಂದ, ಪರಸ್ಪರ ಅಂತರಗಳಿಂದ, ಛಾಯೆಯಿಂದ ತೇಜಸ್ಸಿನಿಂದ ಅವುಗಳು ಕಾಣಿಸಿಕೊಂಡ ವಿವಿಧ ಪ್ರಮಾಣಗಳಿಂದ, ಅವನಲ್ಲಿ ಭಾವನೆಗಳು ಕೆರಳುತ್ತವೆ. ಒಂದು ವಸ್ತುವಿನ ಚೆಲುವು, ಚೆಲುವಿಲ್ಲದಿರುವಿಕೆ; ಒಂದು ಗುಣದ ಚೆಲುವು, ಚೆಲುವಿಲ್ಲದಿರುವಿಕೆ-ಇಂಥ ಬಾಹ್ಯ ವಸ್ತುಗಳಿಂದ ಅವನಿಗೆ ಬೋಧೆಯಾಗುತ್ತದೆ. ಇಂಥ ಬಣ್ಣ ಇಂಥ ಬಣ್ಣದ ಸನಿಯದಲ್ಲಿರುವಾಗ, ಇಲ್ಲವೆ ಪ್ರತ್ಯಂತರದಲ್ಲಿರುವಾಗ ಮನಸ್ಸಿಗೆ ಆನಂದ, ಇಲ್ಲವೆ ಖಿನ್ನತೆ ಪ್ರಾಪ್ತವಾಗುತ್ತದೆ. ರೇಖೆಗಳ ರೂಪ, ಹಂಚುವಿಕೆ, ಲಯ,ಹೀಗಿದ್ದರೆ ಆನಂದ, ಹೀಗಿದ್ದರೆ ಬೇಸರ, ಹೀಗಿದ್ದರೆ ಜುಗುಪ್ಸೆ - ಎಂದು ಅವನಿಗೆ ತೋರುತ್ತದೆ. ವರ್ಣರಾಶಿಗಳ, ವಸ್ತುರಾಶಿಗಳ ಸ್ಥಾನಮಾನಗಳಿಂದ — ಅಂಥವೇ ಪರಿಣಾಮ ಉಂಟಾಗುತ್ತದೆ. ಕೇವಲ ಬಾಹ್ಯ ನೋಟವನ್ನು ಚಿತ್ರಿಸುವುದಾದರೂ—ಅದರ ಸೊಗಸನ್ನು ಚಿತ್ರಿಸುವುದಕ್ಕೆ, ಆತ ಇಂಥ ಮುಖ್ಯವಾದ ಗುಣಗಳನ್ನು ಆಯ್ದುಕೊಳ್ಳುತ್ತಾನೆ. ಇವುಗಳಲ್ಲಿ ಒಂದೊಂದೇ ಗುಣವೂ ಅವನ ಉದ್ದೇಶಕ್ಕೆ ನೆರವಾಗಬಲ್ಲದು. ಕೆಲವು ಗುಣಗಳು ಸೇರಿಕೊಂಡು ನೆರವಾಗಬಲ್ಲವು. ಅಲ್ಟಿಮಾರಾ ( Spain ) ಗುಹೆಗಳಲ್ಲಿ, ಬುಷ್‌ಮೆನ್ ಚಿತ್ರಗಳಲ್ಲಿ - ರೇಖೆಗಳೇ ಎಲ್ಲ ಭಾವವನ್ನೂ ಪ್ರಕಟಿಸಿವೆ. ಚಿತ್ರಶಕ್ತಿ ರೇಖೆಯಿಂದಲೇ ಬಂದಿದೆ. ರಜಪೂತ ಚಿತ್ರಗಳಲ್ಲಿ ರೇಖೆಗಳೇ ಜೀವಾಳ. ಹಾಗಿದ್ದರೂ ಈ ರೇಖಾವಿನ್ಯಾಸವು ಕೂಡ—ಒಂದೊಂದು ಜನಪದಕ್ಕೆ, ಒಂದೊಂದು ಶೈಲಿಯಲ್ಲಿ ಪರಿಣಮಿಸಿದೆ. ನಮ್ಮ ದೇಶದಲ್ಲೇ ಹತ್ತೆಂಟು ಬಗೆಗಳಿವೆ. ಈಜಿಪ್ಟಿನ ರೇಖಾಲಾವಣ್ಯ, ಚೀನಿಯರ ಗೆರೆಗಳ ಸೊಬಗು, ಬೈಜೆಂಟೈನ್ ಚಿತ್ರಗಳ ರೇಖೆಗಳು — ಒಂದೊಂದು ಜನವರ್ಗದ ರೇಖಾಶೈಲಿಯನ್ನು, ರೇಖಾಸೌಂದರ್ಯದ ಸಂಸ್ಕೃತಿಯನ್ನು ತೋರಿಸುತ್ತವೆ. ಬಣ್ಣಗಳ ಮಾತೂ ಹಾಗೇನೆ. ಒಂದೊಂದು ಜನವರ್ಗ ಮೆಚ್ಚುವಂಥ ಬಣ್ಣ ಬೇರೆ ಬೇರೆ. ಅವುಗಳಿಂದ ಮಾನಸಿಕ ಪರಿಣಾಮಗೊಳ್ಳುವ ಬಗೆ ಬೇರೆ ಬೇರೆ. ಕೆಂಪು ನಮಗೆ ಶುಭ; ಕೆಂಪು ಹಲವರಿಗೆ ಭಯ; ಕಪ್ಪು ಯುರೋಪಿನವರಿಗೆ ಅಶುಭ; ಕಪ್ಪಿನ ಉಡುಗೆ ನಮಗೆ ಅಶುಭವಲ್ಲ. ಬಿಸಿಲು ಹೆಚ್ಚಿಗೆ ಬೀಳುವ ಭಾರತದ ನೆಲದಲ್ಲಿ-ಬಣ್ಣಗಳ ಉಜ್ವಲತೆ, ತೀಕ್ಷ್ಣತೆ ಹೆಚ್ಚು. ಕಡುಪಿನ ಶಾಂತ ( Dark cool ) ಬಣ್ಣಗಳು ಅದರಿಂದ ನಮ್ಮ ಪೂರ್ವಿಕರಿಗೆ ಮೆಚ್ಚುಗೆ. ಜ್ವಲಿಸುವ ಬಣ್ಣ ಸೈನಿಕ ಜನಕ್ಕೆ ಮೆಚ್ಚುಗೆ. ಧಾರಾಳವಾದ ವರ್ಣವೈಖರಿ 'ಪಾಲ ಗಾಗಿನ'ನಂಥ ಕಲಾವಿದನಿಗೆ ಮೆಚ್ಚಿಗೆಯಾಯಿತು. ಅದರಲ್ಲಿಯೂ ಹಳದಿ, ಕಂದು, ನೀಲಗಳು ಅವನ ಜೀವನದ ಉಸಿರಾಗಿದ್ದುವು.. ಅದರಿಂದಲೇ ಅವನ ಚಿತ್ರಗಳು ಜೀವ, ಚೈತನ್ಯ ಸಂತೋಷಗಳಿಂದ ತುಳುಕುತ್ತಿವೆ. ನಿಸರ್ಗದಲ್ಲಿ ಶುದ್ಧ ಬಿಳಿಪು ಕಡಿಮೆ; ಬಿಳುಪೇ ತುಂಬಿರುವ ಹಿಮವಲಯದಲ್ಲಿ ಕಣ್ಣಿಗೆ ದಣಿವು ಬರುತ್ತದೆ. ಆದರೂ ಬಿಳುಪನ್ನೇ ಆಯ್ದು ತೋರಿಸಿ ಚಿತ್ರಗಳಲ್ಲಿ ಸುಖಸಂತೋಷವನ್ನು ಕೊಡಲೆತ್ನಿಸಿ-

ದವನು ಇಟಲಿಯನ್ ಚಿತ್ರಕಾರ ಯುಟರಿಲ್ಲೊ. ಆಯಾ ಕಲಾವಿದರಿಗೆ ಯಾವೆಲ್ಲ ವಸ್ತುಗಳು, ರೀತಿ ವಿಧಾನಗಳು– ಮೂಲ ಪ್ರೇರಣೆಗಳನ್ನು ಕೊಡು-ವವೋ ಅವು ನಿಮನಮಗೆ ಸರಿಯಲ್ಲದಿದ್ದರೂ ಕಲೆಗೆ ಸರಿ.

ಇನ್ನು, ಈ ಬಾಹ್ಯ ದೃಶ್ಯಾನುಭವಗಳಿಗೆ ಸಂಬಂಧಗೊಂಡ ತತ್ತ್ವಜ್ಞಾನವೋ ದರ್ಶನವೊ ಒಂದು ಉಂಟು. ಹೊರಗಿನ ನೋಟ ಒಳಗಿನ ಮನಸ್ಸಿನ ಮೇಲೆ ಹುಟ್ಟಿಸುವ ಭಾವಲೀಲೆ, ಆ ಭಾವನೆಗಳಿಂದುಂಟಾಗುವ ಒಂದು ರೀತಿಯ ಜೀವನ ದರ್ಶನ ಅದು ಕಲಾವಿದ ಹುಟ್ಟಿದ ಜನಾಂಗಕ್ಕಿರಬಹುದು, ಅವನಿಗೇ ಅದು ಬೇರೆಯಾಗಿರಬಹುದು. ಅವನು ಬೆಳೆಯಿಸಿಕೊಂಡ ಶಕ್ತಿಗಳೂ ಅವನಿಗೆ ದೊರೆತ ಅನುಭವಗಳೂ ಅವಕ್ಕೆ ಕಾರಣ—ನಾವಲ್ಲ; ನೀವಲ್ಲ. ಅವೇನೆಂದು ನಮಗೆ ತಿಳಿದಿದೆಯೇ? ನಾವು ತಿಳಿಯಲು ಯತ್ನಿಸಿದ್ದಿದೆಯೇ? ಪ್ರಯತ್ನಿಸಿದರೆ ಮಾತ್ರ ಅವು ಅರ್ಥವಾದಾವು. ಬಣ್ಣಗಳ ಅನುಭವವನ್ನೇ ಚಿಕಿತ್ಸಕ ದೃಷ್ಟಿಯಿಂದ ನೋಡಿ – ಶುದ್ಧ ಬಿಳುಪಿಲ್ಲ, ಶುದ್ಧ ಕಪ್ಪಿಲ್ಲ. ವರ್ಣಗಳ ಅಭಾವವೇ ಕಪ್ಪು ಸಪ್ತ ವರ್ಣಗಳ ಸಮ್ಮೇಳ ಬಿಳುಪು-ಎಂದು ವೈಜ್ಞಾನಿಕ ಸತ್ಯವನ್ನು ಹಿಂಬಾಲಿಸಿದವರು ಕೆಲವರು. ಮೂರು ಮೂಲ ಬಣ್ಣಗಳಿಂದ ಕಾಣುವ ಸಾವಿರ ಬಣ್ಣಗಳಾಗುತ್ತವೆಂದು ಆ ಮೂಲ ಬಣ್ಣಗಳ ಚುಕ್ಕೆಗಳನ್ನಿಟ್ಟೇ ಚಿತ್ರಸೃಷ್ಟಿಗೆ ತೊಡಗಿರುವ 'ಪ್ವೊಂಟಲಿಸಂ' ಶೈಲಿ ಅನುಸರಿಸಿದವರು. ಇತರರು ವಿವಿಧ ಬಣ್ಣಗಳ ಕುಣಿದಾಟದಲ್ಲಿ-ವರ್ಣಗಳಗತಿ ಚಂಚಲ, ನಿರೂಪಣೆ ಚಂಚಲ-ಎಂದು ಹೊರಗಿನ ಚಾಂಚಲ್ಯದ ಅಸ್ಪಷ್ಟತೆಯನ್ನು, ಕುಚ್ಚಿನ ದಪ್ಪ ಅಸ್ಪಷ್ಟದ ಗೆರೆಗಳಿಂದ ಬಣ್ಣಗಳ ವಿಸ್ತಾರ ವಿಲಾಸ ತೋರಿಸಿದರು ರೆನ್‌ವಾನಂಥವರು. ಹಾಗಿದ್ದ ಮೇಲೆ-ನೋಡಿದ ಕಣ್ಣುಗಳೆಷ್ಟೋ, ಬಗೆಗಳೆಷ್ಟೋ, ರೀತಿಗಳೆಷ್ಟೋ! ಅವು ಒಂದೊಂದೂ ಸೌಂದರ್ಯ ಸತ್ಯದ ಒಂದೊಂದು ಮುಖವನ್ನು ಹೇಳಲಾರವೇ? ತಾನು ಕಂಡುದೇ, ತನ್ನ ಜನ ತಿಳಿದುದೇ, ತನ್ನ ಸಂಪ್ರದಾಯ ತಂದುದೇ ಋಜುವಾದ ಮಾರ್ಗ-ಎಂಬ ದಿಟ್ಟತನಕ್ಕೆ ಎಡೆಯೆಲ್ಲಿ? ಚಿತ್ರ ನೋಡುವವನಿಗೆ ಮೊದಲು ಬೇಕಾದುದು ತಿಳಿಯುವ ನಮ್ರತೆ; ಅದು ಬಂದ ಮೇಲೆ ತೂಗುವ, ವಿಮರ್ಶಿಸುವ ಔದ್ಧತ್ಯ ಬರಲಿ.

ಮೇಲೆ ಹೇಳಿದ ನೋಡುವ ಬಗೆಗಳಿಂದ ಪ್ರಪಂಚದ ವಿವಿಧ ದೃಶ್ಯಗಳನ್ನು ನೋಡುವ ಕಣ್ಣುಗಳೂ ನೋಡಬಹುದಾದ ರೀತಿಯೂ ಬಹುವಾಗಿವೆ– ಎಂದಂತಾಯಿತು. ಇನ್ನು ಕಲಾವಿದನ ಸ್ವಭಾವ, ಅನುಭವಗಳ ಮೇಲಿಂದ ಅವನಿಗೂ ತೆರತೆರನ ಅನುಭಾವಗಳಾಗುತ್ತವೆ. ಅಂಥ ಅನುಭಾವಗಳನ್ನೂ ಅನುಭವಗಳನ್ನೂ ಆತ ಚಿತ್ರಿಸಬೇಕು. ಅದರಿಂದ ತನ್ನ ಮನಸ್ಸಿಗೆ ತೃಪ್ತಿ ತಂದುಕೊಳ್ಳಬೇಕು. ಅನಂತರ ಅದರಿಂದ ಪರರಿಗೂ ಆನಂದವಾಗಬಹುದು, ಎಂದು ಕಲಾವಿದ ಚಿತ್ರ ಬರೆಯಹೋಗುತ್ತಾನೆ. ಯಾವ ಭಾವನೆ ತನ್ನದು, ಯಾವ ಅನುಭವ ತನ್ನದು ಇಂಥದನ್ನೆ ಹೇಳುತ್ತಿದ್ದೇನೆ-ಎಂದು ಸ್ಪಷ್ಟವಾಗಿ ತಿಳಿದ ಮನಸ್ಸಿಗೆ, ಇಂಥ ಶೈಲಿ ಹಿಡಿದರೆ– ಈ ವಿಷಯವನ್ನು ತಿಳಿಸುವುದು ಪರಿಣಾಮಕಾರಿ. ಇದರಿಂದ ತನ್ನ ಮನಸ್ಸನ್ನೆಲ್ಲ, ತೋಡಿಕೊಳ್ಳುವುದು ಸಾಧ್ಯ, ಎಂದು ಅನಿಸಬಹುದು. ಬರಿಯ ಸಾಂಪ್ರದಾಯಿಕತೆಯಲ್ಲಿ ಬೆಳೆದವನಿಗೆ, ಸಾಂಪ್ರದಾಯಿಕ ಶೈಲಿಯನ್ನು ಬಿಟ್ಟು ಇನ್ನೊಂದು ಗೊತ್ತಿರದು. ಅದರ ಕಟ್ಟಿನಲ್ಲಿ ಸಿಲುಕಿ ಆತ ಹೇಳುವುದನ್ನು ಸಂಪೂರ್ಣವಾಗಿ ಹೇಳಲಾರದೆ ಕೊರಗುವ ಪಾಡೂ ಬಂದೀತು. ನನ್ನ ಮನಸ್ಸನ್ನು ತೋಡಿಕೊಳ್ಳುವುದು ಮುಖ್ಯ- ಎಂಬ ನಿರ್ಭೀತನಿಗೆ ಸಂಪ್ರದಾಯದ ಕಟ್ಟು ಸಡಿಲುವುದು. ಅವನ ಆತ್ಮದ ತೃಪ್ತಿ ಮೊದಲ ಕರ್ತವ್ಯ. ಆತ ಶಕ್ತಿಯುತನಾದಂತೆ ಸಾಹಸಿಯಾದರೆ, ಹೊಸ ದಾರಿ ಹುಡುಕುತ್ತಾನೆ. ಸ್ಫೂರ್ತಿಯ ಒತ್ತಡ ಹೆಚ್ಚಾದರೆ ಅದೇನೆ ತನ್ನ ದಾರಿಯನ್ನು ತಾನು ಕಡಿದುಕೊಂಡು ಹೋಗುತ್ತದೆ. ಮುಂದಿನವರಿಗೆ ಅದು ಮಾರ್ಗದರ್ಶಕವಾಗುತ್ತದೆ. ಅಂಥ ಒಬ್ಬ ವ್ಯಕ್ತಿಯು ಹತ್ತು ಶೈಲಿಗಳನ್ನು ನಿರ್ಮಿಸಬಲ್ಲ. ಯಾವ ಶೈಲಿ ಯಾವ ಬಗೆಯ ಚಿತ್ರಣಕ್ಕೆ, ಭಾವನೆಗೆ ಅನುಕೂಲವೆಂಬುದನ್ನು ತೋರಿಸಿಕೊಡಬಲ್ಲ. ಅಂಥವರು ಮಹಾ ಕಲಾವಿದರಾಗುತ್ತಾರೆ. ಅವರ ಸಂದೇಶದ ಹಿರಿಮೆಯ ಮೇಲೆ, ಅವರ ಹಿರಿಮೆ. ಅಂಥವರ ಪ್ರತಿಭೆಯಿಂದ ಜನ ಬೆರಗಾಗಿ ಅವರನ್ನು ಆರಾಧಿಸಬಹುದು. ಅದರ ಅರ್ಥವೇ ಆಗದೆ, ಸಂಸ್ಕಾರ ತಾಳ್ಮೆಗಳಿಲ್ಲದ ಜನರು ಅವರನ್ನು ಹುಚ್ಚರೆಂದು ಕರೆಯಬಹುದು. ಕಲೆಗೆ ಸಂಬಂಧಪಡದ ಅನ್ಯ ಕಾರಣಗಳಿಂದ, ಜಾನ್ ವರ್ಮೀರನ (ಡಚ್ ಚಿತ್ರಕಾರ) ಕಾಲದಲ್ಲಿ ಅವನ ಯೋಗ್ಯತೆಯನ್ನು ಜನರು ಅರಿಯದೆ ಹೋದಂತೆ, ಹೋಗಲೂ ಬಹುದು. ಆದರೆ ನಿಜವಾದ ಕಲಾವಿದನಿಗೆ ಅವನ ಸೃಷ್ಟಿಯು ಕೊಡುವ ಸಂತೋಷವನ್ನು ಹೊರಗಿನ ಹೊಗಳಿಕೆ ಕೊಡುವದಿಲ್ಲ. ಜನರ ಹೊಗಳಿಕೆಯು ಅವನ ಸುಖಜೀವನಕ್ಕೆ ಸಹಾಯವಾಗಬಹುದು. ಆ ಹೊಗಳಿಕೆ ಕಲೆಯ ಅವನತಿಗೂ ಕಾರಣವಾಗಬಹುದು. ಕಲಾಧರ್ಮವನ್ನೇ ತಿಳಿಯದ ಜನರು ಸ್ವಯಂಸ್ಫೂರ್ತಿಯಿಲ್ಲದ ಕಲಾವಿದನನ್ನೂ ಕಲಾವಿದನ ಶೈಲಿಯನ್ನೂ ಹೊಗಳಿ ಅನುಕರಿಸಹೋಗಿ ಮೂಲ ವಸ್ತುವನ್ನು ಗುರುತಿಸಲಾರದಷ್ಟು ಠಕಾರಿ ಮಾಲುಗಳಿಂದ ಕಲಾಪ್ರಪಂಚವನ್ನು ತುಂಬಿಸಬಹುದು. ಇದನ್ನು ತಿಳಿಯುವ ಶಕ್ತಿ ಜನಕ್ಕೆಬೇಕು.

ಯಾವುದೇ ಕಲೆಯ ಪರಿಚಯವನ್ನು ಮಾಡಿಕೊಳ್ಳುವ ಕೆಲಸ ಎಷ್ಟು ಕಷ್ಟವಿದ್ದೋ, ಜನಕ್ಕೆ ಅವುಗಳ ತಿಳಿವನ್ನು ಹುಟ್ಟಿಸುವ ಕೆಲಸ ಅಷ್ಟೇ ಕಷ್ಟದ್ದು. ಸರಕಾರಗಳಿಗೆ ಕಲೆಗಳಿಗೆ ಪ್ರೋತ್ಸಾಹ ಕೊಡುವ ಮನಸ್ಸಿದ್ದರೆ ಆ ಕೆಲಸವನ್ನೆಲ್ಲ ಅದರಲ್ಲಿ ದುಡಿದವರಿಗೆ, ದುಡಿಯುವವರಿಗೆ, ನುರಿತವರಿಗೆ, ಒಪ್ಪಿಸಿಕೊಟ್ಟು, ತನ್ನಿಂದಾದ ಆರ್ಥಿಕ ನೆರವನ್ನು ಕೊಡುವುದು ಒಳಿತಾದ ಮಾರ್ಗ. ಆದರೆ ಇಂದಿನ ರಾಜಕೀಯದಲ್ಲಿ ಪ್ರಮುಖರಾದವರು ಸರ್ವ ಕ್ಷೇತ್ರಗಳಲ್ಲಿಯೂ ತಾವೇ ಸರ್ವಜ್ಞರೆಂದು ತಿಳಿದು ವರ್ತಿಸುತ್ತಿರುವಾಗ ಅದು ಬರಿಯ ಆಸೆ.



# ರಶಿಯದ ಒಳಗಿನ ನೋಟ

ಶ್ರೀ ಕೃಷ್ಣನಂದನ ಸತ್ಯಪಾಲರಿಂದ

> ಈ ಲೇಖಕನಿಗೆ ಮಾಸ್ಕೋ ನಗರದಲ್ಲಿ ಕೆಲವು ತಿಂಗಳ ಕಾಲ ಇರುವ ಸಂದರ್ಭ ದೊರಕಿತು. ಆಗ ಗಮನಕ್ಕೆ ಬಂದ ರಶಿಯಾ ದೇಶದ ಕೆಲವು ವಿಷಯಗಳನ್ನೂ ಕೆಲವು ಅನುಭವಗಳನ್ನೂ ಈ ಲೇಖನದಲ್ಲಿ ವರ್ಣಿಸಲಾಗಿದೆ.

ನಾನು ರಶಿಯಾ ದೇಶದಲ್ಲಿದ್ದುದು ಐದು ವರ್ಷಗಳ ಹಿಂದೆ. ಅದು ಸ್ಟಾಲಿನ್‌ನ ಕಾಲದಲ್ಲಿ. ಈಗ ಮಾಲಿಂಕಫ್‌ನ ಪ್ರಭುತ್ವದಲ್ಲಿ ಅಲ್ಲಿ ವಿಶೇಷವಾದ ಪರಿವರ್ತನೆಗಳುಂಟಾಗಿವೆಯೆಂದು ತಿಳಿದಿದೆಯಷ್ಟೆ? ಆದರೆ ಸ್ಟಾಲಿನ್‌ನ ಅಧಿಕಾರದ ಕಾಲದಲ್ಲಿ ಮೊಸ್ಕೋದಲ್ಲಿ ಕಂಡ ಮತ್ತು ತಿಳಿದ ಕೆಲವು ವಿಷಯಗಳು ಸ್ವಾರಸ್ಯದ್ದಿವೆ. ನಾನು ಕೆಲವೇ ತಿಂಗಳ ಕಾಲ ಅಲ್ಲಿ ವಾಸವಾಗಿದ್ದುದರಿಂದ, ಕೂಲಂಕಷವಾಗಿ ಅಲ್ಲಿನ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಅಸಾಧ್ಯವಾಯಿತು. ಆದುದರಿಂದ ನನ್ನ ಕಣ್ಣಿಗೆ ಸ್ಪಷ್ಟವಾಗಿ, ಪ್ರತ್ಯಕ್ಷವಾಗಿ, ನಿಸ್ಸಂದೇಹವಾಗಿ ಗೋಚರಿಸಿದ ವಿಷಯಗಳನ್ನು ಮಾತ್ರವೇ ನಾನು ಉಲ್ಲೇಖಿಸುವೆನು.

ನಾನು ರಶಿಯಾಕ್ಕೆ ಪ್ರಯಾಣ ಬೆಳಸಿದುದು "ಬೈೀಲಿ ಆಸ್ಟ್ರಾವ್" (ಶ್ವೇತ ದ್ವೀಪ ಎಂದರ್ಥವಾಗುತ್ತದೆ) ಎಂಬ ರಶಿಯನ್ ಹಡಗಿನಲ್ಲಿ. ಲಂಡನಿನಿಂದ ಹೊರಟು ಸ್ಟೊಕ್‌ಹೋಲ್ಮ್ (ಸ್ವೀಡನ್), ಹೆಲ್ಸಿಂಕಿ ಫಿನ್‌ಲೆಂಡ್) ಬಂದರುಗಳಲ್ಲಿ ತಂಗಿ ಕೊನೆಗೆ ಲೆನಿನ್‌ಗ್ರಾಡ್ (ರಶಿಯಾ) ಬಂದರವನ್ನು ಸೇರಿ ಸಮುದ್ರಯಾನವು ಸಮಾಪ್ತವಾಗುತ್ತದೆ. ಈ ಹಡಗು ಪ್ರಯಾಣದಲ್ಲೇ ನನಗೆ ಒಂದು ಸ್ವಾರಸ್ಯವಾದ ವಿಷಯವು ತಿಳಿದುಬಂದಿತು. ಈ ಹಡಗಿನಲ್ಲಿ ನಾನಲ್ಲದೆ, ಕೆಲವು ರಶಿಯನರೂ (ಲಂಡನಿನ ರಶಿಯನ್ ದೂತವಾಸ* ದ ಕರ್ಮಚಾರಿಗಳೂ ಅವರ ಹೆಂಡಿರೂ) ಒಬ್ಬ ಬ್ರಿಟಿಶ ಮಹಿಳೆ (ಬ್ರಿಟಿಷ್ ದೂತವಾಸದ ಅಧಿಕಾರಿಯೊಬ್ಬನ ಪತ್ನಿ) ಯೂ ಭಾರತೀಯ ದೂತವಾಸದ ಒಬ್ಬ ಗುಮಾಸ್ತೆಯೂ ಹಲವು ಫಿನ್ನಿಷ್ ಯಾತ್ರಿಕರೂ ಇದ್ದರು. ಈ ಫಿನ್ನಿಷ್ ಯಾತ್ರಿಕರು ಫಿನ್‌ಲ್ಯಾಂಡಿನಲ್ಲಿ ಇಳಿಯುವವರು. ಇವರು ನಮ್ಮ ಹಡಗಿನ ಕುರಿತಾಗಿ ಬಹಳ ಹೊಟ್ಟೆಯುರಿಯನ್ನು ವ್ಯಕ್ತಪಡಿಸಿದ್ದು ನೋಡಿ ನನಗೆ ಆಶ್ಚರ್ಯವಾಗಿ ನಾನು ಕಾರಣವನ್ನು ವಿಚಾರಿಸಿದೆನು. ಆಗ ಅವರಿಂದ, ಈ ಹಡಗು ಮೂಲತಃ ಫಿನ್‌ಲ್ಯಾಂಡ್ ದೇಶದ ಅಂದರೆ ಅವರ ದೇಶದ ಸ್ವತ್ತಾಗಿತ್ತೆಂದೂ ರಶಿಯನರು ಇದನ್ನು ಅವರ ದೇಶದಿಂದ ತಪ್ಪುದಂಡವಾಗಿ ಪಡೆದಿದ್ದರೆಂದೂ ತಿಳಿಯಿತು. ಎರಡನೆ ಮಹಾಯುದ್ಧದ ಪ್ರಾರಂಭದಲ್ಲಿ ರಶಿಯನರು ಫಿನ್‌ಲ್ಯಾಂಡಿನ ಮೇಲೆ ದಾಳಿಯಿಟ್ಟು ಆ ದೇಶದ ವಿಸ್ತೀರ್ಣದ ಹತ್ತನೇ ಒಂದಂಶವಾದ ಫಿನ್ನಿಷ್ ಕರೇಲಿಯಾ ಪ್ರದೇಶವನ್ನು ಆಕ್ರಮಿಸಿಕೊಂಡರು. ಮಹಾಯುದ್ಧದ ಕಾಲದಲ್ಲಿ ಪುನಃ ಇದಕ್ಕಾಗಿ ಸಮರವಾಯಿತು. ಕೊನೆಗೆ ದಿಗ್ವಿಜಯಿಗಳಾದ ರಶಿಯನರು ಫಿನ್ನಿಷ್ ಕರೇಲಿಯವನ್ನು ಸಂಪೂರ್ಣವಾಗಿ ರಶಿಯಾದಲ್ಲಿ ಸೇರಿಸಿದುದಲ್ಲದೆ, ಸಾಲದ್ದಕ್ಕೆ ಫಿನ್ನಿಷ್ ದೇಶದ ಮೇಲೆ ಕೋಟ್ಯನಧಿ ರೂಪಾಯಿಗಳ ತಪ್ಪುದಂಡವನ್ನು ಹೊರಿಸಿದರು. ಆ ದಂಡದ ಭಾಗದಲ್ಲಿ ಈ ಹಡಗೂ ಸೇರಿತ್ತು.

## "ಕಬ್ಬಿಣದ ಪರದೆ" ಇದೆಯೋ?

ರಶಿಯಾದ ಭವ್ಯವಾದ ಪಟ್ಟಣಗಳಲ್ಲಿ ಮುಖ್ಯವಾದ ಲೆನಿನ್‌ಗ್ರಾಡ್ ಬಂದರಿನಲ್ಲಿ ಹಡಗು ತಂಗಿತು. ಅಲ್ಲಿ ಎಲ್ಲಾ ಯಾತ್ರಿಕರ ಶೋಧನೆಗೆ ಆರಂಭವಾಯಿತು. ಇಲ್ಲಿ ಸ್ವಾರಸ್ಯವಾದ ಕೆಲವು ಪ್ರಸಂಗಗಳುಂಟಾದವು. ವಿದೇಶೀ ದೂತವಾಸದ ಅಧಿಕಾರಿಗಳಿಗೂ ಅವರ ಹೆಂಡರಿಗೂ ವಿಶೇಷವಾದ ಅನುಮತಿ (Laissez Passer) ಇರುವುದು. ನನ್ನೊಡನೆ ಇದಿತ್ತು. ಇದಿದ್ದರೆ, ಆ ಅಧಿಕಾರಿಯ ಯಾವದೇ ವಸ್ತುವನ್ನೂ ಮುಟ್ಟದೆ ನಿರಾತಂಕವಾಗಿ, ಮರ್ಯಾದೆಯಿಂದ ಒಳಬಿಡಬೇಕು. ಆತನನ್ನು ಯಾವ ಶೋಧನೆಗೂ ಗುರಿಮಾಡಬಾರದು. ಆದರೆ ಗುಮಾಸ್ತೆಗಳಿಗಾಗಲೀ ಆಳುಗಳಿಗಾಗಲೀ ರಶಿಯನ್ ಪ್ರಯಾಣಿಕರಿಗಾಗಲೀ ಈ ಸವಲತ್ತು ಇಲ್ಲ. ನಮ್ಮೊಡನೆ ಪ್ರಯಾಣ ಬೆಳಸಿದ್ದ ಗುಮಾಸ್ತೆಯ ಎಲ್ಲಾ ಪೆಟ್ಟಿಗೆಗಳನ್ನೂ ವಸ್ತುಗಳನ್ನೂ ಸಂಪೂರ್ಣವಾಗಿ ಬಿಚ್ಚಿಸಿದರು. ರಶಿಯನ್ ಅಧಿಕಾರಿಗಳು ಆತನ ಎಲ್ಲಾ ವಸ್ತುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದುದು ಮಾತ್ರವಲ್ಲದೆ, ಆತನ ಪೆಟ್ಟಿಗೆಯೊಳಗಿನ ಎಲ್ಲಾ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ತಮ್ಮ ವಶಕ್ಕೆ ತೆಗೆದುಕೊಂಡರು. ಈ ಪುಸ್ತಕಗಳಲ್ಲಿ ಹೆಚ್ಚಿನವು ಬರಿಯ ಕಾದಂಬರಿಗಳು, ಕಥೆಗಳು, ಪತ್ತೇದಾರಿ ಕಥೆಗಳು, ಕವಿತೆಗಳು,— ಆದರೂ ರಶಿಯನ್ ಅಧಿಕಾರಿಗಳು ಒಂದನ್ನೂ ಬಿಡದೆ ಆತನಲ್ಲಿದ್ದ ಎಲ್ಲಾ ಪುಸ್ತಕಗಳನ್ನೂ ವಶಪಡಿಸಿಕೊಂಡರು. "ಮುಂದಕ್ಕೆ ಅವನ್ನು ಪರಿಶೀಲಿಸಿ, ತಮಗೆ ತಿರುಗಿ ಕೊಡುವೆವು" ಎಂದು ಆಶ್ವಾಸನ ಕೊಟ್ಟು ಆತನನ್ನು ಕಳಿಸಿದರು. ನಾನು ಮೋಸ್ಕೋದಲ್ಲಿರುವಷ್ಟು ದಿನ ಅವು ಆತನ ಕೈಸೇರಲಿಲ್ಲ. ಪ್ರಾಯಶಃ ಆತನು ಹಿಂದೂ ದೇಶಕ್ಕೆ ಪುನಃ ಮರಳುವಾಗ ಕೊಟ್ಟಿರಬಹುದು.

ಎರಡನೆಯ ಸನ್ನಿವೇಶ ಒಬ್ಬ ರಶಿಯನ್ ಮಹಿಳೆಯದು. ಈಕೆ ಇಂಗ್ಲಂಡಿನಿಂದ ಒಂದು ದೊಡ್ಡ ರೇಡಿಯೋವನ್ನು ದೊಡ್ಡ ಮರದ ಪೆಟ್ಟಿಗೆಯೊಳಗಿಟ್ಟು ತಂದಿದ್ದಳು. ನಮ್ಮೆಲ್ಲರ ಕಣ್ಣು ಮುಂದೆಯೇ ಅಧಿಕಾರಿಗಳು ಆ ಪೆಟ್ಟಿಗೆಯನ್ನು ಒಡೆದು ರೇಡಿಯೋವನ್ನು ಪರೀಕ್ಷಿಸಿದುದು ಮಾತ್ರವಲ್ಲ, ಯಂತ್ರವನ್ನೇ ಸಂಪೂರ್ಣ ಬಿಚ್ಚಿ ಹಾಕಿದರು. ಅದರೊಳಗಿನ ಭಾಗಗಳು, ಸಾಮುಗ್ರಿಗಳು, ತಂತಿಗಳೆಲ್ಲಾ ಅಸ್ತವ್ಯಸ್ತವಾಗಿ ಬಿದ್ದುವು. ತದನಂತರ ರೇಡಿಯೋವನ್ನು ಚನ್ನಾಗಿ ಪರೀಕ್ಷಿಸಿದ ಮೇಲೆ ತಿರುಗಿ ಕೊಡಲಾಗುವದೆಂದು ಹೇಳಿ ಆಕೆಯನು ಕಳುಹಿಸಿದರು. ಆಕೆ ಬಹುವಾಗಿ ಬೆವತು ಭಯಪಟ್ಟಂತೆ ನಮಗೆ ತೋರಿತು.

ಈಕೆಯ ರೇಡಿಯೋ ಮತ್ತು ಹಿಂದೀಯ ಗುಮಾಸ್ತೆಯ ಪುಸ್ತಕಗಳ ಮೇಲೆ ಏಕೆ ಇಷು ರೋಷ? ಎಂದು ನಾನು ವಿಚಾರಮಾಡಿಕೊಂಡೆನು.

* ದೂತವಾಸ = Embassy = ರಾಯಭಾರಿಯ ಕಛೇರಿ.

ರಶ್ಯಾದಲ್ಲಿ ಪುಸ್ತಕಗಳೂ ರೇಡಿಯೋಗಳೂ ಬಹಳ ಧಾರಾಳವಾಗಿಯೂ ಬಹಳ ಅಗ್ಗದ ಬೆಲೆಯಲ್ಲೂ ಸಿಗುತ್ತವೆ. ಬೇರೆ ಯಾವ ವಸ್ತುವಿಗೆ ಅಭಾವ ಬಂದರೂ ಇವಕ್ಕೆ ಕೊರತೆ ಬರುವುದಿಲ್ಲ. ಪುಸ್ತಕಗಳನ್ನು ಸರಕಾರದಇಲಾಖೆಯೇ ಮುದ್ರಿಸಿ ಸರಕಾರದ ಅಂಗಡಿಗಳಲ್ಲೇ ಅವು ಮಾರಲ್ಪಡುತ್ತವೆ. ರೇಡಿಯೋಗಳನ್ನು ಸರಕಾರದ ಕಾರಖಾನೆಗಳೇ ಹೇರಳವಾಗಿ ಉತ್ಪಾದಿಸುತ್ತಿವೆ. ಆದರೆ ಈ ರೇಡಿಯೋಗಳೆಲ್ಲಾ ಸ್ಥಳಿಕ ಗ್ರಹಣಕ್ಕೇ (Local Reception) ಮಾತ್ರವೇ ಯೋಗ್ಯವಾದ ಯಂತ್ರಗಳು. ಇವುಗಳ ಮೂಲಕ ಮೋಸ್ಕೋ ರೇಡಿಯೋದ ಕಾರ್ಯಕ್ರಮಗಳನ್ನು ಮಾತ್ರ ಕೇಳಬಹುದು. ಪರದೇಶದ, ದೂರ ದೇಶಗಳ ರೇಡಿಯೋ ಕಾರ್ಯಕ್ರಮ ಕೇಳುವುದು ಕಷ್ಟಸಾಧ್ಯ. ದೊಡ್ಡ ರೇಡಿಯೋಗಳನ್ನು ಇಟ್ಟುಕೊಳ್ಳುವ ಅಧಿಕಾರ ಸರಕಾರದ ಮತ್ತು ಕಮ್ಯುನಿಸ್ಟ ಪಾರ್ಟಿಯ ಅಧಿಕಾರಿಗಳಿಗೆ ಮಾತ್ರ, ಅದೂ ಬಹಳ ನಿಯಮಬದ್ಧವಾಗಿ ಇದೆ. ಜನಸಾಮಾನ್ಯರು ದೊಡ್ಡ ರೇಡಿಯೋಗಳನ್ನು ಇಟ್ಟುಕೊಂಡು, ಪರದೇಶದ ರೇಡಿಯೋವಾರ್ತೆಗಳನ್ನೂ ಭಾಷಣಗಳನ್ನೂ ಕೇಳುವುದು ಯೋಗ್ಯವಲ್ಲವೆಂದು ಸೋವಿಯೆಟ್ ಸರಕಾರವು ತಿಳಿದು ಇದನ್ನು ಪೂರ್ಣ ನಿಷೇಧಿಸಿದೆ.

ಹೀಗೆಯೇ ಪರದೇಶದ ಪುಸ್ತಕಗಳಾಗಲೀ ಸರಕಾರದ ಮೆಚ್ಚಿಕೆಗೆ ಪಾತ್ರವಲ್ಲದ ಯಾವುದೇ ಪುಸ್ತಕವಾಗಲೀ ಸರಕಾರದ (ಮತ್ತು ಕಮ್ಯುನಿಷ್ಟ ಪಕ್ಷದ) ಅಸಂತುಷ್ಟಿಗೆ ಗುರಿಯಾದ ಯಾವ ಲೇಖಕನ ಪುಸ್ತಕವೇ ಆಗಲಿ ಮುದ್ರಿಸಲ್ಪಡುವದಿಲ್ಲ, ಪ್ರಕಾಶಿಸಲ್ಪಡುವದಿಲ್ಲ, ಮಾರಲ್ಪಡುವದಿಲ್ಲ. ಅದು ಬೆಳಕನ್ನೇ ಕಾಣುವದಿಲ್ಲ. ಇಡೀ ರಶಿಯಾ ದೇಶದಲ್ಲಿ ಗ್ರಂಥಾಲಯದಲ್ಲಾಗಲಿ, ಪುಸ್ತಕದ ಅಂಗಡಿಗಳಲ್ಲಾಗಲೀ, ಬೇರೆ ಎಲ್ಲೇ ಆಗಿರಲಿ ಅದು ಇರುವುದೇ ಇಲ್ಲ, ಅದು ಇದೆ ಎಂಬ ತಿಳಿವಳಿಕೆಯೇ ರಶಿಯಾದ ಜನರಿಗೆ ಇರುವುದಿಲ್ಲ. ಪರದೇಶಗಳ ಅರ್ವಾಚೀನ ಸಾಹಿತ್ಯದ ಅಥವಾ ಅಲ್ಲಿನ ಈಗಿನ ಜನಜೀವನ ಇಲ್ಲವೆ ಸ್ಥಿತಿಗತಿಗಳ ಯಾವ ಪುಸ್ತಕವೂ ಅಲ್ಲಿಗೆ ಬರಲು ಆಸ್ಪದವಿಲ್ಲ. ಸರಕಾರದ ಹಾಗೂ ಪಕ್ಷ (ಕಮ್ಯೂನಿಷ್ಟ) ದ ಮೆಚ್ಚಿಕೆಗೆ ಪಾತ್ರವಾದ ರಚನೆಗಳು ಮಾತ್ರವೇ ಒಳಬರಬಲ್ಲವು. ಇದರ ಫಲಿತಾಂಶವನ್ನು ನಾನು ಉದಾಹರಿಸುವೆನು:

ಒಬ್ಬಳು ರಶಿಯನ್ ಮಹಿಳೆಯ ವಿಚಾರವನ್ನು ಹೇಳುವೆನು. ಈಕೆ ಒಳ್ಳೆಯ ವಿದ್ಯಾವಂತೆ. ಇಂಗ್ಲೀಷ್, ಫ್ರೆಂಚ್, ಜರ್ಮನ್ ಮೂರು ಭಾಷೆಗಳು ಆಕೆಗೆ ಚೆನ್ನಾಗಿ ಬರುತ್ತಿದ್ದವು. ಆಕೆಯ ಇಂಗ್ಲೀಷ್ ಜ್ಞಾನ ಸಾಕಷ್ಟಿದ್ದಿತು; ವ್ಯಾಕರಣ, ಶೈಲಿ, ಉಚ್ಚಾರ ಶುದ್ಧವಾಗಿದ್ದುದು ಮಾತ್ರವಲ್ಲದೆ ಷೇಕ್ಸ್‌ಪಿಯರ್‌ನ ನಾಟಕಗಳನ್ನೂ ಓದಿದ್ದಳು. ಆದುದರಿಂದ ರಶಿಯದ ಒಳ್ಳೆಯ ಸುಶಿಕ್ಷಿತವರ್ಗಕ್ಕೆ ಸೇರಿದವಳೆಂಬುದು ವಿದಿತವಷ್ಟೆ? ಈಕೆಯೊಡನೆ ನಾನೊಮ್ಮೆ ಮಾತುಕತೆ ನಡೆಸುತ್ತಿದ್ದಾಗ, ಇಂಗ್ಲಂಡಿನ ಜನಜೀವನ ಮತ್ತು ಅಲ್ಲಿನ ಒಳ್ಳೇ ಸ್ಥಿತಿ, ಅಲ್ಲಿ ದಾರಿದ್ರ್ಯವಿಲ್ಲದಿರುವದು, ಇವನ್ನು ಏನೋ ಕಾರಣಾಂತರದಿಂದ ಸೂಚಿಸಿದೆ. ಆಕೆಗೆ ಆಶ್ಚರ್ಯವಾಯಿತು; "ಛೇ! ಚಾರಲ್ಸ್ ಡಿಕನ್ಸ್‌ನ ಕಾದಂಬರಿಗಳಲ್ಲಿ (ಒಲಿವರ್ ಟ್ವಿಸ್ಟ್, ಡೇವಿಡ್ ಕಾಪರ್‌ಫೀಲ್ಡ್) ಇಂಗ್ಲಂಡಿನ ದಾರಿದ್ರ್ಯ, ಭಿಕ್ಷುಕರು, ಹೊಟ್ಟೆಗಿಲ್ಲದ ಅನಾಥರು ಇವರೆಲ್ಲರ ವರ್ಣನೆ ಇದೆಯಲ್ಲಾ" ಎಂದಳಾಕೆ. ನಾನು ಚಾರಲ್ಸ್ ಡಿಕನ್ಸ್ ಬರೆದುದು ೧೯ನೆಯ ಶತಮಾನದಲ್ಲಿ; ಇದು ಇಪ್ಪತ್ತನೆಯ ಶತಮಾನ ಎಂದರೆ ಆಕೆಗೆ ವಿಶ್ವಾಸ ಹುಟ್ಟಲಿಲ್ಲ. ಏಕೆಂದರೆ ಚಾರಲ್ಸ್ ಡಿಕನ್ಸ್(೧೮೧೨-೧೮೭೦)ನ ನಂತರದ ಇಂಗ್ಲಿಷ ಸಾಹಿತಿಗಳ ಪರಿಚಯವೇ ಆಕೆಗೆ ಇರಲಿಲ್ಲ. ಕೆಲವು ಕಮ್ಯೂನಿಷ್ಟ ಲೇಖಕರು ಮತ್ತು ಜಾಕ್ ಲಂಡನ್‌ನ ಹೊರತು, ಆಧುನಿಕ ಇಂಗ್ಲಿಷ್ ಪುಸ್ತಕಗಳಾಗಲೀ ಪತ್ರಿಕೆಗಳಾಗಲೀ ರಶಿಯದೊಳಗೆ ಬರಲು ಆಸ್ಪದವೇ ಇಲ್ಲ. ಆದುದರಿಂದ ಈ ಸುಶಿಕ್ಷಿತ ಮಹಿಳೆಗೆ ಹೊರ ದೇಶಗಳಲ್ಲಿ ಈಗ ಜೀವನದ ನೈಜ ಸ್ಥಿತಿಗತಿಗಳು ಹೇಗಿವೆ ಎಂಬ ಕಲ್ಪನೆಯೇ ಇಲ್ಲ. ಮೋಸ್ಕೋ ರೇಡಿಯೋ ಮತ್ತು ರಶಿಯಾದಲ್ಲಿ ಸರಕಾರದಿಂದ ಪ್ರಕಟಿತವಾದ ಪುಸ್ತಕಗಳ ಹೊರತು ಜ್ಞಾನಭಾಂಡಾರವೇ ಇಲ್ಲ!

ಇದಕ್ಕೊಂದು ದೃಷ್ಟಾಂತವಿದು: ರಶಿಯಾದ ಅಮರ ಸಾಹಿತಿಗಳಲ್ಲಿ ಫಿಯೊದೋರ್ ದಸ್ತಯೆಫ್‌ಸ್ಕಿ(Dostoyevski 1821-1881) ಒಬ್ಬನು. ಈತನ ಪ್ರಭಾವ ರಶಿಯಾದಲ್ಲಿ ಮಾತ್ರವಲ್ಲ, ಇಡೀ ಜಗತ್ತಿನ ಸಾಹಿತ್ಯ, ದರ್ಶನಶಾಸ್ತ್ರ ಮತ್ತು ಮನಃಶಾಸ್ತ್ರಗಳ ಮೇಲೆ ಆಳವಾಗಿ ಬಿದ್ದಿದೆ. ಈತನು ೧೮೮೧ ರಲ್ಲಿ ಕಾಲವಾಗಿ ಹೋಗಿದ್ದರೂ ಈತನ ಪುಸ್ತಕಗಳ ಮೇಲೆ ಕಮ್ಯೂನಿಸ್ಟ ಸರಕಾರಕ್ಕೆ ಬದ್ಧವೈರವಿದೆ. ಈತನು ಪ್ರತಿಗಾಮಿ ಎಂದೂ ಕಮ್ಯೂನಿಜಮ್ಮಿನ ವೈರಿ ಎಂದೂ ಸರಕಾರವು ಘೋಷಿಸಿದೆ. ಈತನು ಬರೆದ ಅನೇಕ ಸುಪ್ರಸಿದ್ಧ ಕಾದಂಬರಿಗಳಲ್ಲಾಗಲೀ ಪುಸ್ತಕಗಳಲ್ಲಾಗಲೀ ಯಾವುದೇ ಒಂದು ಸಹ, ಇಡೀ ರಶಿಯಾದ ಯಾವ ಪುಸ್ತಕಾಲಯದಲ್ಲಾಗಲಿ, ಅಂಗಡಿಯಲ್ಲಾಗಲಿ ಇಲ್ಲವೇ ಇಲ್ಲ. ಈತನ ಪುಸ್ತಕಗಳನ್ನು ಅಧ್ಯಯನ ಮಾಡುವುದು ಪೂರ್ಣ ನಿಷಿದ್ಧ. ಒಮ್ಮೆ ನಾನು ಒಬ್ಬ ಸುಶಿಕ್ಷಿತ ರಶಿಯನ್ ಮಹಿಳೆ ಮತ್ತು ಇನ್ನೊಬ್ಬ ಸುಸಂಸ್ಕೃತ ರಶಿಯನ್ ಗೃಹಸ್ಥನೊಡನೆ ಇದರ ಕಾರಣವನ್ನು ಕೇಳಿದೆ. ಅವರು "ದಸ್ತಯೆಫ್‌ಸ್ಕಿಯ ಪುಸ್ತಕಗಳು ಶುದ್ಧ ಅಯೋಗ್ಯ" ಎಂದರು. ನಾನು "ತಮಗೆ ಹೇಗೆ ಗೊತ್ತು? ತಾವು ಆತನ ಒಂದು ಪುಸ್ತಕವನ್ನಾದರೂ ಓದಿರುವಿರಾ?" ಎಂದು ಪ್ರಶ್ನಿಸಿದೆ. "ಇಲ್ಲ!" ಎಂದು ಉತ್ತರ ಬಂದಿತು. ಕಮ್ಯೂನಿಸ್ಟ ಸತ್ತೆ ಕಟ್ಟದ ನಂತರ (೧೯೧೭)ದ ಜನಾಂಗಕ್ಕಂತೂ ದಸ್ತಯೆಫ್‌ಸ್ಕಿ ಎಂಬ ಸಾಹಿತಿಯೊಬ್ಬನು ಇದ್ದನೆಂಬ ಅರಿವು ಕೂಡಾ ಇಲ್ಲವೇ ಇಲ್ಲ. ಏಕೆಂದರೆ ಈತನು ಬರೆದ ಒಂದಕ್ಷರವೂ ರಶಿಯಾದೊಳಗೆ ಕಾಣಸಿಗದು.

ಈ ನಿರ್ಬಂಧದಿಂದ ದೊಡ್ಡ ಪ್ರಯೋಜನವಿದೆ: ಏನೆಂದರೆ ಜನರಲ್ಲಿ ಭಿನ್ನಾಭಿಪ್ರಾಯಗಳಿಗೆ ಹೆಚ್ಚಿನ ಎಡೆಯಿಲ್ಲದೆ ಗಾಢ ಐಕ್ಯಮತವುಂಟಾಗುವದು.

### "ಭಾರತ ಸ್ವತಂತ್ರವಲ್ಲ!"

ವಿದ್ಯಾಭ್ಯಾಸ ಮತ್ತು ಪ್ರಚಾರಗಳೂ ಈ ನಿರ್ಬಂಧಗಳನ್ನು ಬಲಗೊಳಿಸುವವು. ದೃಷ್ಟಾಂತಕ್ಕಾಗಿ ಒಂದು ಪ್ರಸಂಗವನ್ನು ಉದಾಹರಿಸುವೆನು: ಭಾರತೀಯ ರಾಯಭಾರವಾಸದ ಒಬ್ಬ ಬಂಗಾಲಿ ಅಧಿಕಾರಿ ಸದ್ಗೃಹಸ್ಥರ ಸಣ್ಣ ಮಗನು ಮೋಸ್ಕೋದ ರಶಿಯನ್ ಶಾಲೆಯಲ್ಲಿ ಓದುತ್ತಿದ್ದನು. (ಈ ಕ್ರಮ ಬಲು ಅಪರೂಪ. ಹೆಚ್ಚಿನ ಭಾರತೀಯ ಅಧಿಕಾರಿಗಳು ತಮ್ಮ ಮಕ್ಕಳನ್ನು ಇಂಗ್ಲೀಷ ದೂತವಾಸದ ಒಳಗಿನ ಖಾಸಗಿ ಶಾಲೆಗೆ ಕಳಿಸುತ್ತಾರೆ. ಆದರೆ ಈ ಬಂಗಾಲಿ ಅಧಿಕಾರಿಗಳ ಪತ್ನಿ ಪೋಲಿಷ್ ಮಹಿಳೆಯಾಗಿದ್ದುದರಿಂದ, ಆ ಹುಡುಗನ ಮಾತೃಭಾಷೆ ಪೋಲಿಷ್ ಆಗಿದ್ದಿತು. ಪೋಲಿಷ್ ಭಾಷೆಗೂ ರಶಿಯನ್ ಭಾಷೆಗೂ ಬಹು ಸಾಮ್ಯವಿರುವದರಿಂದ ಈ ಹುಡುಗನನ್ನು ಮೋಸ್ಕೋದ ಸರಕಾರಿ ಶಾಲೆಗೆ ಕಳಿಸಿದ್ದರು.)

ಈ ಹುಡುಗನ ಶಾಲಾ ಪಠ್ಯ-ಪುಸ್ತಕಗಳಲ್ಲಿ ಚರಿತ್ರೆ ಮತ್ತು ಭೂಗೋಳಶಾಸ್ತ್ರದಲ್ಲಿ "ಹಿಂದೂ ದೇಶವು ಇಂಗ್ಲಂಡಿನ ಒಂದು ಅಧೀನ ರಾಷ್ಟ್ರ ಅದು ಇನ್ನೂ ಸ್ವತಂತ್ರವಲ್ಲ" ಎಂದಿತ್ತು. ನಮ್ಮ

ಹುಡುಗನು ರೇಗಿ ಅಧ್ಯಾಪಕರೊಡನೆ "ಇದು ತಪ್ಪಲ್ಲವೇ ?" ಎಂದು ಕೇಳಿದಾಗ ಅಧ್ಯಾಪಕರು "ಮಗೂ, ನಾಮಮಾತ್ರಕ್ಕೇನೋ ಹಿಂದೂ ದೇಶವು ಸ್ವತಂತ್ರವೆಂದಿದ್ದರೂ, ಅದು ನಿಜವಾಗಿಯೂ ಇಂಗ್ಲೀಷರ ಗುಲಾಮರಾಷ್ಟ್ರ" ಎಂದರು. ಎಳೆಪ್ರಾಯದ ಮಕ್ಕಳಿಗೆ ಶಾಲೆಯಲ್ಲಿ ಮೇಷ್ಟ್ರರು ಹೇಳಿದ್ದು, ಪಠ್ಯಪುಸ್ತಕಗಳಲ್ಲಿ ಬರೆದುದು ಎಲ್ಲಾ ವೇದವಾಕ್ಯವಷ್ಟೆ ! ಈ ಹುಡುಗನಿಗೆ "ಹಿಂದೂ ದೇಶವು ಸ್ವತಂತ್ರ ರಾಷ್ಟ್ರ" ಎಂದು ವಿಶ್ವಾಸ ಹುಟ್ಟಿಸಲು ಆತನ ತಂದೆ-ತಾಯಿ ಬಹಳ ತರ್ಕ ಮಾಡಿ ಪೇಚಾಡಬೇಕಾಯಿತು. ಸಫಲರಾದರೋ ಇಲ್ಲವೋ !

## ಪ್ರಯಾಣ :

### ಲೆನಿನ್‌ಗ್ರಾಡನಿಂದ ಮೋಸ್ಕೋಗೆ

ಸುಂದರವಾದ ಲೆನಿನ್‌ಗ್ರಾಡ್ ನಗರದಿಂದ ಮೋಸ್ಕೋಗೆ ಪ್ರಯಾಣ ಬೆಳಸಿದೆನು. ಒಂದಿಡೀ ರಾತ್ರಿಯ ರೈಲು ಪ್ರಯಾಣ. ರೈಲು ಗಾಡಿಯಲ್ಲಿ ಮೂರು ದರ್ಜೆಗಳಿವೆ. ಮೊದಲನೆಯ ಅತಿ ಸುಖಕರವಾದ "ವಾಗೊನ್ ಲಿ" (Wagon-lit) ಇದು, ಸರಕಾರದ ಮತ್ತು ಕಮ್ಯೂನಿಸ್ಟ ಪಕ್ಷದ ಅಧಿಕಾರಿಗಳಿಗೆ, ಪರದೇಶದ ಪ್ರತಿನಿಧಿಗಳಿಗೆ, ಅಭ್ಯಾಗತರಿಗೆ, ಸಂದರ್ಶಕರಿಗೆ ಮಾತ್ರ ಮೀಸಲಾಗಿದೆ. ಎರಡನೆಯದು ಸಾದಾ ಗಾಡಿ. ಮೂರನೆಯದು ಜನಸಾಮಾನ್ಯರ ಗಾಡಿ. ಇಲ್ಲಿನ ಆಸನಗಳು ಬರಿಯ ಮರದವು. ಟಿಕೆಟಿನ ದರಗಳೂ ದರ್ಜೆಗೆ ತಕ್ಕಂತೆ ಭಿನ್ನಭಿನ್ನವಾಗಿವೆ.

ಗಾಡಿಗಳೊಳಗೆ ಬಹಳ ಬೆಚ್ಚಗಾಗಿರುವಂತೆ ಉಷ್ಣ ಸಂಚಾರದ ವ್ಯವಸ್ಥೆಯನ್ನು ಮಾಡಿದ್ದಾರೆ. ಅಲ್ಲದೆ ಕಾವಲಿಗೊಬ್ಬ ಆಳೂ ಕೆಲಸಕ್ಕೊಂದು ಹೆಣ್ಣಾಳೂ ಇರುವರು.

ವಿದೇಶೀಯರು ಯಾರೇ ಆಗಲಿ, ರಶಿಯಾ ದೇಶದೊಳಗೆ ರೈಲುಗಾಡಿಯಲ್ಲಿ ಪ್ರಯಾಣ ಮಾಡಬೇಕಾದರೆ ರಶಿಯಾ ಸರಕಾರದ "ಇಂತೂರಿಸ್ತ್" (Inturist) ಎಂಬ ವಿಭಾಗದ ಮೂಲಕವೇ ಮಾಡಬೇಕು. ವಿದೇಶೀಯರಿಗೆ ಟಿಕೆಟ್ಟುಗಳನ್ನು ರೇಲ್ವೇ ಸ್ಟೇಶನಿನಲ್ಲಿ ಕೊಡಲಾಗುವುದಿಲ್ಲ. "ಇಂತೂರಿಸ್ತ್" ಇಲಾಖೆಗೆ ಅರ್ಜಿ ಹಾಕಿ ಅವರಿಂದ ಟಿಕೇಟನ್ನು ಪಡೆಯಬೇಕು. ಹೋಟೇಲು ಇತ್ಯಾದಿ ಎಲ್ಲಾ ವ್ಯವಸ್ಥೆಗಳೂ ಇವರಿಂದಲೇ ಆಗಬೇಕು. ಸ್ವತಂತ್ರವಾಗಿ ನಾವೇ ವ್ಯವಸ್ಥೆ ಮಾಡಲು ಸಾಧ್ಯವಿಲ್ಲವೆಂದು ನಿಯಮವಿದೆ. ಇದು ನಿಸ್ಸಂದೇಹ.

ತಮ್ಮದೇ ಆದ ಮೋಟಾರು ಕಾರು ಉಳ್ಳ ವಿದೇಶೀಯರು ತಮ್ಮ ಕಾರುಗಳಲ್ಲೇ ಪ್ರಯಾಣ ಮಾಡಬಹುದು. ಆದರೆ ಆ ಕಾರುಗಳ ಡ್ರಾಯಿವ್ಹರರು (chauffeur) ರಶಿಯನರೇ ಆಗಿರಬೇಕು. ಈ ರಶಿಯನ್ ಡ್ರೈವರರನ್ನು ರಶಿಯನ್ ಸರಕಾರವೇ ನಿಯಮಿಸುವುದು. ರಶಿಯನ್ ಸರಕಾರದಿಂದ ನಿಯುಕ್ತರಾದ ಡ್ರೈವರರ ಹೊರತು ಬೇರೆ ಯಾರಿಗೂ ರಶಿಯಾದ ವಾಹನ ಸಂಚಾರದ ನಿಯಮಗಳು (Traffic Rules) ತಿಳಿಯಲಾರವು; ಆದುದರಿಂದ ಅವರೇ ಕಾರುಗಳನ್ನು ನಡೆಯಿಸಬೇಕು ಎಂದು ಸರಕಾರದ ವಾದ.

ಅಲ್ಲದೆ ಮೋಸ್ಕೋ ನಗರದಿಂದ ಹೊರಗೆ ಹೋಗಬೇಕಾಗಿದ್ದಲ್ಲಿ ಸರಕಾರದ ವಿದೇಶ ಇಲಾಖೆಯವರಿಂದ ವಿದೇಶೀಯರು ಅನುಮತಿ ಪಡೆಯಬೇಕು. ದೇಶದ ಅನೇಕ ಭಾಗಗಳು "ನಿಷಿದ್ಧ ವಲಯ" (Prohibited Areas) ಎಂದು ಇರುವುದರಿಂದ, ಅಲ್ಲಿಗೆ ಹೋಗುವದು ಸರ್ವಥಾ ಅಶಕ್ಯ.

ನನ್ನ ಪ್ರಯಾಣಕಾಲದಲ್ಲಿ, ಗಾಡಿಯಲ್ಲಿನ ರಶಿಯನ್ ಪ್ರಯಾಣಿಕರು ಶ್ರೀ. ಜವಾಹರಲಾಲ ನೆಹರೂರವರ ಬಗ್ಗೆ ಗೌರವವನ್ನೂ ಮೆಚ್ಚಿಗೆಯನ್ನೂ ವ್ಯಕ್ತಪಡಿಸುತ್ತಿದ್ದರು. ಮತ್ತು ನನ್ನೊಡನೆ ಸರಸ ಸಂಭಾಷಣೆಯನ್ನು ಮಾಡುತ್ತಿದ್ದರು.

### "ಕೊರತೆಗಳು"

ರಶಿಯಾ ದೇಶದಲ್ಲಿ ಕೆಲವು ಅನುದಿನದ ಉಪಯೋಗಕ್ಕೆ ಬೇಕಾಗುವ ಪ್ರಧಾನ ವಸ್ತುಗಳ ಕೊರತೆಯಿದೆಯೆಂದರೆ ಕೆಲವರಿಗೆ ಆಶ್ಚರ್ಯವಾಗಬಹುದು. ನಿತ್ಯೋಪಯೋಗಿ ವಸ್ತುಗಳ — ಅಂದರೆ ಉಣ್ಣೆ, ಉಣ್ಣೆಬಟ್ಟೆ, ಇತರ ಬಟ್ಟೆಬರೆ, ಪಾದರಕ್ಷೆಗಳು, ಬೆಣ್ಣೆ, ಹಾಲು, ಕಾಯಿಪಲ್ಯ ತರಕಾರಿ, ಹಣ್ಣುಹಂಪಲುಗಳು ಮತ್ತು ನಿತ್ಯೋಪಯೋಗಕ್ಕೆ ಅವಶ್ಯವಾದ ಸಣ್ಣಪುಟ್ಟ ಕಬ್ಬಿಣದ ಸಾಮಗ್ರಿಗಳು, ಹೆಯರ್ ಪಿನ್, ಸಾಬೂನು ಇವುಗಳ ಕೊರತೆಯಿದೆ. ಈ ಘೋರ ಚಳಿಯ ದೇಶದಲ್ಲಿ, ಈ ಶೀತಲವಲಯದಲ್ಲಿ, ಉಣ್ಣೆ ಬಟ್ಟೆ, ಪಾದರಕ್ಷೆ, ಮತ್ತು ಬೆಣ್ಣೆ ಇವುಗಳ ಕೊರತೆಯು ನಿಜವಾಗಿಯೂ ಕ್ರೂರವೆಂದೇ ಪರಿಗಣಿಸಬೇಕು. ತರಕಾರಿ ಹಣ್ಣುಹಂಪಲುಗಳಿಗೆ ವಿದೇಶೀಯರಾದ ನಾವು ಹಾತೊರೆಯುತ್ತಿದ್ದರೂ ರಶಿಯನ್ ಜನಸಾಮಾನ್ಯರಿಗೆ ಇವಷ್ಟು ಅವಶ್ಯಕವಲ್ಲ. ಧಾರಾಳವಾದ ಮಾಂಸ ಮತ್ತು ವೋಡ್ಕಾ ಮದ್ಯದಿಂದ ಅವರು ತೃಪ್ತರು. ವಿದೇಶೀ ಪ್ರತಿನಿಧಿಗಳಿಗೆ (ರಾಯಭಾರಿವಾಸಗಳಿಗೆ) ಪ್ರತ್ಯೇಕವಾದ (ಸರಕಾರೀ) ಅಂಗಡಿಗಳೂ ರಶಿಯನ್ ಅಧಿಕಾರಿಗಳಿಗೂ ಕರ್ಮಚಾರಿಗಳಿಗೂ ವಿಶಿಷ್ಟವಾಗಿ ಪ್ರತ್ಯೇಕವಾದ ಆಹಾರದ "ರೇಶನ್" ಅಂಗಡಿಗಳೂ ಇರುವುದರಿಂದ ಈ ಉನ್ನತ ವರ್ಗಕ್ಕೆ ಕಷ್ಟವಾಗಲಾರದು. ಕೆಂಪು ಸೇನೆ (ರಶಿಯಾದ ಸೈನ್ಯ Red Army) ಕ್ಕೂ ತನ್ನದೇ ಆಹಾರ ವ್ಯವಸ್ಥೆ ಇರುವದರಿಂದ ಸೈನಿಕರಿಗೆ ತೊಂದರೆಯಿಲ್ಲ. ಕಮ್ಯುನಿಷ್ಟ ಪಕ್ಷದ ಸದಸ್ಯರಿಗೂ ಪ್ರತ್ಯೇಕವಾದ, ಹೆಚ್ಚಿನ ರೇಶನ್ ದೊರೆಯುವ ಅಂಗಡಿಗಳನ್ನು ನಿಯೋಜಿಸಿದ್ದಾರೆ. ಆದರೆ ಜನಸಾಮಾನ್ಯರಿಗೆ, ಅಂದರೆ ಕೂಲಿಕಾರರು ಇತ್ಯಾದಿ ಕೃಷಿಕರಲ್ಲದ ಬಡವರಿಗೆ ನಿಜವಾಗಿಯೂ ಕಷ್ಟವೇ ಸರಿ. ಈ ಕೊರತೆಗಳ ಕುರಿತಾದ ನನ್ನ ಮಾತನ್ನು ಓದುಗರು ನಂಬದೆ ಹೋದಲ್ಲಿ ಅವರು ದಯವಿಟ್ಟು, ರಶಿಯಾದ ಪ್ರಧಾನ ಮಂತ್ರಿ ಮಾಲಿಂಕಫ್ (Malenkov) ಮಹಾಶಯರು ತಾನು ಪಟ್ಟಕ್ಕೇರಿದ ಕಾಲದಲ್ಲಿ ಮಾಡಿದ ಅಗ್ರ ಭಾಷಣವನ್ನು ಕೂಲಂಕಷವಾಗಿ ಓದಬೇಕು. ಈ ಭಾಷಣದಲ್ಲಿ ರಶಿಯಾದ ಪ್ರಧಾನ ಮಂತ್ರಿ ಮಾಲಿಂಕಫ್ (Malenkov) ನೇ, ಆಹಾರ ಪದಾರ್ಥಗಳ, ತರಕಾರಿ ಇತ್ಯಾದಿ ಕೃಷಿಯ ಫಲಗಳ, ಮನೆ (ನಿವಾಸ) ಗಳ ಬಟ್ಟೆಬರೆಗಳ ಮತ್ತು ಬೆಣ್ಣೆಯ ಅಭಾವ, ಈ ವಸ್ತುಗಳ ಉತ್ಪನ್ನ ಕುಂದಿರುವುದು, ಕೃಷಿ ಹಿಂದುಳಿದಿರುವುದು ಮತ್ತು ಇದಕ್ಕೆ ಕಾರಣರಾದ ಅಧಿಕಾರಿಗಳ ಮತ್ತು ಇಲಾಖೆಗಳ ಜಡತ್ವ, ದಡ್ಡತನ ಮತ್ತು ನಿಷ್ಕ್ರಿಯತ್ವಗಳನ್ನೂ ಹೆಡ್ಡತನವನ್ನೂ ನಿರ್ದಾಕ್ಷಿಣ್ಯವಾಗಿ, ತೀಕ್ಷ್ಣವಾಗಿ, ಕಟುವಾಗಿ ಟೀಕಿಸಿರುತ್ತಾನೆ. ನಾನು ಪ್ರಸ್ತುತ ವಿಷಯದಿಂದ ಮತ್ತು ಸಂಕೋಚದಿಂದ ಉಲ್ಲೇಖಿಸಿದ ವಿಷಯಗಳನ್ನು ಈ ರಶಿಯಾದ ಅಧಿಕಾರಪುರುಷನೇ ಸ್ಪಷ್ಟವಾಗಿ ಖಂಡತುಂಡಾಗಿ ವಿವರಿಸಿ ಟೀಕಿಸಿರುವನು. (ಈ ಭಾಷಣದ ಈ ಭಾಗವನ್ನು ನಮ್ಮ ದೇಶದ ಪತ್ರಿಕೆಗಳು ಏಕೆ ಪ್ರಕಟಪಡದೆ ಹೋದವೋ ನನಗೆ ತಿಳಿಯದು).

ಬೆಣ್ಣೆಯ ಕೊರತೆಯಿಂದ ವಿದೇಶಿಯನಾದ ನನಗೆ ತುಂಬಾ ಕಷ್ಟವಾಯಿತು. ಬೆಣ್ಣೆಯೆಂಬ ಹೆಸರಲ್ಲಿ ಒಂದು ನಾರುವ ಕೊಬ್ಬು ಪದಾರ್ಥವು ಹೋಟೇಲುಗಳಲ್ಲೂ ರೆಸ್ಟೊರಾಂಟುಗಳಲ್ಲೂ ದೊರೆಯುತ್ತದೆ. ದೂತವಾಸಗಳಲ್ಲೇ ತಮ್ಮ ಹೆಂಡಿ-

ರೊಡನೆ ಬಿಡಾರ ಮಾಡಿಕೊಂಡಿರುವ ಅಧಿಕಾರಿಗಳಿಗೂ ಕರ್ಮಚಾರಿಗಳಿಗೂ ಇದರ ತೊಡಕಿಲ್ಲ. ಏಕೆಂದರೆ ಇವರು ಪರದೇಶಗಳಿಂದ ಸುಂಕವಿಲ್ಲದೆ ತಮ್ಮ ತಮ್ಮ ಸರಕಾರಗಳ ಮೂಲಕ ಈ ಅಗತ್ಯದ ವಸ್ತುಗಳನ್ನೆಲ್ಲ ತರಿಸುತ್ತಾರೆ. ಹೋಟೇಲಲ್ಲಿ ಜೀವಿಸುತ್ತಿದ್ದ ನನ್ನಂಥ ಅವಿವಾಹಿತ ಮನುಷ್ಯರು ಸೊರಗಬೇಕಾಯಿತು.

ಬಟ್ಟೆಬರೆ ಮತ್ತು ಪಾದರಕ್ಷೆಗಳ ಕೊರತೆ ಮತ್ತು ಬಹಿರಂಗ "ಕಳ್ಳಸಂತೆ''ಯ ವಿಚಾರ ನಮಗೆಲ್ಲ ಒಂದು ಸ್ವಾರಸ್ಯವಾದ ರೀತಿಯಲ್ಲಿ ತಿಳಿದುಬಂತು. ಆದರ ಕತೆ ಹೀಗಿದೆ: ಒಂದು ದೂತವಾಸದಲ್ಲಿ ಒಬ್ಬ ಚಾಣಾಕ್ಷರಾದ ಪಂಜಾಬೀ ಉನ್ನತಾಧಿಕಾರಿಗಳಿದ್ದರು. ಈ ಬುದ್ಧಿವಂತರು ರಶಿಯಾದ ಬಹಿರಂಗ ಕಳ್ಳಸಂತೆಯಿಂದ ಬಹುವಾಗಿ ಲಾಭವನ್ನು ಪಡೆದರು. ಈ ಚಾಣಾಕ್ಷರು, ಹೊರದೇಶ (ಮುಖ್ಯವಾಗಿ ಸ್ವೀಡನ್)ದಿಂದ ಆಗಾಗ್ಗೆ ತುಂಬಾ ಬಟ್ಟೆಬರೆಗಳನ್ನೂ ಪಾದರಕ್ಷೆಗಳನ್ನೂ ಕೊಂಡುಕೊಂಡರು. (ಇದಕ್ಕಾಗಿ ವಿದೇಶೀ ರಾಯಭಾರಿ ವಾಸಕ್ಕೆ ವಿಶೇಷವಾದ ಅನುಮತಿಯು ಎಲ್ಲ ದೇಶದೇಶಗಳಲ್ಲೂ ಇದೆ). ಮತ್ತು ಈ ವಸ್ತುಗಳನ್ನು ಮೋಸ್ಕೋ ನಗರದ ಕರಿಸಂತೆಯಲ್ಲಿ ಒಂದಕ್ಕೆ ಹತ್ತು ಪಾಲಿನ ಬೆಲೆಯಲ್ಲಿ ಮಾರಿದರು. ಈ ವ್ಯಾಪಾರದಿಂದ ಬಂದ ಪುಷ್ಕಳವಾದ ಲಾಭದಿಂದ ತಮ್ಮ ಜೀವನದ ಖರ್ಚನ್ನೆಲ್ಲಾ ನಿರ್ವಹಿಸಿದರು. ಸರಕಾರದಿಂದ ಬರುವ ವೇತನ, ವಿಶೇಷ ವೇತನ, ತುಟ್ಟಿಭತ್ತೆ ಇವನ್ನೆಲ್ಲಾ ಬೇಂಕಿನಲ್ಲಿ ಶೇಖರಿಸಿಟ್ಟರು. ಈ ವ್ಯಾಪಾರದ ಸುಳಿವು ಕೊನೆಗೆ ಅವರ ದೇಶದ ಸರಕಾರಕ್ಕೆ ಹತ್ತಿ ಈ ಚತುರರನ್ನು ಸ್ವದೇಶಕ್ಕೇ ವರ್ಗಾಯಿಸಿ ಬೇರೊಂದು ಉನ್ನತ ಪದವಿಗೇರಿಸಲಾಯಿತು!

## "ಬಹಿರಂಗ ಕಳ್ಳಸಂತೆ''

"ಬಹಿರಂಗ ಕಳ್ಳಸಂತೆ'' ಅಂದರೆ ಏನು? ಇದನ್ನು "ಕಳ್ಳಸಂತೆ'' ಎನ್ನಲೋ ಬೇಡವೋ ಎಂದು ಪೇಚಿನಲ್ಲಿದ್ದೇನೆ. ಏಕೆಂದರೆ ಸರ್ಕಾರದಿಂದ ಇದಕ್ಕೆ ಯಾವ ಆಕ್ಷೇಪವಾಗಲೀ ನಿಷೇಧವಾಗಲೀ ಇಲ್ಲ. ಆದರೆ ಈ ಬಹಿರಂಗ ಸಂತೆ (ಅಂಗಡಿ)ಯಲ್ಲಿ ಬೆಲೆ ಮಾತ್ರ ರೇಶನ್ ಬೆಲೆಗಿಂತ ದುಬಾರಿಯಿಂದ ಹಿಡಿದು ಹತ್ತುಪಾಲಿಗಿಂತಲೂ ಮೇಲಿನವರೆಗೆ ಇರುವುದು. ಇಲ್ಲಿಗೆ ಸಾಮಾನುಗಳು ಬರುವ ಬಗೆ ಹೇಗೆ? ವಿವರಿಸುವೆನು:

ರಶಿಯಾದ ಕೃಷಿಕೇಂದ್ರ (Collective Farm, Kolkhoz)ಗಳಲ್ಲಿಯೇ ಎಲ್ಲ ಕೃಷಿಯು ನಡೆಯುತ್ತದೆ. ಈ ಕೃಷಿ ಕೇಂದ್ರಗಳಲ್ಲಿ ದುಡಿಯುವ "ಕೃಷಿಕೆಲಸಗಾರರು'' ಸರಕಾರಕ್ಕಾಗಿಯೇ ದುಡಿಯುತ್ತಾರೆ. ಆದರೆ ಖಾಸಗಿಯಾಗಿ, ತಮ್ಮ ವೈಯಕ್ತಿಕ ಲಾಭಕ್ಕಾಗಿ ಕೃಷಿಮಾಡಲೆಂದು ಪ್ರತಿಯೊಬ್ಬನಿಗೂ ಸ್ವಲ್ಪಸ್ವಲ್ಪ ಭೂಮಿಯನ್ನು ಪ್ರತ್ಯೇಕಿಸಿರುತ್ತಾರೆ. ಈ ಸಣ್ಣ ತುಂಡುಗಳಲ್ಲಾದ ಕೃಷಿಯ ಉತ್ಪನ್ನ ಈ ಕೃಷಿಕನ ವೈಯಕ್ತಿಕ ಲಾಭವಾಗುವದು, ಹೊರತು ಸರಕಾರಕ್ಕೆ ಸೇರುವದಿಲ್ಲ. ಹಿಂದಕ್ಕೆ ಲೆಲಿನ್‌ನ ಕಾಲದಲ್ಲಿ ಈ ಸವಲತ್ತು ಇರಲಿಲ್ಲ. ಆದುದರಿಂದ ಕೃಷಿಕರು ಅಸಮಾಧಾನದಿಂದ ಕೆಲಸದಲ್ಲಿ ಅಸಡ್ಡೆ ತೋರಿಸಿದುದರಿಂದ ಉತ್ಪತ್ತಿ ಕುಂದಿತು. ಆದುದರಿಂದ ಬುದ್ಧಿವಂತನಾದ ಸ್ಟಾಲಿನ್ನನು ಈ ಸವಲತ್ತನ್ನು ಬೇಸಾಯಗಾರರಿಗೆ ಕೊಟ್ಟನು. ಆದರೆ ಈ ಖಾಸಗೀ ಲಾಭದ ಮೇಲೆ ಬಲವಾದ ಆದಾಯ ತೆರಿಗೆ (ಇನಾಕಮ್ ಟ್ಯಾಕ್ಸ್ Income Tax) ಯನ್ನು ಹೊರಿಸಿದ್ದನು. ಚಾಣಾಕ್ಷನಾದ ಮಾಲಿಂಕಫ್‌ನೂ ಆತನ ಬಲಗೈಬಂಟನಾದ ಕೃಷಿಮಂತ್ರಿ ನಿಕಿತ ಹ್ರೂಶ್ಚೆಫ (Nikita Khruschev)ನೂ ಈ ಆದಾಯ ತೆರಿಗೆಯನ್ನು ಇನ್ನೂ ಬಹು ಕಡಿಮೆ ಮಾಡಿಸಿದ್ದಾರೆ. ಇದರಿಂದ ಖಾಸಗೀ ಕೃಷಿಮಾಡಲು ಹೆಚ್ಚು ಉತ್ತೇಜನ ದೊರೆಯಲಿ ಎಂಬುದೇ ಇದರ ಉದ್ದೇಶ. (ರಶಿಯಾದಲ್ಲಿ ಇನ್‌ಕಮ್ ಟ್ಯಾಕ್ಸ ಇದೆಯೆಂದು ಓದಿ ತಮಗೆ ಆಶ್ಚರ್ಯವಾಗಬಹುದು. ಆದರೆ ಇದೆ, ಹೌದು.) ಈ ಖಾಸಗೀ ಕೃಷಿಯಿಂದಾದ ಉತ್ಪನ್ನವನ್ನು ಬಹಿರಂಗ ಸಂತೆಯಲ್ಲಿ ಲಾಭಕ್ಕಾಗಿ ಮಾರುತ್ತಾರೆ.

ಸರಕಾರದ ರೇಶನ್ ಅಂಗಡಿಗಳಲ್ಲಿ ಮಾರಿದರೆ ಏನು ಲಾಭ? ಇದಲ್ಲದೆ, ಪಾದರಕ್ಷೆ, ಬಟ್ಟೆಬರೆ, ಇವಕ್ಕೆಲ್ಲಾ ರೇಶನ್ (ನಿಯಮಿತ ಅಂಶ) ಇದೆಯಷ್ಟೆ? ಕೆಲವರು ಆಹಾರದ ಮೇಲೆ, ಇಲ್ಲವೇ ಹಣದ ಮೇಲೆ ಹೆಚ್ಚು ಆಸೆಯುಳ್ಳವರು, ತಮ್ಮ ರೇಶನಿನಲ್ಲಿ ಬಂದ ಬಟ್ಟೆಬರೆಗಳನ್ನೋ ಪಾದರಕ್ಷೆಗಳನ್ನೋ ಬಹಿರಂಗ ಸಂತೆಯಲ್ಲಿ ಹೆಚ್ಚು ಬೆಲೆಗೆ ಲಾಭದಲ್ಲಿ ಮಾರಿ ಆದಾಯಮಾಡಿಕೊಳ್ಳುತ್ತಾರೆ. ತಮಗೆ ಅಗತ್ಯವುಳ್ಳ ಇತರ ವಸ್ತುಗಳನ್ನು ಬಹಿರಂಗ ಸಂತೆಯಲ್ಲಿ ಕೊಳ್ಳುತ್ತಾರೆ. (ಇನ್ನು ಕೆಲವು ದೊಡ್ಡ ದೊಡ್ಡ ಅಧಿಕಾರಿಗಳೂ ಕಾರ್ಖಾನೆಗಳ ಅಧಿಕಾರಿ-ಕರ್ಮಚಾರಿಗಳೂ ಗುಪ್ತವಾಗಿ ಸಾಮಾನುಗಳನ್ನು ಪಡಕೊಂಡೊ, ಇಲ್ಲವೆ ತಮ್ಮ ಅಧಿಕಾರ ಬಲದಿಂದ ಹೆಚ್ಚಿನ ರೇಶನ್ (Quota) ಪಡೆದುಕೊಂಡೋ ಈ ಬಹಿರಂಗ ಸಂತೆಯಲ್ಲಿ ಮಾರಿ ಲಾಭ ಪಡೆಯುವದೂ ಉಂಟು. ಟೆಲಿವಿಶನ್ ಯಂತ್ರಗಳು (T. V. Sets) ಮತ್ತು ಕಬ್ಬಿಣ, ಸಿಮೆಂಟು ಹೀಗೆಯೇ ಗುಪ್ತವ್ಯಾಪಾರದ ಮೂಲಕ ದೊರೆಯುವುದುಂಟು. ಆದರೆ ಇದು ನಿಷಿದ್ಧ; ಬೇಕಾಯದೆಶೀರ. ಸರಕಾರಕ್ಕೆ ತಿಳಿದರೆ ಕ್ರೂರವಾದ ದಂಡನೆಯಾಗಬಹುದು. ಆದರೂ ನಡೆಯುತ್ತದೆ ಅನ್ನಿ).

## ಚಿಕಿತ್ಸೆ, ಆರೋಗ್ಯಸೇವೆ

ಇದೇ ರೀತಿಯಲ್ಲಿ, ಎಲ್ಲಾ ಆಸ್ಪತ್ರೆಗಳು, ಔಷಧೋಪಚಾರ, ಚಿಕಿತ್ಸೆ, ಡಾಕ್ಟರುಗಳ ಸೇವೆ, ಶುಶ್ರೂಷೆ, ಸಂಪೂರ್ಣ ಧರ್ಮಾರ್ಥವಾಗಿದೆ. ಆದರೆ ಡಾಕ್ಟರುಗಳು ತಮ್ಮ ಖಾಸಗೀ ಸಮಯದಲ್ಲಿ ಅಂದರೆ, ಆಸ್ಪತ್ರೆಯ ಕೆಲಸದ ಹೊರಗೆ, ತಾವು ಖಾಸಗಿಯಾಗಿ ಚಿಕಿತ್ಸೆ ನಡೆಸಬಹುದು. ಆದುದರಿಂದ ಒಳ್ಳೆಯ ಚಿಕಿತ್ಸೆ ಬೇಕೆಂದು ಇರುವ ರೋಗಿಗಳು, ರುಸುಮನ್ನು (Fees) ತೆತ್ತು, ಈ ಡಾಕ್ಟರರ ಖಾಸಗೀ ಚಿಕಿತ್ಸೆಯನ್ನು ಪಡೆಯುವರು.

## ಮೋಸ್ಕೋ ನಗರದ ದೃಶ್ಯಗಳು

ಮೋಸ್ಕೋ ನಗರದ ವಿಶಾಲವಾದ ಹೆದ್ದಾರಿಗಳು ಗುಂಬಜ ಮತ್ತು ಮಿನಾರುಗಳಿಂದ ಭವ್ಯವಾಗಿ ಶೋಭಿಸುವ, ಬೃಹದಾಕಾರದ, ಕ್ರೆಮ್‌ಲಿನ್-ಕೋಟೆ, ಮತ್ತು ವಿಶ್ವಪ್ರಸಿದ್ಧವಾದ, ವೈಭವಯುಕ್ತವಾದ, ಶಿಲ್ಪಕಲಾ ಸೌಂದರ್ಯದಿಂದ ಮೆರೆಯುವ ಭೂಗತರೈಲುದಾರಿ ಮತ್ತು ನಿಲ್ದಾಣಗಳು (ಅಂಡರ್‌ಗ್ರೌಂಡ) ಇವುಗಳನ್ನು ಮುಂದಕ್ಕೆ ಚುಟುಕಿನಲ್ಲಿ ವರ್ಣಿಸುವೆನು. ಏಕೆಂದರೆ ಈ ವೈಭವವನ್ನು ಇಷ್ಟರೊಳಗೇ ಎಷ್ಟೋ ಮಂದಿ ಭಾರತೀಯ ಮತ್ತಿತರ ಸನ್ಮಾನಿತ ಅಭ್ಯಾಗತರು ಕವಿತಾಪೂರ್ಣವಾಗಿಯೇ ವರ್ಣಿಸಿರುತ್ತಾರೆ. ನಾನು ನನ್ನ ಕಣ್ಣಿಗೆ ಗೋಚರಿಸಿದ ಇನ್ನಿತರ ಚೋದ್ಯಗಳನ್ನು ವರ್ಣಿಸುವೆನು.

"ಪ್ರನೀಚೆ'' "ಪ್ರನೀಚೆ'' ಎಂದು ದೊಡ್ಡ ದೊಡ್ಡ ಅಕ್ಷರಗಳಲ್ಲಿ ಎಲ್ಲೆಲ್ಲೂ ಆದೇಶವನ್ನು ಬರೆದುದು ನನಗೆ ಕಂಡಿತು. ಎಲ್ಲೆಲ್ಲೂ ಇದರ ಪ್ರಕಟನೆಗಳು, ಘೋಷಣೆಗಳು. "ಪ್ರನೀಚೆ''-"ಹಣ

ವನ್ನು ಶೇಖರಿಸಿರಿ, ಬ್ಯಾಂಕಿನಲ್ಲಿಡಿರಿ, ಶೇಖರ ಸರ್ಟಿಫಿಕೇಟುಗಳನ್ನು ಕೊಳ್ಳಿರಿ ; ಹಣವನ್ನು ವ್ಯಯಮಾಡಬೇಡಿರಿ'' ಎಂದು ಎಲ್ಲೆಲ್ಲೂ ಆದೇಶ. ಜನರು ಬ್ಯಾಂಕಿನಲ್ಲಿ ಹಣವನ್ನು ಶೇಖರಿಸಿಡಬೇಕೆಂದು ಉತ್ತೇಜನ ಕೊಡುವದಲ್ಲದೆ, ಸರಕಾರವು ಬಹು ಒತ್ತಾಸೆ ಮಾಡುವುದು. ಅದೂ ಅಲ್ಲದೆ ಮರಣಾನಂತರ ವ್ಯಕ್ತಿಯೊಬ್ಬನು ಶೇಖರಿಸಿದ ಹಣವಾಗಲೀ, ಮನೆಯಾಗಲೀ ಆತನ ಮಕ್ಕಳಿಗೆ ಅಥವಾ ಇತರ ವಾರಸುದಾರರಿಗೆ ದೊರೆಯುವಂತೆ ಕಾಯಿದೆ ಕೂಡಾ ಆಗಿದೆ. ಹಿಂದಕ್ಕೆ ರಶಿಯಾದ ವಿಪ್ಲವದ ನಂತರ ಲೆನಿನನ ಕಾಲದಲ್ಲಿ ಇದಕ್ಕೆ ತದ್ವಿರುದ್ಧವಾಗಿದ್ದಿತು ; ಶೇಖರಿಸಿದ ಹಣ ಸಮಾಜದ ಅಂದರೆ ಸರಕಾರದ ಸ್ವತ್ತೆಂದು ಪರಿಗಣಿಸಲ್ಪಡು-ತ್ತಿತ್ತು. ಆದರೆ ಇದರಿಂದ ಜನರಲ್ಲಿ ದುಡಿಯುವ ಉತ್ಸಾಹವೇ ಕುಂದಿತೆಂದು ಅಭಿಜ್ಞನಾದ ಸ್ತಾಲಿ-ನ್ನನು ಕಂಡುಹಿಡಿದು, ಧನ ಸಂಚಯಕ್ಕೂ ಪಿತ್ರಾರ್ಜಿತ ಆಸ್ತಿಯನ್ನು ವಾರಿಸುದಾರರು ಪಡೆಯುವದಕ್ಕೂ ಅನುಮತಿಯನ್ನು ಕೊಟ್ಟನು. ಆದರೆ ಇಂಗ್ಲಂಡಿನಲ್ಲಿರುವಂತೆ ಧನಸಂಚಯದ ಮೇಲೆ ತೆರಿಗೆ ( ಇನ್‌ಕಮ್ ಟ್ಯಾಕ್ಸ, ಎಸ್ಟೇಟ ಡ್ಯೂಟ) ಇರುವುದು.

## ಸ್ತಾಲಿನ್ನನ ಕೀರ್ತಿಪ್ರಸಾರ

ನಗರದ ಎಲ್ಲಾ ಬೀದಿಗಳಲ್ಲೂ ಹೆದ್ದಾರಿಗಳಲ್ಲೂ ವಸ್ತ್ರದ ಮೇಲೆ, ಗೋಡೆಯ ಮೇಲೆ, ಇಲ್ಲವೇ ಮಾಡುಗಳ ಮೇಲೆ ದೊಡ್ಡ ಅಕ್ಷರಗಳಲ್ಲಿ " ಸ್ಲಾವ ಸ್ತಾಲಿನು '' " ಸ್ತಾಲಿನ್ನರಿಗೆ ಕೀರ್ತಿಯಿರಲಿ '' " ಸ್ತಾಲಿನ್ನರ ಅನುಗ್ರಹ '' ಎಂಬ ಅಂಕಿತ ಮುದ್ರಿತವಾಗಿ ರಾರಾಜಿಸುತ್ತಿರುತ್ತಿತ್ತು. (ಈಗ ಸ್ತಾಲಿನ್ನನ ಹೆಸರಿನ ಸ್ಥಾನದಲ್ಲಿ ಬೇರೆ ಹೆಸರು ಶೋಭಿಸುತ್ತಿರಬಹುದೋ ಏನೋ !) ರಾತ್ರಿಯ ಹೊತ್ತಿಗಂತೂ ನಿಯೋನ್ ( Neon ) ವಿದ್ಯುತ್‌ದೀಪಗಳಿಂದ ಪೋಣಿಸಲ್ಪಟ್ಟ ಉಜ್ವಲಾಕ್ಷರಗಳಲ್ಲಿ " ಸ್ಲಾವ ಸ್ತಾಲಿನು '' " ಸ್ತಾಲಿನನಿಗೆ ಕೀರ್ತಿಯಿರಲಿ '' " ಸ್ತಾಲಿನ ಅನುಗ್ರಹ '' ಎಂದು ನಗರದ ಬೀದಿಗಳಲ್ಲೆಲ್ಲಾ ಕೀರ್ತಿಪ್ರಸಾರವಾಗಿರುತ್ತಿತ್ತು. ರಾಷ್ಟ್ರೀಯ ಉತ್ಸವವಾದ ಮೇ ಡೇ ( ಮೇ ದಿನಾಚರಣೆ )ಯ ಕಾಲದಲ್ಲೂ ಡಿಸೆಂಬರದ ಕ್ರಾಂತಿಯ ವಾರ್ಷಿಕೋತ್ಸವದ ಕಾಲದಲ್ಲೂ ನಿಯೋನ್ ವಿದ್ಯುದಕ್ಷರ ( Neon Signs )ಗಳ ಮೂಲಕ ಸ್ತಾಲಿನ್ನರ ಅಮೋಘವಾದ ಗುಣಕಥನವಾಗುತ್ತಿತ್ತು.

ಇದಲ್ಲದೆ, ಹೆಚ್ಚಾಗಿ ಎಲ್ಲಾ ಸಾರ್ವಜನಿಕ ಸ್ಥಳಗಳಲ್ಲೂ, ಕೇಂದ್ರಗಳಲ್ಲೂ ಕಟ್ಟಡಗಳಲ್ಲೂ ಅಂದರೆ ರೈಲು ನಿಲ್ದಾಣ, ವಿಮಾನ ನಿಲ್ದಾಣ, ಸಿನಿಮಾ ಭವನ, ನಾಟಕಮಂದಿರ, ನೃತ್ಯ ಮಂದಿರ, ನೃತ್ಯಶಾಲೆ, ಮಕ್ಕಳ ನಾಟಕ ಕೇಂದ್ರ, ಶಾಲೆ, ವಿದ್ಯಾ ಸದನಗಳು, ಪುಸ್ತಕಾಲಯ, ಆಸ್ಪತ್ರಿಗಳು ಇಲ್ಲೆಲ್ಲಾ ಸ್ತಾಲಿನ್ನ ಮಹಾಶಯನ ಅತಿ ದೊಡ್ಡದಾದ ಗಂಭೀರವಾದ ಚಿತ್ರವಿದ್ದೇ ಇರುತ್ತಿತ್ತು. ಮಕ್ಕಳ ನಾಟಕ ಕೇಂದ್ರದಲ್ಲಿನ ಒಂದು ಭವ್ಯವಾದ ಚಿತ್ರದ ನೆನವರಿಕೆಯಾಗುತ್ತದೆ. ಈ ಚಿತ್ರದಲ್ಲಿ ಸ್ತಾಲಿನ್ನ ಮಹೋದಯನು ಮಂದಸ್ಮಿತದೊಡನೆ ನಿಂತಿರುತ್ತಾನೆ. ಆತನ ನಾಲ್ಕೂ ಸುತ್ತಲೂ ಚಿಕ್ಕ ಮಕ್ಕಳ ಸಂದಣಿಯಿರುವಂತೆ ಚಿತ್ರವಿದೆ. ಆ ಮಕ್ಕಳೆಲ್ಲಾ ಆತನ ಕಡೆಗೆ ಮೋರೆಯನ್ನೆತ್ತಿ ಆತನ ದಿವ್ಯ ಮಂದಹಾಸವನ್ನೇ ಎವೆಯಿಕ್ಕದೆ ನೋಡುತ್ತಿದ್ದಾರೆ. ಕೆಳಗೆ ದೊಡ್ಡದೊಡ್ಡದಾದ ಅಕ್ಷರಗಳಲ್ಲಿ " ಸ್ತಾಲಿನ್ನನೇ, ನಮ್ಮ ಸುಖಮಯವಾದ ಬಾಲ್ಯ ಜೀವನಕ್ಕಾಗಿ, ನಾವು ನಿನಗೆ ಕೃತಜ್ಞತೆಯನ್ನು ಅರ್ಪಿಸುತ್ತೇವೆ'' ಎಂದು ಮುದ್ರಿತವಾಗಿದೆ.

ಭೂಮ್ಯಂತರ್ಗತ ರೈಲು ನಿಲ್ದಾಣಗಳ ಅಲಂಕಾರವು ಅತಿ ವೈಭವದ್ದು. ಕೋಟ್ಯಂತರ ರೂಬಲುಗಳನ್ನು ವೆಚ್ಚಮಾಡಿ ಅತಿ ಶೋಭಾಯಮಾನವಾದ ಶಿಲ್ಪಗಳನ್ನು ರಚಿಸಿ, ಈ ಶಿಲ್ಪಗಳ ಮೂಲಕ ರಶಿಯಾದ ವಿಪ್ಲವದ ಇತಿಹಾಸವನ್ನು ಪ್ರದರ್ಶಿಸಿರುತ್ತಾರೆ. ಈ ಶಿಲ್ಪಪ್ರದರ್ಶನದ ವೈಭವವು ಅಮೋಘವಾದುದು. ಇದನ್ನು ನಿರ್ಮಿಸಿದ ಕಾಲದಲ್ಲಿ ರಶಿಯಾ ದೇಶದಲ್ಲಿ ಘೋರವಾದ ಕ್ಷಾಮವಿದ್ದಿತು. ಜನಸಾಮಾನ್ಯರಿಗೆ ವಾಸಿಸಲು ಮನೆಗಳಿರಲಿಲ್ಲ. ಆದರೆ ದೇಶಕ್ಕೆ ಕೀರ್ತಿಯನ್ನು ತರಬೇಕೆಂಬ ಅಭಿಮಾನದಿಂದ ಪ್ರೇರಿತರಾಗಿ, ಇದರ ಅಲಂಕಾರಕ್ಕಾಗಿ ಕೋಟಿಗಟ್ಟಲೆ ಹಣ ವೆಚ್ಚ ಮಾಡಿದರು. ಪ್ಯಾರಿಸ್ಸಿನ, ಸೌಕರ್ಯಗಳ ದೃಷ್ಟಿಯಿಂದ ಅತ್ಯುತ್ಕೃಷ್ಟವಾದ, ಮೆಟ್ರೋ ಭೂಮ್ಯಂತರ್ಗತ ರೈಲಿನಲ್ಲಾಗಲೀ, ಲಂಡನಿನ ಅಂಡರ್‌ಗ್ರೌಂಡಿನಲ್ಲಾಗಲೀ ಅಲಂಕಾರದ ಬಗ್ಗೆ ಒಂದು ಕಾಸನ್ನೂ ವೆಚ್ಚ ಮಾಡಿಲ್ಲ. ರಶಿಯನ್ ಜನಸಾಮಾನ್ಯರ ಸಹಿಷ್ಣುತೆ, ದೇಶಭಕ್ತಿ ಮತ್ತು ವಿಧೇಯತೆಗಳಿಗೆ ಈ ವೈಭವದ ರೈಲು ನಿಲ್ದಾಣಗಳು ನಿದರ್ಶನವಾಗಿವೆ.

ಮಾಸ್ಕೋ ನಗರದ ಹೆದ್ದಾರಿಗಳ ವೈಶಾಲ್ಯವನ್ನು ಬಹುವಾಗಿ ಪ್ರಶಂಸಿಸಬೇಕು. ಹೆದ್ದಾರಿಗಳ ಪಕ್ಕದಲ್ಲಿರುವ ಉನ್ನತವಾದ ಸೌಧಗಳೂ ದರ್ಶನೀಯವಾಗಿವೆ. ಆದರೆ ಅಕ್ಕಪಕ್ಕದ ಕ್ಷುದ್ರ ಓಣಿ ಸಂದಿಗೊಂದಿಗಳು, ಸಣ್ಣಪುಟ್ಟ ಬೀದಿಗಳು, ಮತ್ತು ಅಲ್ಲಿ ಕಿಕ್ಕಿರಿದು ತುಂಬಿರುವ ಜೀರ್ಣಾವಸ್ಥೆಯಲ್ಲಿರುವ ಅನೇಕ ಮುರುಕು ಮನೆಗಳು ಮತ್ತು ಗುಡಿಸಲುಗಳು ಬಹಳ ಆಶ್ಚರ್ಯವನ್ನು ಉಂಟುಮಾಡುವವು. ಹೊಸದಾಗಿ ಬಂದ ಪ್ರೇಕ್ಷಕನಿಗೆ ಈ ದಾರಿದ್ರ್ಯದ ವಿಕಟ ಚಿನ್ಹಗಳನ್ನು, ಮತ್ತು ಪಕ್ಕದಲ್ಲೇ ರಂಜಿಸುವ ವೈಭವದ ದೃಶ್ಯ-ಗಳನ್ನು ಕಂಡು ತುಸು ಆಶ್ಚರ್ಯವೂ ಆಶಾಭಂಗವೂ ಆಗುವವು. ಮೊಸ್ಕೋ ನಗರದ ತುಸು ಹೊರವಲಯದಲ್ಲಿ, ಮೋಸ್ಕೋದ ವಿಮಾನ ನಿಲ್ದಾಣಕ್ಕೆ ಹೋಗುವ ಹಾದಿಯಲ್ಲಂತೂ ಅತೀವ ಶೋಚ-ನೀಯ ಸ್ಥಿತಿಯಲ್ಲಿರುವ, ಅತಿ ಮುರುಕಾದ ಕೊಳಕಾದ ಗುಡಿಸಲು ಕೊಂಪೆಗಳು ಕಾಣಬಂದವು. ಅಲ್ಲಿನ ಅತಿ ಬಡವರಾರೋ ಅಲ್ಲಿ ವಾಸಿಸುತ್ತಿರಬೇಕೆಂದು ನನ್ನ ಊಹೆ.

ನಾನು ಒಮ್ಮೆ ಓರ್ವ ರಶಿಯನನೊಡನೆ ಈ ವಿಚಾರವನ್ನು ಪ್ರಸ್ತಾಪಿಸಿದೆನು. ಅನೇಕ ಕ್ಷುದ್ರ ಓಣಿ-ಬೀದಿಗಳಲ್ಲಿನ ಒರಟು ಹಾದಿ, ಮುರುಕು ಮನೆಗಳು, ಕೂಲಿಕಾರರು ಮತ್ತು ಬಡಬಗ್ಗರು ವಾಸಿಸುವ ಕೊಂಪೆಗಳ ಜೀರ್ಣ ಸ್ಥಿತಿ ಇವನ್ನು ನಿದರ್ಶಿಸಿದೆನು. ಆಗ ಆ ರಶಿಯನರು ಕೋಪ-ಗೊಳ್ಳದೆ, ಶಾಂತವಾಗಿ ನನ್ನ ಮಾತನ್ನು ಕೇಳಿ ನನಗೆ ಹೀಗೆ ಸಮಾಧಾನವನ್ನು ಹೇಳಿದರು: " ಹಿಟ್ಲರನ ಯುದ್ಧ ಮತ್ತಿತರ ಅನೇಕ ಸಂಕಷ್ಟಗಳಿಂದ ವಾಸಸ್ಥಾನ ಮತ್ತು ಮನೆಗಳ ಉದ್ಧಾರ ಮಾಡಲು ಅವಕಾಶ ದೊರಕಿಲ್ಲ. ಆದರೆ ಮುಂದಕ್ಕೆ ಸರಕಾರವು ಸತತ ಪರಿಶ್ರಮದಿಂದ ಜನಸಾಮಾನ್ಯರಿಗಾಗಿ ಹೊಸದಾಗಿ ದೊಡ್ಡ ದೊಡ್ಡ ಸೌಧಗಳನ್ನು ಕಟ್ಟಿಸುವುದು. ಹಲಕೆಲವು ವರ್ಷಗಳಲ್ಲಿ ಪರಿ-ಸ್ಥಿತಿ ಸುಧಾರಿಸುವುದೆಂದು ನಮಗೆ ವಿಶ್ವಾಸವಿದೆ. '' ರಶಿಯನ್ ಜನರ ಸಹನಾಬುದ್ಧಿ ಮತ್ತು ಸರ-ಕಾರದ ಮೇಲಿನ ಅಚಲ ಭಕ್ತಿ ಹಾಗೂ ವಿಧೇಯತೆಯನ್ನು ಮೆಚ್ಚಲೇಬೇಕು.

ರಶಿಯನ್ ಜನಸಾಮಾನ್ಯರ ಇನ್ನೊಂದು ಗುಣವನ್ನು ನಾನು ಬಹುವಾಗಿ ಶ್ಲಾಘಿಸುತ್ತೇನೆ. ಇದೇನೆಂದರೆ, ವಿದೇಶೀ ಸಂದರ್ಶಕರು ರಶಿಯಾದ ಯಾವೊಂದು ಕುಂದು-ಕೊರತೆಯನ್ನು ವಿಮರ್ಶಿ

ಸಿದರೆ, ಅವರು ರೇಗುವುದಿಲ್ಲ. ಶಾಂತರಾಗಿ ಸಮಾಧಾನವನ್ನು ಹೇಳಿ ಉತ್ತರ ಕೊಡುವರು. ನಮ್ಮ ದೇಶದ ರಾಜಕೀಯ ಧುರೀಣರಲ್ಲಿ ಈ ಗುಣವಿಲ್ಲವೆಂದು ನನ್ನ ಅನುಭವ. ಹಿಂದೂ ದೇಶದ ಧುರೀಣೆಯಾದ ಶ್ರೀಮತಿ ಅರುಣಾ ಅಸಫ ಅಲ್ಲಿಯವರು ರಶಿಯನ್ ಸರಕಾರದಿಂದ ಆಮಂತ್ರಿತರಾಗಿ ಮೋಸ್ಕೋಕ್ಕೆ ಬಂದು ಅಲ್ಲಿನ "ಹೋಟೆಲ್ ನಾಸಿಯೋನಾಲ್" ಎಂಬ ಅತಿ ವೈಭವಯುಕ್ತವಾದ ಹೋಟೇಲಲ್ಲಿ ಉಳಕೊಂಡಿದ್ದರು. ಒಮ್ಮೆ ಈ ಮಹಿಳಾಮಣಿಯೊಡನೆ ಮಾತನಾಡುತ್ತಾ ನಾನು ಮೋಸ್ಕೋ ನಗರದ ಕೆಲವು ಮುರುಕು ಗುಡಿ-ಗೂಡಾರಗಳನ್ನೂ, ದಾರಿದ್ರ್ಯದ ಚಿನ್ಹಗಳನ್ನೂ ನಿದರ್ಶಿಸಿದಾಗ ಆಕೆ ಬಹುವಾಗಿ ಸಿಟ್ಟಿಗೆದ್ದು, "ನಿನಗೇನು ಗೊತ್ತು? ರಶಿಯಾದಲ್ಲಿ ದೋಷಗಳೇ ಇಲ್ಲ. ನೀನು ಸುಮ್ಮನಿರು" ಎಂದು ಬಸುಗುಟ್ಟಿದರು.

## ಬಡವರು, ಧನಿಕರು

ಬಡವರು ಮತ್ತು ಧನಿಕರಲ್ಲಿ ಮೋಸ್ಕೋ ನಗರದೊಳಗೆ ಕಂಡುಬರುವಷ್ಟು ಸ್ಪಷ್ಟವಾದ ತಾರತಮ್ಯವು ಇಂಗ್ಲಂಡಿನಲ್ಲಾಗಲಿ, ಸ್ವೀಡನ್ ದೇಶದಲ್ಲಾಗಲೀ ಕಾಣಬರುವುದಿಲ್ಲ ಎಂದು ನನಗೆ ತೋರಿತು. ಉಡುಗೆ ತೊಡಿಗೆಗಳಲ್ಲಿ, ವಾಹನ ಸೌಕರ್ಯಗಳಲ್ಲಿ, ವಾಸಿಸುವ ಮನೆಗಳಲ್ಲಿ, ಆಹಾರದಲ್ಲಿ, ಬಡವರಿಗೂ ಧನಿಕರಿಗೂ ಮೋಸ್ಕೋ ನಗರದೊಳಗೆ ಅಜಗಜಾಂತರವಾದ ವ್ಯತ್ಯಾಸವನ್ನು ಕಂಡು ನನಗೆ ಬಹಳ ಆಶ್ಚರ್ಯವುಂಟಾಯಿತು. ಧನಿಕರು ಅಂದರೆ ಆಫೀಸರರು, ಕಮ್ಯೂನಿಸ್ಟ್ ಅಧಿಕಾರಿಗಳು, ತಜ್ಞರು, ಸೇನಾಧಿಕಾರಿಗಳು ಇವರೆಲ್ಲಾ ಉತ್ಕೃಷ್ಟದಾದ ಉಣ್ಣೆ ಇಲ್ಲವೇ ತುಪ್ಪಟ (Fur)ದ ಉಡುಪು ತೊಡಪುಗಳನ್ನು ತೊಟ್ಟಿರುತ್ತಾರೆ. ಸಾಮಾನ್ಯ ಕೂಲಿಕಾರರು ಮತ್ತು ಮಾರ್ಗದಲ್ಲಿ ಕಲ್ಲುಗಳನ್ನು ತುಂಬುತ್ತಿರುವ ಒಮುವನ್ನು ಗುಡಿಸುತ್ತಿರುವ ಮತ್ತು ಭಾರವಾದ ಕಟ್ಟೋಣದ ಕೆಲಸಗಳನ್ನು ಮಾಡುವ ಅಸಂಖ್ಯಾತ ಹೆಣ್ಣಾಳುಗಳು (ಕೂಲಿ ಹೆಂಗಸರು) ದಪ್ಪವಾದ ಹಾಸಿಗೆ ಬಟ್ಟೆ (Quilted Bedding)ಯ ಒರಟು ಕೋಟುಗಳನ್ನು ಮೈತುಂಬ ಹೊದೆದಿರುತ್ತಾರೆ. ಅಧಿಕಾರಿಗಳು "ಜಿಸ್" ಎಂಬ ವೇಗವಾದ, ನಾಜೂಕಾದ ಕಾರುಗಳಲ್ಲಿ ಸಂಚರಿಸುತ್ತಾರೆ. ಆದರೆ ಮುಂಜಾನೆ ಹೊತ್ತು ದೊಡ್ಡ ದೊಡ್ಡ ಲಾರಿಗಳಲ್ಲಿ ಕೂಲಿಕಾರರು ನಿಂತುಕೊಂಡು ತಮ್ಮ ದುಡಿಮೆಯ ಸ್ಥಳಗಳಿಗೆ ಹೋಗುತ್ತಿರುವುದು ಮೋಸ್ಕೊನಗರದ ನಿತ್ಯದ ಅತಿ ಸಾಮಾನ್ಯ ದೃಶ್ಯ.

ಹೊಟೇಲ್ ಮ್ಯೆತ್ರೋಪೋಲ್, ನಾಸಿಯೊನಾಲ್, ಅರಾರಾತ್ ಮೊದಲಾದ ಭವ್ಯವಾದ ಭೋಜನಾಲಯಗಳಲ್ಲಿ ಸಾಮಾನ್ಯ ರಶಿಯನನ್ನು ಕಾಣುವದು ಅತಿ ಕಷ್ಟ. ಏಕೆಂದರೆ ಅಲ್ಲಿನ ಖರ್ಚು, ಬೆಲೆ ಇವು ಸಾಮಾನ್ಯ ರಶಿಯನ್ ಉದ್ಯೋಗಸ್ಥನ ಸಂಬಳಕ್ಕೆ ಮೀರಿದವು. ಅಧಿಕಾರಿಗಳು, ಕಮ್ಯುನಿಸ್ಟ ಪಕ್ಷದ ಅಧಿಕಾರಿಗಳು, ತಜ್ಞರು, ತಲೆಬೋಳಿಸಿದ ಸೈನ್ಯಾಧಿಕಾರಿಗಳು ಮತ್ತು ಅವರೊಡನೆ ಹಲಕೆಲವು ಸ್ತ್ರೀಯರು ಮಾತ್ರ ಇಲ್ಲಿ ಉಂಡು, ಗಾಯನವನ್ನು ಕೇಳಿ ಆನಂದಿಸುತ್ತಾ ನರ್ತನ (ಡ್ಯಾನ್ಸ) ಮಾಡುವರು. ವಿದೇಶೀ ರಾಯಭಾರಗಳ ಕರ್ಮಚಾರಿಗಳೂ ವಿದೇಶೀ ಸಂದರ್ಶಕರೂ ಇಂಥಾ ಸ್ಥಳಗಳಲ್ಲೇ ಭೋಜನ ಮಾಡುವರು.

ಒಂದು ಬಾರಿ ರಾತ್ರಿಯ ಊಟಕ್ಕೆಂದು ನಾನು ಉಳಕೊಂಡಿದ್ದ ಹೋಟೇಲಿನ ಭೋಜನ ಶಾಲೆಗೆ ಹೋದೆನು. ಭೋಜನ ಶಾಲೆ ಪೂರ್ಣ ತುಂಬಿದ್ದಿತು. ಬಾಗಿಲಲ್ಲಿ ಒಬ್ಬ ಜವಾನನು ನಿಂತು ನನಗೆ ಪ್ರವೇಶವಿಲ್ಲವೆಂದೂ ಒಂದು "ದೆಲಿಗಾತ್ಸಿಯ" (ಶಿಷ್ಟಮಂಡಳ)ಕ್ಕಾಗಿ ಅಲ್ಲಿ ಸಂತೋಷ ಭೋಜನ ನಡೆಯುತ್ತಿದೆಯೆಂದೂ ತಿಳಿಸಿದನು. ಈತನು ಹೋಟೇಲಿನ ಆಳಾಗಿರಲಿಲ್ಲ. ಆ ಶಿಷ್ಟಮಂಡಳದ ಆಳು. ಹೆಗಲಮೇಲೆ ಬಿಲ್ಲೆಯೂ ಇತ್ತು. ಒಳಗೆ ಮೇಜುಗಳ ಮೇಲೆ ಅತ್ಯುತ್ಕೃಷ್ಟವಾದ ಭಕ್ಷ ಭೋಜನಗಳೂ ವೋದ್ಕಾ ಮದ್ಯವೂ ದ್ರಾಕ್ಷಾರಸ(Wine)ವೂ ಧ್ವಂಸವಾಗುತ್ತಿದ್ದುವು. ಹೋಟೇಲಿನ ಸೇವಕನು ಎಂಜಲು ಪಾತ್ರೆಗಳನ್ನೂ ತಟ್ಟೆಗಳನ್ನೂ ಮೇಜುಗಳಿಂದ ತೆಗೆದು ಹೊರತರುತ್ತಾ ಇದ್ದನು. ಹೊರಗೆ ಬಾಗಿಲಬಳಿ ನಿಂತಿದ್ದ ಆ ಜವಾನನು ಈ ಎಂಜಲ ತಟ್ಟೆಗಳಲ್ಲಿದ್ದ ಉಚ್ಛಿಷ್ಟವನ್ನು ತೆಗೆದುಕೊಂಡು, ತಾನೊಂದು ತಟ್ಟೆಯಲ್ಲಿ ಹಾಕಿಕೊಂಡು, ಕೈಯಲ್ಲಿ ಹಿಡಿದುಕೊಂಡು ತಿನ್ನುತ್ತಿದ್ದನು. ಇದನ್ನು ಕಂಡು ನನಗೆ ಅತ್ಯಾಶ್ಚರ್ಯವಾಯಿತು. ಹಿಂದೂ ದೇಶದಲ್ಲಿ ಇಂಥಾ ದೃಶ್ಯಗಳೇನೋ ಅತಿ ಸಾಮಾನ್ಯವೇ ಸರಿ. ಆದರೆ ಇಂಗ್ಲಂಡಿನಲ್ಲಿ ಇಂಥಾ ದೃಶ್ಯವಾವುದೂ ನನ್ನ ಕಣ್ಣಿಗೆ ಬಿದ್ದಿರಲಿಲ್ಲ. ಸ್ಕಾಂಡಿನೇವಿಯನ್ ದೇಶಗಳಲ್ಲಂತೂ ಇದು ಅಸಂಭವನೀಯವೇ. ಸಮತಾವಾದದ ಸೋವಿಯಟ್ ಭೂಮಿಯಲ್ಲಿ ಇಂತಹ ದೃಶ್ಯವನ್ನು ನಾನೇ ಕಣ್ಣಾರೆ ಕಾಣದೆ ಹೋಗಿದ್ದರೆ ಇತರರು ಹೇಳುತ್ತಿದ್ದರೆ ನಾನು ನಂಬುತ್ತಿರಲಿಲ್ಲ.

## ರಶಿಯಾದ ವಿಸ್ತಾರ ಮತ್ತು ಭವಿಷ್ಯ

ರಶಿಯಾದ ಎರಡನೇ ಮಹಾಯುದ್ಧಾನಂತರದ ವಿಸ್ತೀರ್ಣವು ಬಹು ಹೆಚ್ಚಿದೆ. ಫಿನ್‌ಲ್ಯಾಂಡಿನ ಫಿನ್ನೊಕರೇಲಿಯಾ ಪ್ರಾಂತವನ್ನೂ ಯುದ್ಧ ಪೂರ್ವದಲ್ಲಿ ಸ್ವತಂತ್ರವಾಗಿದ್ದ ಎಸ್ತೋನಿಯಾ, ಲಾಟ್ವಿಯಾ, ಮತ್ತು ಲಿಥುವೇನಿಯಾ ಎಂಬ ಮೂರು ರಾಷ್ಟ್ರಗಳನ್ನೂ ರುಮಾನಿಯಾದ ಪ್ರಾಂತವಾದ ಬೆಸ್ಸರೇಬಿಯವನ್ನೂ ಚಕೊಸ್ಲೋವಾಕಿಯದ ಭಾಗವಾದ ಕಾರ್ಪೆಥೋ-ರುಥೇನಿಯಾವನ್ನೂ ಪೋಲಂಡಿನ ಪಶ್ಚಿಮ ಯುಕ್ರೇನ್ ಮತ್ತಿತರ ಕೆಲವು ಭಾಗಗಳನ್ನೂ ಹೊರಮಂಗೋಲಿಯದ ಅಲ್ಟಾಅಟಾವನ್ನೂ ಜಪಾನಿನ ಸಹಾಲಿನ್‌ದ್ವೀಪವನ್ನೂ ಮಂಚೂರಿಯದ ಪೋರ್ಟ್ ಆರ್ಥರ್ ಬಂದರವನ್ನೂ ರಶಿಯನರು ವಶಪಡಿಸಿ ತಮ್ಮ ವಿಶಾಲ ರಾಜ್ಯಕ್ಕೆ ಸೇರಿಸಿಕೊಂಡಿದ್ದಾರೆ. ಅದೂ ಅಲ್ಲದೆ ಪೂರ್ವ ಯುರೋಪಿನ ಮೇಲೆ ವಿಶೇಷವಾದ ವರ್ಚಸ್ಸನ್ನು ಸ್ಥಾಪಿಸಿರುವರು. ರಶಿಯನ್ ಸರಕಾರದ ಪ್ರಚಂಡ ಸೇನಾಬಲ, ಮತ್ತು ಜನತೆಯ ಮೇಲೆ ಸರಕಾರಕ್ಕಿರುವ ಪರಿಪೂರ್ಣ ಮತ್ತು ಅಖಂಡ ಅಧಿಕಾರ, ಅಂದರೆ ಜನತೆಯ ಉದ್ಯೋಗ, ಉತ್ಪಾದನೆ, ಶಿಕ್ಷಣ, ವಿಚಾರ, ಸಾಹಿತ್ಯ ಮೊದಲಾದ ಸರ್ವ ಕಾರ್ಯಕಲಾಪಗಳ ಮೇಲಿನ ಪೂರ್ಣವಾದ ಹಿಡಿತ, ಜನತೆಯ ವಿಧೇಯತೆ, ಮತ್ತು ನೆರೆಹೊರೆಯ ರಾಷ್ಟ್ರಗಳ ಬಲಹೀನತೆ ಇವನ್ನೆಲ್ಲಾ ಪರಿಗಣಿಸಿದರೆ ರಶಿಯನ್ ಅಧಿಪತ್ಯವು ಇನ್ನು ಮುಂದಕ್ಕೂ ಹೆಚ್ಚು ವಿಶಾಲವಾಗಿ ವ್ಯಾಪಿಸಬಹುದೆಂದು ಊಹಿಸಲು ಶಕ್ಯವಿದೆ.

(ಇಂಗ್ಲೀಷಿನಿಂದ)

# ಅಸಾಧಾರಣ ಮಾತಿನ ಮಾದರಿಗಳು

ಲೇಖಕರು: ಡಾ. ವರದರಾಜ ಉಮರ್ಜಿ, M. A., Ph. D., ಧಾರವಾಡ

ಬಹು ವೈವಿಧ್ಯ ಪೂರ್ಣ ಹಾಗೂ ಚಿತ್ರಮಯ ಉತ್ತರ ಕನ್ನಡ ಜಿಲ್ಲೆಯ ಸನ್ನಿವೇಶದಲ್ಲಿ ವಾಸಿ-ಸುವ-ಹವ್ಯಕರು, ನಾಡವರು, ಹಾಲಕ್ಕಿ-ಪಂಗಡಗಳೂ ಅವುಗಳ ಸಂಸ್ಕೃತಿ ಹಾಗೂ ಮನೆಮಾತುಗಳೂ ಸುತ್ತುಮುತ್ತಲಿನ ನಿಸರ್ಗದಷ್ಟೇ ವೈವಿಧ್ಯ ಪೂರ್ಣವೂ ಚಿತ್ರಮಯವೂ ಆಗಿವೆ. ಹವ್ಯಕರು (ಜ. ಸಂ. ೨೯,೦೦೦) ನೀರಿನ ಆಶ್ರಯವಿದ್ದ ಸ್ಥಳದಲ್ಲಿದ್ದು ತೋಟಗಾರಿಕೆಯನ್ನೂ ಪೌರೋ-ಹಿತ್ಯವನ್ನೂ ಮಾಡುವರು. ನಾಡವರು (ಜ. ಸಂ. ೫,೦೦೦) ಹೊಲ ಗದ್ದೆ ಬೈಲು ಪ್ರದೇಶಗಳಲ್ಲಿ ವಾಸಿಸುವರು. ಒಕ್ಕಲತನವೇ ಇವರ ಮುಖ್ಯ ಉದ್ಯೋಗ. ಹಾಲಕ್ಕಿಗಳು (ಜ. ಸಂ. ೨೫,೦೦೦) ಮುಖ್ಯವಾಗಿ ಬೈಣ ಪ್ರದೇಶಗಳಲ್ಲಿ ವಾಸಿಸುವರು. ಬೇಟೆಗಾರಿಕೆ ಹಾಗೂ ಒಕ್ಕಲತನದಿಂದ ಜೀವನವನ್ನು ಸಾಗಿಸುವರು. ಈ ಮೂರು ಪಂಗಡಗಳು ಉ. ಕ. ಜಿಲ್ಲೆಯ ಸಂಸ್ಕೃತಿಯ ಪ್ರಕಾರ ಹಾಗೂ ಮಟ್ಟುಗಳ, ಅದರಂತೆ ಭಾಷಾಪ್ರಕಾರಗಳ ಪ್ರತಿ-ನಿಧಿಗಳೂ [1] ಆಗಿವೆ. ಹವ್ಯಕರು ಪಿತೃಮುಖ್ಯ (Patrileneal) ಹಾಗೂ ಮುಂದುವರಿದ ಪಂಗಡ. ನಾಡವರು (ನಾಮಧಾರಿಗಳು) ಮೂಲದಲ್ಲಿ ಮಾತೃಮುಖ್ಯ (Matrileneal) ಹಾಗೂ ಮಧ್ಯಮ ವರ್ಗದ ಪಂಗಡ. ಹಾಲಕ್ಕಿಗಳು ಟೋಟಮಿಸ್ಟ (Totomist) ಹಾಗೂ ಹಿಂದು-ಳಿದ ವರ್ಗದ ಪಂಗಡ. ವಿವೇಚನೆಯಲ್ಲಿ ತುಲನೆ ಮಾಡಲು ಅನುಕೂಲವಾಗಲೆಂದು "ಸೂರ್ಯ ಹಾಗೂ ಗಾಳಿ'' ಎಂಬ ಕಥೆಯನ್ನು [2] ಆಯಾ ಪಂಗಡಗಳ ಮನೆಮಾತಿನಲ್ಲಿ ಕೊಟ್ಟು ಅಸಾಧಾರಣ ಅರ್ಥವನ್ನು ಪ್ರಚಲಿತ ಕನ್ನಡದಲ್ಲಿ ವಿವರಿಸಿ, ಸ್ವರಾಘಾತ (Stress) ಉಚ್ಚಾರಗಳ ನಿರಿಳಿತ (Intonation) ವಿರಾಮ ಘಟಕ (Breath groups) ಮುಂತಾದ ವೈಶಿಷ್ಟ್ಯ-ಗಳನ್ನು ಉಲ್ಲೇಖಿಸಿದೆ.

## ೧. ಹವ್ಯಾಕರ ಮಾತಿನ ಮಾದರಿ

ಹವ್ಯಕರು ಸೂರ್ಯ ಹಾಗೂ ಗಾಳಿ ಎಂಬ ಕಥೆಯನ್ನು ತಮ್ಮ ಮನೆಮಾತಿನಲ್ಲಿ ಹೀಗೆ ಹೇಳುವರು.

(ಚೆ, ಜೆ = ದಂತತಾಲವ್ಯ ಚ, ಜ. ಅ = ಸಂವೃತ ಅ).

"ವಾಯು ಸೂರ್ಯ ಇಬ್ರೂವs ನನ್ನಕ್ತ್ಯೆಚ್ಚೊ, ನಿನ್ನಕ್ತ್ಯೆಚ್ಚೊ ಹೇಳ್ಜಗ್ಯಾಡತ್ತಿದ್ದೊ. ಆಗೊಬ್ಬವ ದಾರಿಮೇಲ್ಪೋಪವಲ್ಬನ್ದ. ಅವ ಬೆಚ್ಚಗಣ್ಕಮ್ಬ್ಳಿ ಹೊದ್ಕಣ್ಡಿದ. ಆ ಕಮ್ಬ್ಳಿನಿಗವ ಯಾರ್ಮದ್ಲಿಕ್ಕೆ ತನ್ಕೈಲ್ತಕಮ್ಬ್ಳ್ಯೆಗ್ಮಾಡ್ತ್ವ ಅನ್ನಕ್ತ್ಯೆಚ್ಚುಹೇಳ್ತ್ಳಿಕ್ವುಹೇಳ್ಯಾತ್ಮಾಡ್ಕೊಣ್ಡ್ರೊ. ಮದ್ಲಿಕ್ಕೆ ವಾಯು, ತನ್ಕೈಲಪ್ಪಟ್ಕತ್ತಿ ಹಾಕೂಗ್ದ. ಅವ್ಪೊಗ್ದ್ಯೆಗಾ ದಾರಿ ಮೇಲ್ಪೋಪವ್ಮತ್ತುಗನಾಕ್ಮ್ಯೆಮೇಲ್ಯಳ್ಕಂಡ. ಕಡೆಗ್ವಾಯು ಕಟ್ಪಟೆ ಮಾಡುದ್ಬಿಟ್ಬುಟ, ಕಡೆಗೂಸ್ರ್ಯಕ್ಯರ್ಣಬಿಡುಲ್ಬಣ್ಕಿದ. ಬಿಸ್ಲ್ಗೆಡ್ತಾಕೆ ದಾರಿಮೇಲ್ಪೋಪವ್ಕಮ್ಬ್ಳಿನಿಗವ ತನ್ನರೆ ತೆಗ್ದ್ಯಕ್ದ. ಹಾಗಾಗ್ತನ್ನಕ್ತಿಗಿನ್ನೂಸ್ರ್ಯನ್ಕ್ತ್ಯೆ ಹೆಚ್ಚುಹೇಳ್ವಾಯು ಒಪ್ಕಳಕಾತು.

ಇದು ಕುಮಟೆಯಿಂದ ದಕ್ಷಿಣಕ್ಕೆ ೬ ಮೈಲುಗಳ ಮೇಲಿರುವ ಮೂರೂರು ಗ್ರಾಮದ ಹವ್ಯಕರ ಮನೆಮಾತಿನ ಮಾದರಿಯು.

### ವಿವರಣೆ

ವಾಯು ಸೂರ್ಯ ಇಬ್ರೂವs ನನ್ನಕ್ತ್ಯೆಚ್ಚೊ ನಿನ್ನಕ್ತ್ಯೆಚ್ಚೊ ಹೇಳ್ಜಗ್ಯಾಡ್ತಿದ್ದೊ = ವಾಯು ಸೂರ್ಯ ಇಬ್ಬರೂ ನನ್ನ ಶಕ್ತಿ ಹೆಚ್ಚೊ ನಿನ್ನ ಶಕ್ತಿ ಹೆಚ್ಚೊ ? ಎಂದು ವಾದಾ ಮಾಡುತ್ತಿದ್ದರು.

ಈ ವಾಕ್ಯದ ಪ್ರತಿಯೊಂದು ಶಬ್ದದ ಮೊದಲನೆಯ ಅಕ್ಷರದ ಮೇಲೆ ಸಾಮಾನ್ಯವಾಗಿ ಆಘಾತವಿದೆ. ಆದ್ದರಿಂದ ಮುಂದಿನ ವರ್ಣಗಳು ಸಂಕೋಚ (Contract) ಹೊಂದಿ ಮುಂದಿನ ಪದದ ಮೊದಲನೆ ವರ್ಣ ಅಥವಾ ವರ್ಣಗಳ ಕೂಡ ಕೂಡುತ್ತ ಹೋಗಿವೆ. ಉದಾ:- ಶಕ್ತ್ಯೆಚ್ಚೊ (= ಶಕ್ತಿ-ಹೆಚ್ಚೊ) ಬಿಸ್ಲ್ಗೆಡ್ತ್ಕೆ (= ಬಿಸಿಲಿನ-ಹೊಡತಕ್ಕೆ). ಫಲಸ್ವರೂಪವಾಗಿ ೩-೪ ಒತ್ತಕ್ಷರ[3]ಗಳುಳ್ಳ ಶಬ್ದಗಳು ಉಂಟಾಗಿವೆ.

ಹವ್ಯಕರು ಬಹಳ ತೀವ್ರಗತಿಯಿಂದ ಮಾತಾಡುವವರಾದ್ದರಿಂದ ಒಂದೇ ಉಸಿರಿನಲ್ಲಿ -'ಕವಡೆ-ಕವಡೆ' ಎನ್ನುವ ಹಾಗೆ- ಒಂದು ವಾಕ್ಯ ಉಚ್ಚರಿಸಿ ಬಿಡುವರು. ಆದ್ದರಿಂದ ಸಾಮಾನ್ಯವಾಗಿ ಒಂದು ವಾಕ್ಯದಲ್ಲಿ ಒಂದೇ ವಿರಾಮ ಘಟಕ. ಈ ನಿಯಮವು ಉಳಿದ ವಾಕ್ಯಗಳಿಗೂ ಅನ್ವಯಿಸುವದು.

---

1 ಈ ಮೂರು ಪಂಗಡಗಳ ಮನೆಮಾತುಗಳೇ ಮೂಲ (ಉಳಿದ ಪಂಗಡಗಳ ಮನೆಮಾತುಗಳು ಅವುಗಳ ಸಂಮಿಶ್ರಣ ಮಾತ್ರ) ವಾದವುಗಳು ಹಾಗೂ ಅಸಾಧಾರಣವಾದವುಗಳು ಆಗಿರುವವೆಂದು ಅವುಗಳನ್ನು ಮಾತ್ರ ಇಲ್ಲಿ ವಿವೇಚಿಸಲಾಗಿದೆ. ಅಲ್ಲಲ್ಲಿ ಉ. ಕ. ಜಿಲ್ಲೆಯ ಘಟ್ಟದ ಮೇಲಿನ ಪಂಗಡಗಳ ಮನೆಮಾತಿನ ಉಲ್ಲೇಖನ ಮಾಡಿದ್ದರೂ ವಿವೇಚನೆಯು ಮುಖ್ಯವಾಗಿ ಕರಾವಳಿ ಪ್ರದೇಶಕ್ಕೆ ಪರಿಮಿತವಾಗಿದೆ.

2 ಭಾಷಾಪ್ರಭೇದಗಳನ್ನು ತುಲನಾತ್ಮಕವಾಗಿ ಅಭ್ಯಸಿಸುವಾಗ ಪಾಶ್ಚಾತ್ಯರು ಸೂರ್ಯ ಹಾಗೂ ಗಾಳಿ (The Sun & The Wind) ಎಂಬ ಕಥೆಯನ್ನು ಉಪಯೋಗಿಸುವರು. ಆ ಕಥೆಯನ್ನು ಕನ್ನಡದಲ್ಲಿ ಪರಿವರ್ತಿಸಿ ಕೆಳಗೆ ಕೊಟ್ಟಿದೆ. "ವಾಯು ಸೂರ್ಯ ಇಬ್ಬರೂ ನನ್ನ ಶಕ್ತಿ ಹೆಚ್ಚೊ ನಿನ್ನ ಶಕ್ತಿ ಹೆಚ್ಚೊ ಎಂದು ವಾದ ಮಾಡುತ್ತ ಇದ್ದರು. ಆಗ ಒಬ್ಬ ಪ್ರಯಾಣಿಕನು ಆ ಕಡೆ ಬಂದನು. ಅವನು ಬೆಚ್ಚಗಿನ ಕಂಬಳಿಯನ್ನು ಮೈತುಂಬ ಹೊತ್ತುಕೊಂಡಿದ್ದನು. ಆ ಕಂಬಳಿಯನ್ನು ಯಾರು ಮೊದಲು ಆವನ ಕೈಯಲ್ಲಿ ಬಿಚ್ಚಿ ಹಾಕಿಸುತ್ತಾರೊ ಆವನ ಶಕ್ತಿಯೇ ಹೆಚ್ಚೆಂದು ತಿಳಿಯಬೇಕು. ಹೀಗೆಂದು ಅವರು ಒಪ್ಪಂದ ಮಾಡಿಕೊಂಡರು. ಮೊದಲು ವಾಯು ತನ್ನ ಶಕ್ತಿಯನ್ನೆಲ್ಲ ಬಿಟ್ಟು ಊದಿದನು. ಆದರೆ ಅವನು ಊದಿದಷ್ಟೂ ಆ ಪ್ರಯಾಣಿಕನು ಕಂಬಳಿಯನ್ನು ಇನ್ನಷ್ಟು ಬಿಗಿಯಾಗಿ ಮೈಮೇಲೆ ಎಳೆಕೊಂಡನು. ಕಡೆಗೆ ವಾಯು ಪ್ರಯತ್ನವನ್ನು ಕೈಬಿಟ್ಟನು. ಆ ಮೇಲೆ ಸೂರ್ಯನು ಕಿರಣವನ್ನು ಬೀರುತ್ತ ಬಂದನು. ಬಿಸಲಿನ ಜಳಕ್ಕೆ ಪ್ರಯಾಣಿಕನು ಕಂಬಳಿಯನ್ನು ತಾನೇ ಬಿಚ್ಚಿ ಹಾಕಿದನು. ಹೀಗಾಗಿ ತನ್ನ ಶಕ್ತಿಗಿಂತ ಸೂರ್ಯನ ಶಕ್ತಿಯೇ ಹೆಚ್ಚೆಂದು ವಾಯು ಒಪ್ಪಿಕೊಳ್ಳಬೇಕಾಯಿತು."

3 ಇಷ್ಟು ಒತ್ತಕ್ಷರಗಳ ಬಾಹುಲ್ಯವು ಸಂಸ್ಕೃತವನ್ನು ಬಿಟ್ಟು ಉಳಿದ ಭಾಷೆಗಳಲ್ಲಿ ಕಂಡುಬರುವದಿಲ್ಲ. ಐದು ವ್ಯಂಜನಗಳಿಂದ ಕೂಡಿದ ಕ್ಷ್ಣ್ಯ ಎಂಬ ಅಕ್ಷರವು ಕಾರ್ತ್ಸ್ನ್ಯ ಎಂಬ ಪದದಲ್ಲಿದೆಯೆಂದು ಪ್ರಾತಿಶಾಖ್ಯದಲ್ಲಿ ಉದಾಹರಿಸಲಾಗಿದೆ.

ಜಗ್ಗಾಡತ್ತಿದ್ದಿದ್ದೊ[4] - ( = ಜಗಳಾಡುತ್ತ ಇದ್ದರು) ಎಂಬುದು ಒಂದು ಅಸಾಧಾರಣ ಭೂತಕಾಲ ತೃತೀಯ ಪುರುಷ ಬಹುವಚನ ರೂಪ. ಇಂತಹ ರೂಪಗಳನ್ನು ಹಳಗನ್ನಡ ಶಿಲಾ ಶಾಸನಗಳಲ್ಲಿ ಮಾತ್ರ ಕಾಣಬಹುದು. ಹೋಲಿಸಿ ನೋಡಿರಿ. "ಇದ ಸಲಲೀ [ಯದವರ್] ವಾರ ಕಾಸಿಯುಂ ಕನಿಲೆಯುಮುಱಿದೊ" ( ಮಡಕ ಶಿರ - ಅನಂತಪುರ ಡಿಸ್ಟ್ರಿಕ್ಟ್ - ೯೫೦ ಇಸ್ವಿ )

'ತಕೆವ್ವಾಬ್ಬುಗ್ಗಾಡ್ತೊತ್ತ' 'ಗೊತ್ತಾಡಕೊಂಡೊ' ಮುಂತಾದ ರೂಪಗಳನ್ನು ಹವ್ಯಕರಲ್ಲಿ ಕಾಣ ಬಹುದು.

ಮೈಮೇಲ್ಯಳ್ಕೆಣ್ಡ[5] ( = ಮೈಮೇಲೆ ಎಳೆದು ಕೊಂಡನು )—ಮೈಮೆಲ್ + ಯಳ್ಕೆಣ್ಡ. ಹವ್ಯ-ಕರು 'ಎ'ಕಾರ ಸ್ಥಾನದಲ್ಲಿ 'ಯ'ಕಾರವನ್ನು ಉಚ್ಚರಿಸುವರು. 'ಎಲ್ಲ' ಎಂಬಲ್ಲಿ 'ಯಲ್ಲಾ' ಎಂದು ಮುಂತಾದ್ವಾಗಿ ಹೇಳುವರು.

ವಪ್ಕೆಳ್ಕಾತು ( = ಒಪ್ಪಿಕೊಳ್ಳಬೇಕಾಯಿತು). 'ಒ' ಕಾರದ ಸ್ಥಾನದಲ್ಲಿ 'ವ' ಕಾರವು ಬಂದಿದೆ. ಹವ್ಯಕರು 'ಒಂದು' ಎಂಬುದನ್ನು 'ವಂದು' ಎಂದೂ ಹೇಳುವರು.

ಅಲ್ಲದೆ ದಾರಿ ಮೇಲ್ಹೋಪವ್ನೆ ( = ಹಾದಿಕಾರ ) ತೆಳ್ಕೆಳವು ( = ತಿಳಿದುಕೊಳ್ಳಬೇಕು) ಕಂಬ್ಳಿನಿಗನ ( = ಕಂಬಳಿಯನ್ನು) ತೆಕೆವ್ವಾಬ್ಬುಗ್ಗಾಡ್ತೊತ್ತ ( = ತೆಗೆದುಕೊಳ್ಳುವ ಹಾಗೆ ಮಾಡುತ್ತಾರೊ ) ಮಾಡುದ್ಬಿಟುಟ ( = ಮಾಡುವುದನ್ನು ಬಿಟ್ಟು ಬಿಟ್ಟನು) ಬಿಡುಲ್ಹಣ್ಕೆ ( — ಬಿಡಲು ಹಣ ಕೆದ = ಬಿಡಲು ಸುರು ಮಾಡಿದನು ), ತನ್ನರೆ ( = ತಾನೇ ) ಮುಂತಾದ ಪದಸಮುಚ್ಚಯಗಳು ಅಸಾಧಾರಣವಾಗಿವೆ.

ಇಡಗುಂಜಿ[6] ಭಾಗದ ಹವ್ಯಕರು-ಯುಂಗಳ ( = ನಮ್ಮ ) ನಿಂಗಳ ( = ನಿಮ್ಮ ) ತಂಗಳ ( = ತಮ್ಮ) ಎಂಬ ಅಸಾಧಾರಣ ಪ್ರಯೋಗಳನ್ನು ಉಪಯೋಗಿಸುವರು. ಉದಾ. ಗಾಳಿ ಸೂರ್ಯ... ತಂಗ್ಳೊಳ್ಗ್ವದಾ ಮಾಡ್ತಿದ್ದೊ ( = ತಮ್ಮತಮ್ಮೊ-ಳಗೆ ವಾದಾ ಮಾಡುತ್ತಿದ್ದರು. )

ಬರಬಳ್ಳಿ[7] ಹವ್ಯಕರಲ್ಲಿ ಸಾನುನಾಸಿಕ ಉಚ್ಚಾರಗಳು ಹೆಚ್ಚು ( ಉಳಿದ ಹವ್ಯಕದಲ್ಲಿ ಅಷ್ಟು ಸಾಮಾನ್ಯವಾಗಿ ಕಂಡುಬರುವದಿಲ್ಲ. )

ಉದಾ :— ಅಬ್ಬಿ ಕೋಟೆಗೆ ಕಿಚ್ಚು ಹಾಕಿ ಬನ್ದಿಪ್ಪಾ (= ಬಚ್ಚಲ ಮನೆಯಲ್ಲಿ ( ಒಲೆಗೆ ) ಕಿಚ್ಚು ಹಾಕಿ ಬಂದಿದ್ದೇನೆ ) - 'ಪಾ' 'ಮಾ' ಗಳನ್ನು - ಬೆಕ್ಕಿನ ಹಾಗೆ ಉಸುರುವರು. ಬರಬಳ್ಳಿ ಹವ್ಯಕರು ( ತೋಟಗಾರರು ) ಕವಳಪ್ರಿಯರು. ಯಾವಾಗಲೂ ಕವಳವನ್ನು ಮೆಲ್ಲುತ್ತಲೇ ಮಾತಾ ಡುತ್ತಿರುವದರಿಂದ, ಅವರ ಮುಖಗಳಿಂದ ಸಾನು ನಾಸಿಕ ಉಚ್ಚಾರಗಳು ಹೊರಡುತ್ತಿರಬಹುದು !

ಒಂದೇ ಮಾತಿನಲ್ಲಿ ಹೇಳುವದಾದರೆ- ಹವ್ಯಕರ ಮನೆ ಮಾತು ಎ > ಯ್ ಹಾಗೂ ಒ > ವ್ ಒಲವಿನ ಭಾಷೆಯೆಂದು ಹೇಳಬಹುದು. ಈ ವೈಶಿಷ್ಟ್ಯವು ಎಲ್ಲ ಹವ್ಯಕ ಪಂಗಡಗಳ ಮನೆ ಮಾತಿನಲ್ಲಿಯೂ ಸಾಮಾನ್ಯವಾದುದು.

## ೩. ನಾಡವರ ಮಾತಿನ ಮಾದರಿ:—

ನಾಡವರ ಮನೆಮಾತಿನಲ್ಲಿ 'ಸೂರ್ಯ ಹಾಗೂ ಗಾಳಿ' ಎಂಬ ಕಥೆಯು ಕೆಳಗಿನಂತೆ ಇದೆ.

( ಚೆ ದಂತತಾಲವ್ಯ ಚ- ಅ = ಸಂವೃತ ಅ )

"ಗಾಳಿ ಸೂರ್ಯ ಇಬ್ರೂ ನನ್ನ ಶಕ್ತಿ ಹಿಚ್ಚೊ ನಿನ್ನ ಶಕ್ತಿ ಹಿಚ್ಚೊ ಎನ್ದು ವಾದ ಮಾಡ್ತೆ ಬಿದದ್ರ[8]. ಆಗೆ ಒಬ್ಬ ಹಾದಿಲೆ ಹೋಗ್ವವ್ನೆ ಅಲ್ಲಿಗೆ ಬನ್ದ. ಅವ್ನೆ ಚೆಚ್ಗೆಬ್ಬುಳ್ಳ-ಮೈತುಮ್ಬ ಮುಚ್ಚೆಣ್ಡಿದ. ಯಾರ ಮುದ್ಲೆ ಅವನ ಕಬ್ಬುಳ್ಳ ಯಾ ಅವನ ಕೈಲೆ ಬಿಚ್ಚೆ ಇಕ್ತರೋ ಅವ್ನ ಶಕ್ತಿ ಹಿಚ್ಚೆನ್ದೆ ತಿಳ್ಕೆಣಬೇಕ. ಹಿಗೆ ಅವರ ರಾಜಿ ಮಾಡ್ಕೆಣ್ಡ್ರ. ಮುದ್ಲೆ ಗಾಳಿ ತನ್ನ ಶಕ್ತಿ ಇಡಟ್ಟೂ ಬಿಟ್ಟಿ ಊಬ್ಬಾ. ಅದ್ರೆ ಅವ್ನೆ ಊಬ್ಬಟ್ಟೂ ಹಾದೀ ಹೋಗ್ವವ್ನೆ ಕಬ್ಬುಳ್ಯಾ ಮತ್ತಿಟ್ಟ ಬಿಗ್ವಾಗೆ ಮೈಮೇನೆ ಇಳ್ಕೆಣ್ಡಿ. ಕಾಡಿಗೆ ಗಾಳಿ ಪ್ರಯತ್ನ ಬಿಟ್ಟಾ. ಆ ಮೇನೆ ಸೂರ್ಯ ಬಿಸಲ ಬೀರ್ತೆ ಬನ್ದ. ಬಿಸ್ಲಿನ ಕಾಪಿಗೆ ಹಾದಿಲೆ ಹೋಗ್ವವ್ನೆ ಕಮ್ಬ್ಳೀ ತಾನೆ ಬಿಚ್ಚಿಟ್ಕಾ. ಹಿಂಗಾಗೆ ತನ್ನ ಶಕ್ತಿಗಿಂತ ಸೂರ್ಯನ ಶಕ್ತಿಯೇ ಹಿಚ್ಚೆನ್ದೆ ಗಾಳಿ ಉಪ್ಕೆಣ್ಬೇಕಾಯ್ತು."

ಇದು ಕುಮಟೆಯಿಂದ ಉತ್ತರಕ್ಕೆ ೧೫ ಮೈ. ದೂರವಿರುವ ಹಿರೇಗುತ್ತಿ ನಾಡವರ ಮನೆಮಾತಿನ ಮಾದರಿಯು.

## ವಿವರಣೆ

ಗಾಳಿ ಸೂರ್ಯ ಇಬ್ರೂ ನನ್ನ ಶಕ್ತಿ ಹಿಚ್ಚೊ। ನಿನ್ನ ಶಕ್ತಿ ಹಿಚ್ಚೊ। ಎನ್ದು ವಾದಾಮಾಡ್ತೆ ಬಿದದ್ರ॥

( ವಾಯು ಸೂರ್ಯ ಇಬ್ಬರೂ ನನ್ನ ಶಕ್ತಿ ಹೆಚ್ಚೊ ನಿನ್ನ ಶಕ್ತಿ ಹೆಚ್ಚೊ ಎಂದು ವಾದಾ ಮಾಡುತ್ತ ಇದ್ದರು ) ಈ ವಾಕ್ಯದಲ್ಲಿ ಮೂರು ವಿರಾಮ ಘಟಕ ಗಳು ಇವೆ. ನಾಡವರದು ಓಜಸ್ವಿ ತೇಜಸ್ವಿ ಸಮಾಜ. ಭಾವನಾಪರವಶವಾಗಿ ಮಾತಾಡುವರು. ಭಾವನೆಯ ಏರಿಳಿತಕ್ಕನುಸರಿಸಿ ಮಾತಿನಲ್ಲಿ ಏರಿಳಿತಗಳಾಗುದು ಸಹಜ. ಅದನ್ನು ಹೀಗೆ ತೋರಿಸಬಹುದು:

ಗಾಳಿ ಸೂರ್ಯ ಇಬ್ರೂ ನನ್ನ ಶಕ್ತಿ ಹಿಚ್ಚೊ ನಿನ್ನ

ಶಕ್ತಿ ಹಿಚ್ಚೊ ಎನ್ದೇ ವಾದಾ ಮಾಡ್ತೆ ಬದದ್ರ.

ನಾಡವರ ಮನೆಮಾತಿನಲ್ಲಿ ಪದಗಳ ಮೊದಲನೆಯ ಅಕ್ಷರಗಳ ಮೇಲೆ ಆಘಾತಗಳು ಸಾಮಾನ್ಯವಾಗಿ ಬೀಳುವವು.

ಉದಾ :- ಇ'ಬ್ರೂ, ನ'ನ್ನ, ಶ'ಕ್ತಿ, ಹಿ'ಚ್ಚೊ ಬಿದದ್ರ, ಮು೹.

ಬಿದದ್ರ ( = ಬಿದ್ದಿದ್ದರು ) ಇದು ಒಂದು ಅಸಾಧಾರಣ ಪ್ರಯೋಗ. ಇದನ್ನು ಇಲ್ಲಿ ಪತನಾ ರ್ಥಕದಲ್ಲಿ ಉಪಯೋಗಿಸಿರುವದಿಲ್ಲ. ಕ್ರಿಯೆಯು ಇನ್ನೂ ಸಾಗಿದೆ ( continued action )ಯೆಂಬ ದನ್ನು ಸೂಚಿಸುವ ಸಹಾಯ ಕ್ರಿಯಾಪದ. ಮಾಡ್ತ

---

4 ಜ-ಕಾರವು ಚವರ್ಗದ ಮೂರನೆಯ ಅಕ್ಷರ - ಅದು ಹುಟ್ಟುವ ಸ್ಥಳ ದಂತತಾಲು, ಆಭ್ಯಂತರ ಪ್ರಯತ್ನ ಸ್ಪೃಷ್ಟ, ಬಾಹ್ಯ ಪ್ರಯತ್ನ ಅಲ್ಪಪ್ರಾಣ ವಿವಾರ ಶ್ವಾಸ, ಅಘೋಷ, ಸ್ಪರ್ಶ ವ್ಯಂಜನವು.

5 ಯಳ್ಕೆಂಡ-ವಪ್ಕೆಳ್ಕಾತು- ತೆಳ್ಕೆಳವು-ಎಂಬು ವುಗಳ 'ಕೆ'ಕಾರದಲ್ಲಿಯ 'ಎ'ಕಾರದ ಉಚ್ಚಾರವು ಕಂಠ್ಯ. ಆಭ್ಯಂತರ ಪ್ರಯತ್ನ ಪರಿವೃತ ಬಾಹ್ಯ ಪ್ರಯತ್ನ ಅಲ್ಪಪ್ರಾಣ-ಸಂಹಾರ, ನಾದ, ಘೋಷ-ವಿದೆ.

6 ಇಡಗುಂಜಿ ಗ್ರಾಮವು ಕುಮಟೆಯಿಂದ ದಕ್ಷಿಣಕ್ಕೆ ೧೫ ಮೈಲುಗಳ ಮೇಲೆ ಇದೆ.

7 ಬರಬಳ್ಳಿ ಗ್ರಾಮವು ಯಲ್ಲಾಪೂರ ತಾಲೂಕಿನ ಘಟ್ಟದ ಪ್ರದೇಶದಲ್ಲಿ 'ಬಾರೆ' 'ನೀರೆ' 'ತಾರೆ' 'ಸೀರೆ' 'ಕಳಚೆ' ಎಂಬ ಹವ್ಯಕರು ವಾಸಿಸುವ ಹಳ್ಳಿಗಳ ಗುಂಪಿನಲ್ಲಿ ಇವೆ.

ಬಿದದ್ರ = ಮಾಡುತ್ತ ಇದ್ದರು. ಉತ್ತರ ಕನ್ನಡ ಜಿಲ್ಹೆಯಲ್ಲಿ ಮೊದಲು ನಾನು ಈ ಪ್ರಯೋಗವನ್ನು ಕೇಳಿದಾಗ—ಎಲ್ಲಿ ಬಿದ್ದಿದ್ದಾರೆ—ನದಿಯಲ್ಲಿಯೋ ಕೆರೆಯಲ್ಲಿಯೋ ಸಮುದ್ರದಲ್ಲಿಯೋ—ಎಂದು ಕೇಳಿದೆ! ಹಿಚ್ಚು ( =ಹೆಚ್ಚು ) ಹಾಗೂ ಇಳ್ಕಂಡ ( = ಏಳೆದುಕೊಂಡನು) ಎಂಬ ಮುಂತಾದವುಗಳಲ್ಲಿ 'ಎ'ಕಾರಸ್ಥಾನದಲ್ಲಿ 'ಇ'ಕಾರವು ಬಂದಿದೆ.

ಮುದ್ಲೆ ( = ಮೊದಲು ) ಉಪ್ಕಣ್ಬೇಕಾಯ್ತು ( = ಒಪ್ಪಿಕೊಳ್ಳಬೇಕಾಯಿತು ) ಎಂಬವುಗಳಲ್ಲಿ 'ಒ'ಕಾರಸ್ಥಾನದಲ್ಲಿ 'ಉ'ಕಾರವನ್ನು ನಾಡವರು ಉಪಯೋಗಿಸುತ್ತಾರೆ. 'ಕೊಂದು ಬಿಡುತ್ತೇನೆ' ಎಂಬಲ್ಲಿ ಕುನ್ದುಬಿಡುತ್ತೇನೆ ಎಂದೂ 'ಒಂದು' ಎಂಬಲ್ಲಿ ಉನ್ದು ಎಂದೂ ನಾಡವರು ಹೇಳುವರು. 'ಉನ್ದು ಊರಲೆ ಉನ್ದು ಅಜ್ಜಿ ಮುದಕೆ ಇದತ ( = ಒಂದು ಊರಲ್ಲಿ ಒಂದು ಮುದುಕಿ ಇತ್ತು )ಎಂದು ಅಗ್ರಗೋಣದ[8] ನಾಡವರು ಕಥೆಯನ್ನು ಪ್ರಾರಂಭಿಸುವರು.

ಒಟ್ಟಿನ ಮೇಲೆ ಹೇಳುವದಾದರೆ ನಾಡವರ ಮನೆ ಮಾತು ಎ > ಇ ಹಾಗೂ ಒ > ಉ ಬಲವಿನ ಭಾಷೆಯೆಂದು ಹೇಳಬಹುದು.

### ೪ ಹಾಲಕ್ಕಿಗಳ ಮನೆಮಾತಿನ ಮಾದರಿ

ಹಾಲಕ್ಕಿಗಳ ಮನೆಮಾತಿನಲ್ಲಿ 'ಸೂರ್ಯ ಹಾಗೂ ಗಾಳಿ' ಎಂಬ ಕಥೆ— "ಗಾಲಿ ಚೂಲಿ ಎಯ್ದು ಜೆನ ನನ್ನ ಚಗ್ತಿ ಹೆಚ್ಚೊ ನಿನ್ನ ಚಗ್ತಿ ಹೆಚ್ಚೊ ಅನ್ಡಿ ವೊಂದಾಮಾಡ್ತೆ ಇದ್ರು. ಆಗ ಒಬ್ಬ ಹಾಂದಿ ಕಾರಾ ಅಲ್ಲ್ ಬಾದಾ. ಅವಾಂ ಬೆಚ್ಗ್ಕ ಕಮ್ಬಿಲ್ಲ ಮೈತುಂಬ್ ಮುಚ್ಗೋಣ್ಡಿತಾ. ಆ ಕಮ್ಬಿಲ್ಲ ಯ್ಯಾರ್ ಮೊದ್ಲೆ ಅವ್ನ ಕೈಯಲ್ ಬಿಡ್ಸಾಕ್ತಿರೋ ಅವ್ನ ಶಕ್ತಿ ಹೆಚ್ಚಿನ್ದಿ ತಳಿ-ಬೇಕು. ಹಿಗೆ ಅವ್ರು ರಾಜಿಮಾಡ್ಕೊಣ್ಡ್ರು. ಮೊದ್ಲೆ ಗಾಲಿ ಚಗ್ತಿಯೆಲ್ಲಾ ಬಿಟ್ಟು ಊಬ್ದಾ. ಆದ್ರೆ ಅವ್ನ ಊಬದಟ್ಟು ಆ ಹಾಂದಿಕಾರಾ ಕಮ್ಬಿಲ್ಲ ಮತಟ ಬಿಗಿಯಾಗ್ನ್ಗೆ ಮೈಮೇನೆ ಎಳ್ಕೊಣ್ಡಾ. ಕಡೆಗೆ ಗಾಲಿ ಪರಿಯತನಾ ಬಿಟ್ಟಾ. ಆ ಮೇಲೆ ಚೂಲಿ ಕಣ್ಣ ಬಿಡ್ತಾ ಬಾಂದಾ ಬೆಸಲ್ನ ಹೆಡ್ತ್ಕ ಹಾಂದಿಕಾರಾ ಕಮ್ಬಿಲ್ಲ ತಾನೆ ಬಿಡ್ಸಾಕ್ದಾ. ಹೀಗಾಗಿ ತಾನ್ನ ಚಗ್ತಿಗಿಂತ ಚೂಲಿ ಚಗ್ತಿಯೇ ಹೆಚ್ಚಿನ್ದಿ ಗಾಲಿ ಒಪ್ಗೊ-ಬ್ಬೇಕಾಯ್ತು."

ಇದು ಕುಮಟೆಯಿಂದ ಉತ್ತರಕ್ಕೆ ಸು. ೨೨ ಮೈಲುಗಳ ಮೇಲಿರುವ ಬೆಳಂಬಾರ ಗ್ರಾಮದ— ಹಾಲಕ್ಕಿಗಳ ಮನೆಮಾತಿನ ಮಾದರಿ.

### ವಿವರಣೆ

ಗಾಲಿ ಚೂಲಿ ಎಯ್ದು ಜೆನ ನನ್ನ ಚಗ್ತಿ ಹೆಚ್ಚೊ ನಿನ್ನ ಚಗ್ತಿ ಹೆಚ್ಚೊ ಅನ್ಡಿ ವೊಂದಾ ಮಾಡ್ತೆ ಇದ್ರು (=ವಾಯು ಸೂರ್ಯ ಇಬ್ಬರೂ ನನ್ನ ಶಕ್ತಿ ಹೆಚ್ಚೊ ನಿನ್ನ ಶಕ್ತಿ ಹೆಚ್ಚೊ ಎಂದು ವಾದಾ ಮಾಡುತ್ತ ಇದ್ದರು ) ಈ ಪಂಗಡದ ಜನರು ಯಾವಾಗಲೂ ಪಂಚಮಸ್ವರದಲ್ಲಿ ಮಾತಾಡುತ್ತಿರುವರು. ಬೈಣು ( ಗುಡ್ಡಗಳ ತಪ್ಪಲ ) ಪ್ರದೇಶದಲ್ಲಿ ದೂರದೂರ ವಾಸಿಸುತ್ತಿರುವದರಿಂದ ಚೀರಿ ಚೀರಿ ಮಾತಾಡುವದು ಅವಶ್ಯಕವಾಗಿರಬಹುದು !

ಚಗ್ತಿ (=ಶಕ್ತಿ ) ಚೂಲಿ (= ಸೂರ್ಯ) ಮುಂತಾದವುಗಳಲ್ಲಿ 'ಶ' ಕಾರ ಹಾಗೂ 'ಸ' ಕಾರ ಸ್ಥಾನದಲ್ಲಿ 'ಚ' ಕಾರವನ್ನು ಉಚ್ಚರಿಸುವರು. "ಎ ಚಾಣಿಕಟ್ಟೆಯ ಚಣ್ಣ ತಂಗಿಯ ಮಗುವೆ ಚೆಟ್ಲ ತರುವೆಯೇನೆ" (=ಎ ಸಾಣೆ ಕಟ್ಟೆಯ ಸಣ್ಣ ತಂಗಿಯ ಮಗುವೆ ಶೆಟ್ಲ[9] ತರುವೆಯೇನೆ) ಎಂಬುದು ಒಕ್ಕಲರ ( ಹಾಲಕ್ಕಿಗಳ ) ಬಹು ಜನಪ್ರಿಯವಾದ ಸುಗ್ಗಿಯ ಹಾಡು. ಹಾಲಕ್ಕಿಗಳ ಮನೆಮಾತು— ಶ, ಷ, ಸ > ಚ ಬಲವಿನ ಭಾಷೆಯೆಂದು ಸ್ಪಷ್ಟವಾಗುವದು.

### ೫. ಉ. ಕ. ಜಿಲ್ಹೆಯ ಮನೆಮಾತುಗಳು ಹಾಗೂ ಹಳಗನ್ನಡ

ಮೇಲೆ ವಿವೇಚಿಸಿದ ಮೂರು ಪಂಗಡಗಳ ಮನೆ ಮಾತುಗಳು ಒಂದು ಇನ್ನೊಂದಕ್ಕಿಂತ ಭಿನ್ನವಾದದ್ದೆಂದು ಆಯಾ ಮಾತಿನ ಮಾದರಿಯಿಂದ ಸ್ಪಷ್ಟವಾಗುವದು. ಮನೆಮಾತುಗಳು ಬೇರೆ ಬೇರೆಯಾದರೂ ಮೂರೂ ಪಂಗಡಗಳ ವ್ಯವಹಾರ ಭಾಷೆಯು ಒಂದೇಯಾಗಿದೆ. ಅಂದರೆ ಪ್ರಚಲಿತ ಕನ್ನಡ ಅಥವಾ ಹೊಸಗನ್ನಡ. ಇದೊಂದು ವಿಚಿತ್ರ ಹಾಗೂ ಎಲ್ಲಿಯೂ ಕಾಣದ ಗಮನಾರ್ಹವಾದ ಸನ್ನಿವೇಶ; ಇರಲಿ. ಹವ್ಯಕರ 'ಜೆಗ್ಳಾಡ್ತಿದ್ದೊ' 'ಮಾತ್ಮಾಡಕೊಂಡ್ರೆ' 'ಹಾದಿಮೇಲ್ಹೋಪವ' "ಕೈಲಪ್ಪಶಕ್ತಿ" "ಯಂಗಳ" "ತಂಗಳ" ಮುಂತಾದ ಅಸಾಧಾರಣ ಪ್ರಯೋಗಗಳು ಹಳಗನ್ನಡಕ್ಕೆ ಸೇರಿದವುಗಳೆಂಬುದು ಸ್ಪಷ್ಟ. ಅದರಂತೆ ಎ > ಯ್ ಹಾಗೂ ಒ > ವ್ ಬದಲಾವಣೆಯ ರೂಪಗಳೂ ಹಳಗನ್ನಡಕ್ಕೆ ಹೊರತಲ್ಲ. ಹಳಗನ್ನಡ ಶಾಸನಗಳಲ್ಲಿ 'ಯಲ್ಲಾ' (ಎಲ್ಲ) ಹಾಗೂ ವಂದು ಅಥವಾ ವೊಂದು (ಒಂದು) ಎಂಬ ರೂಪಗಳು ವಿರಳವಲ್ಲ. ನಾಡವರ 'ಹಿಚ್ಚು' 'ಇಳ್ಕಂಡ' 'ಉನ್ದು' 'ಉಪ್ಕೊಣ್ಬೇಕಾಯ್ತು' ಎಂಬುವುಗಳು ಶುದ್ಧಹಳಗನ್ನಡವಾಗಿರದಿದ್ದರೂ (ಅವು ಶುದ್ಧಹಳಗನ್ನಡದಲ್ಲಿ ಎಲ್ಲಿಯೂ ಕಾಣುವದಿಲ್ಲ) ತಮಿಳ ಮಲಯಾಳಿಗಳ ಸಂಪರ್ಕವುಳ್ಳ ಹಳಗನ್ನಡವೆಂದು ಹೇಳಲು ಅಡ್ಡಿಯಿಲ್ಲ. ಈ ಸಂದರ್ಭದಲ್ಲಿ (ನಾಮಧಾರಿ) ನಾಡವರ ಮಾತೃಮುಖ್ಯ ಸಂಸ್ಕೃತಿಯ ಅವಶೇಷಗಳು 'ಸ್ತ್ರೀ ಮಲಯಾಳಂ'ದವರ ಕೂಡ ( ನಾಮಧಾರಿ ) ನಾಡವರಿಗೆ ಇದ್ದಿರಬಹುದಾದ ಸಂಬಂಧಕ್ಕೆ ಸರಿಹೋಗುವದೆಂದು ವಿಮರ್ಶಿಸಿಕೊಳ್ಳಬೇಕು. ಕಿಟ್ಟೆಲ್ ಡಿಕ್ಸನರಿಯಲ್ಲಿ 'ಒರ್' ಒನ್ One ಎಕ್ಕೆ 'T ಒಂದು C/o ಉಜು' ಎಂದು ಕೊಟ್ಟಿದೆ.

'ಒನ್' ರೂಪದಂತೆ 'ಉನ್' ಎಂಬ ವೈಕಲ್ಪಿಕ ರೂಪವು ಇದ್ದಿರಬಹುದು. 'ಒನ್' ಎಂಬದಕ್ಕೆ 'ದು' ಸೇರಿ 'ಒಂದು' ರೂಪವಾದಂತೆ 'ಉನ್' ಎಂಬುದಕ್ಕೆ 'ದು' ಸೇರಿ 'ಉನ್ದು' ಆಗಬಹುದಲ್ಲವೆ? 'ಪೆರ್ಚು' ಎಂಬುದು ಹೊಸಗನ್ನಡದಲ್ಲಿ 'ಹೆಚ್ಚು' ಆದಂತೆ 'ಪಿರ್ಚು' ಎಂಬುದು 'ಹಿಚ್ಚು' ಎಂಬ ವೈಕಲ್ಪಿಕ ರೂಪವು ಯಾಕೆ ಆಗಿರಬಾರದು ? ಹಳಗನ್ನಡದಲ್ಲಿ 'ಪೆರ್' ಎಂಬಂತೆ 'ಪಿರ್' ಎಂಬ ರೂಪವೂ ಇದೆ. 'ಕೆಡು' ಎಂಬುದರ ಹಳಗನ್ನಡ ವೈಕಲ್ಪಿಕ ರೂಪವು 'ಕಿಡು' ಎಂದು ಇರುವಂತೆ 'ಪೆರ್ಚು' ಇದರ ವೈಕಲ್ಪಿಕ ರೂಪವು 'ಪಿರ್ಚು' (> ನಾಡವರ ಹಿಚ್ಚು ) ಎಂದು ಇರುವದು ಸಾಧ್ಯ. ನಾಡವರ 'ಇಳ್ಕಂಡ' ಎಂಬುದು ಮಲಯಾಳಿ 'ಇಳಿದು' 'ಇಳಕ್ಕು'ಗಳಿಗೆ ಸಂಬಂಧಿತವಾಗಿದೆಯೆಂಬುದನ್ನು ಲಕ್ಷಿಸಬೇಕು. ಕನ್ನಡದಲ್ಲಿಯೂ 'ಇಳಕಲು' ಎಂಬ ರೂಪವು ಇನ್ನೂ ಇದೆ. 'ಎಳಿದು ( ಎಳಿದು ) Moving about Maleyalam ಇಳಿದು to move ಇಳಕ್ಕು to get into motion' ಎಂದು ಕಿಟ್ಟೆಲ್ ಡಿಕ್ಸನರಿಯಲ್ಲಿ ಹೇಳಿದೆ. ಹಾಲಕ್ಕಿಗಳ 'ಚಗ್ತಿ' 'ಚೂಲಿ' ಪದಗಳು ಹಳಗನ್ನಡ ಭಾಷಾಪ್ರವಾಹಕ್ಕೆ ಸೇರಿದವುಗಳೆಂಬುದು ಸ್ಪಷ್ಟ. ಶ, ಷ, ಸ > ಚ ಬದಲಾವಣೆಯು ಹಳಗನ್ನಡಕ್ಕೆ ಸರಿಹೋಗುವದು. ಹಳಗನ್ನಡದಲ್ಲಿ 'ಶ, ಷ, ಸ > ಚ' ಬದಲಾವಣೆಯನ್ನು ಕಾಣಬಹುದು. ಉದಾ:- ಶಷ್ಕುಲಿ > ಚಕ್ಕುಲಿ, ಶಿಖರಿ > ಚಿಕರಿ ( ಶಬ್ದಮಣಿ ಸೂತ್ರ ೨೬೩ ಪು. ೪೦ ). ಮೇಲಿನ ವಿವೇಚನೆಯಿಂದ ಅಭ್ಯಾಸಕ್ಕೆ ತೆಗೆದುಕೊಂಡ ಮೂರು ಪಂಗಡಗಳ ಮನೆಮಾತುಗಳು ಮೂಲದಲ್ಲಿ ಹಳಗನ್ನಡವಿದ್ದು ಹೊಸಗನ್ನಡ ರೂಪವನ್ನು ತಾಳುತ್ತಿದ್ದರೂ ಅನೇಕ ಹಳಗನ್ನಡ ರೂಪಗಳನ್ನು ಉಳಿಸಿಕೊಂಡಿದೆಯೆಂದು ಸ್ಪಷ್ಟವಾಗುವದಿಲ್ಲವೇ ?

8 ಅಗ್ರಗೋಣ ಗ್ರಾಮವು ಕುಮಟೆಯಿಂದ ಉತ್ತರಕ್ಕೆ ಸು. ೧೦ ಮೈಲು.

9 ಶೆಟ್ಲ— ಒಂದುತರಹದ ಮೀನ.

# ಇಂಡೊನೇಷಿಯದ ಭಾಷೆ, ಸಂಸ್ಕೃತಿಗಳ ಮೇಲೆ ಭಾರತೀಯ ಪ್ರಭಾವ

**ನೆಹರೂರ ಭಾರತವು ಡಾ. ಸೊಕರ್ನೋರ ಇಂಡೊನೇಷಿಯದ ಸಂಗಡ ಈಗ ಬಾಂಧವ್ಯ ಬೆಳಸುತ್ತಿದೆ. ಆದರೆ ಈ ಬಾಂಧವ್ಯ ಇಂದು ನಿನ್ನೆಯದಲ್ಲ; ಇಪ್ಪತ್ತು ಶತಕಗಳಿಗಿಂತಲೂ ಹಳೆಯದು. . . .**

ಲೇಖಕರು: ಡಾ|| ಕೆ. ಕೃಷ್ಣಮೂರ್ತಿ, ಎಂ. ಎ., ಬಿ. ಟಿ., ಪಿಎಚ್. ಡಿ.

'ಇಂಗ್ಲಂಡನ್ನಷ್ಟೇ ಅರಿತವನು ಇಂಗ್ಲಂಡನ್ನರಿತವನಲ್ಲ' ಎಂಬಂತೆ ಭಾರತವನ್ನು ಮಾತ್ರ ಅರಿತವನು ಭಾರತವನ್ನರಿತವನಲ್ಲ ಎಂಬುದನ್ನು ಈ ಶತಮಾನದ ಇತಿಹಾಸಕಾರರು ತಮ ಸಂಶೋಧನೆಗಳಿಂದ ಸ್ಥಿರಪಡಿಸಿದ್ದಾರೆ. ಪಾಶ್ಚಾತ್ಯರು ಬರೆದ ನಮ್ಮ ನಾಡಿನ ಇತಿಹಾಸಗಳಲ್ಲಿ ಪ್ರಾಯಃ ಭಾರತಸಂಸ್ಕೃತಿಯ ಸತ್ವಕ್ಕಿಂತ ಹೆಚ್ಚಾಗಿ ನಿಸ್ಸತ್ವವೂ ಐಕ್ಯಕ್ಕಿಂತ ಹೆಚ್ಚಾಗಿ ಭೇದವೂ ಉತ್ಕರ್ಷಕ್ಕಿಂತ ಹೆಚ್ಚಾಗಿ ಅಪಕರ್ಷವೂ ಮೇಲೆದ್ದು ಕಾಣುತ್ತವೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರವೃತ್ತಿ ಪ್ರಕರ್ಷವಾಗಲಿ, ವಿಶ್ವವಿಸರಣಗುಣವಾಗಲಿ ಭಾರತಸಂಸ್ಕೃತಿಯಲ್ಲಿರಲಿಲ್ಲವೆಂಬ ಭಾವನೆ ತಲೆದೋರುತ್ತದೆ. ಮೂಢಭಾವನೆಗಳಲ್ಲಿಯೂ ಅಂಧ ರೂಢಿಗಳಲ್ಲಿಯೂ ಮುಳುಗಿದ್ದ ಜನತೆಗೆ ನಿಜವಾದ ಸಂಸ್ಕೃತಿಯ ಸೂರ್ಯಕಿರಣವನ್ನು ಬೆಳಗಿಸಿದ ಪವಿತ್ರಾತ್ಮರೇ ಪಾಶ್ಚಾತ್ಯರೆಂಬ ಭಕ್ತಿಯುಕ್ಕುವಂತೆ ಅವರ ತುಲನಾತ್ಮಕ ವಿಮರ್ಶೆಗಳಿರುತ್ತವೆ. ಇದಕ್ಕೆ ಇನ್ನೊಂದು ಮುಖವಾದ ಭಾರತ ಸಂಸ್ಕೃತಿಯ ಸಜೀವ ಚಿತ್ರವನ್ನು ನಾವು ನೋಡಲೆಳಸಿದರೆ, ಪ್ರಾಚೀನ ಕಾಲದಲ್ಲಿಯೇ ಸ್ವತಂತ್ರ ಭಾರತವು ದೇಶಾಂತರಗಳಲ್ಲಿಯೂ ದ್ವೀಪಾಂತರಗಳಲ್ಲಿಯೂ ಸಾಧಿಸಿದ ಮಹಾಕಾರ್ಯಗಳನ್ನು ಪರಿಭಾವಿಸಬೇಕು. ಪಾಶ್ಚಾತ್ಯರ ಸಾಹಸವನ್ನು ಮನಮೆಚ್ಚಿ ಹೊಗಳುವ ನಾವು, ಪಾಶ್ಚಾತ್ಯರ ಸಂಪರ್ಕವಿಲ್ಲದಾಗ ಭಾರತೀಯರೇ ದೂರದೂರದ ಸಾಗರೋತ್ತರ ದ್ವೀಪಗಳಿಗೆ ಹೋಗಿ, ಸಾವಿರಾರು ವರ್ಷಗಳಿಂದ ಇಂದಿನ ವರೆಗೂ, ಭಾರತೀಯ ಸಂಸ್ಕೃತಿ ಅಲ್ಲಿ ಇನ್ನೂ ಭಾರತೀಯವಾಗಿಯೇ ಕಾಣುವಂತೆ ಉಳಿಸಿರುವುದನ್ನು ಗಮನಿಸಬೇಕು. 'ಸಂಸ್ಕೃತಿ' ಎಂಬ ಶಬ್ದದಲ್ಲಿ ಮಾನವನ ಮಹತ್ವವನ್ನು ಬಿಂಬಿಸುವ ಸಾಹಿತ್ಯ, ಧರ್ಮ, ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳು, ಸಂಗೀತ, ಶಿಲ್ಪ ಮುಂತಾದ ಲಲಿತಕಲೆಗಳು ಎಲ್ಲವೂ ಅಂತರ್ಗತವಾಗುತ್ತವೆ. ಈ ಎಲ್ಲ ಅಂಶಗಳಲ್ಲಿಯೂ ಭಾರತದ ಪೂರ್ಣಪ್ರಭಾವವನ್ನು ನಾವಿಂದು ಇಂಡೊನೇಷಿಯಾ ಎನ್ನುವ ದ್ವೀಪಸ್ತೋಮದಲ್ಲಿ ಲಕ್ಷಿಸಬಹುದು.

ಜಾವಾ: ಸಮುದ್ರವನ್ನೇ ಏಕಾಪೋಶನ ಮಾಡಿದ, ವಿಂಧ್ಯಾದ್ರಿಯನ್ನು ಮಲಗಿಸಿದ ಅಗಸ್ತ್ಯ ಮಹರ್ಷಿಗಳ ಕಥೆಯನ್ನು ಕೇಳದವರಾರು? ಆದರೆ ದುಷ್ಕರ ಸಮುದ್ರಯಾನವೇ ಏಕಾಪೋಶನದ ಅಂತರಾರ್ಥವೆಂದೂ ದುರ್ಗಮಾರಣ್ಯಗಳಲ್ಲಿಯೂ ನಡೆದು ನಾಡನ್ನು ಕಟ್ಟುವ ಸಾಹಸವೇ ವಿಂಧ್ಯ ವಿಜಯದ ಮರ್ಮವೆಂದೂ ತಿಳಿಯಬೇಕಾದರೆ ಜಾವಾ ದ್ವೀಪದಲ್ಲಿ ಇಂದಿಗೂ ಪ್ರಚಾರದಲ್ಲಿರುವ ಐತಿಹ್ಯವನ್ನು ನೋಡಬೇಕು. ಆ ಐತಿಹ್ಯದ ಪ್ರಕಾರ ಅಗಸ್ತ್ಯರೇ ಈ ದ್ವೀಪದಲ್ಲಿ ಮೊದಲು ಕಾಲಿಟ್ಟ ವೀರಾಗ್ರಣಿಗಳು, ಆರ್ಯ ಸಂಸ್ಕೃತಿಯನ್ನು ಹರಡಿದ ಮಹಾತ್ಮರು. ಈ ಐತಿಹ್ಯವನ್ನು ಸಾರುವ ಅಗಸ್ತ್ಯರ ಶಿಲಾಪ್ರತಿಮೆಗಳನ್ನು ಜಾವಾದಲ್ಲಿ ಹೇರಳವಾಗಿ ಇಂದೂ ನೋಡಬಹುದು. ಶ್ರೀಮದ್ವಾಲ್ಮೀಕಿರಾಮಾಯಣದಲ್ಲಿಯೇ ಸುಗ್ರೀವನು ಕಪಿಗಳನ್ನುದ್ದೇಶಿಸಿ ಯವದ್ವೀಪದಲ್ಲಿ ಸೀತಾನ್ವೇಷಣವನ್ನು ಮಾಡಬೇಕೆಂದು ವಿಧಿಸುತ್ತಾ ಕೊಡುವ ವಿವರಗಳನ್ನು ನೋಡಿದರೆ ವಾಲ್ಮೀಕಿಗಳ ಕಾಲಕ್ಕೆ (ಸುಮಾರು ಕ್ರಿ. ಶ. ಪೂ. ೪ನೆ ಶತಕ) ಯವದ್ವೀಪವು ಸುವರ್ಣಭೂಮಿಯೆಂದು ಸುಪ್ರಸಿದ್ಧವಾಗಿದ್ದುದು ತಿಳಿಯುತ್ತದೆ.

ಇದೇ ಕಾಲದ ಬೌದ್ಧರ 'ನಿದ್ದೇಸ'ವೆಂಬ ಧರ್ಮಗ್ರಂಥದಲ್ಲಿಯೂ ಯವದ್ವೀಪದ ನಿರ್ದೇಶವಿದೆ. ಕ್ರಿ. ಶ. ಎರಡನೆ ಶತಮಾನದ ಯವನ ಲೇಖಕ ಟೊಲಿಮಿಯು ಯವದ್ವೀಪವನ್ನು ಹೀಗೆಯೇ ವರ್ಣಿಸುತ್ತಾನೆ. ಚೀಣಾ ದೇಶಕ್ಕೆ ಯವದ್ವೀಪದ ರಾಜನಾದ ದೇವವರ್ಮನು ರಾಯಭಾರಿಯನ್ನು ಕ್ರಿ. ಶ. ೧೩೨ ರಲ್ಲಿ ಕಳುಹಿಸಿದ ಪ್ರಮಾಣವು ಚೀಣದೇಶದಲ್ಲಿ ಸಿಕ್ಕುತ್ತದೆ. ಈ ಕಾಲದಲ್ಲಿ ಇಪ್ಪತ್ತು ಸಾವಿರ ಭಾರತೀಯ ಕುಟುಂಬಗಳು ಬಂದು ನೆಲೆಸಿದರೆಂದು ಜಾವಾದ ಐತಿಹ್ಯಗಳು ಹೇಳುತ್ತವೆ. ಹೀಗೆ ಕ್ರಿ. ಪೂರ್ವದಲ್ಲಿಯೇ ಭಾರತೀಯರು ಜಾವಾದಲ್ಲಿ ನೆಲಸಿದರೆನ್ನುವುದು ನಿರ್ವಿವಾದ.

ಪಶ್ಚಿಮ ಜಾವಾದಲ್ಲಿ ಕ್ರಿ. ಶ. ೫ನೆಯ ಶತಮಾನದ ಸಂಸ್ಕೃತ ಶಾಸನಗಳು ಸಿಕ್ಕಿವೆ; ಲಿಪಿ ದಕ್ಷಿಣಾಪಥದ ಪಲ್ಲವರಾಜರದು. ಪೂರ್ಣವರ್ಮನೆಂಬ ಮಹಾರಾಜನ ಪರಾಕ್ರಮಾತಿಶಯವನ್ನು ವರ್ಣಿಸುವ ಸಂಸ್ಕೃತ ಶ್ಲೋಕಗಳು ಹೃದಯಂಗಮ ಕಾವ್ಯಶೈಲಿಯಲ್ಲಿವೆ. ಆತನ ಪಾದಮುದ್ರೆಯನ್ನೂ ಶಾಸನದಲ್ಲಿ ಕೊರೆದಿದೆ. ಒಂದು ಶ್ಲೋಕವನ್ನು ಉದಾಹರಿಸಬಹುದು:

ಶ್ರೀಮಾನ್ ದಾತಾ ಕೃತಜ್ಞೋ ನರಪತಿರ
ಸಮೋ ಯಃ ಪುರಾ ತಾರುಮಾಯಾಮ್ ।
ನಾಮ್ನಾ ಶ್ರೀಪೂರ್ಣವರ್ಮಾ ಪ್ರಚುರರಿಪು-
ಶರಾಭೇದ್ಯವಿಖ್ಯಾತವರ್ಮಾ ।
ತಸ್ಯೇದಂ ಪಾದಬಿಂಬದ್ವಯಮರಿನಗರೋತ್ಸಾ-
ದನೇ ನಿತ್ಯದಕ್ಷಂ ॥
ಭಕ್ತಾನಾಂ ಯನ್ನೃಪಾಣಾಂ ಭವತಿ ಸುಖ-
ಕರಂ ಶಲ್ಯಭೂತಂ ರಿಪೂಣಾಮ್ ॥

ದಕ್ಷಿಣಾಪಥದ ಪಲ್ಲವರಾಜರಂತೆ ಜಾವಾ ಅರಸರು ಪೂರ್ವದಲ್ಲಿ ವರ್ಮವಂಶದ ರಾಜರಾಗಿದ್ದುದೂ ಸಂಸ್ಕೃತವೇ ರಾಜಭಾಷೆಯಾಗಿದ್ದುದೂ ಇದರಿಂದ ವ್ಯಕ್ತವಾಗುತ್ತದೆ. ರಾಜರ ಹೆಸರುಗಳೂ ಸಂಪೂರ್ಣವಾಗಿ ಭಾರತೀಯವೇ ಆಗಿವೆ.

ಇದೇ ಕಾಲದಲ್ಲಿ (ಕ್ರಿ.ಶ. ೪೧೪) ಭಾರತದ ತಾಮ್ರಲಿಪ್ತಿಯಿಂದ ಹಡಗನ್ನು ಹತ್ತಿ ಚೀಣಕ್ಕೆ ಹಿಂದಿರುಗಿದ ಯಾತ್ರಿಕ ಫಾ-ಹಿಯೆನನು ದಾರಿಯಲ್ಲಿ ಬಿರುಗಾಳಿಯ ದೆಸೆಯಿಂದ ಜಾವಾದ್ವೀಪದಲ್ಲಿ ಸ್ವಲ್ಪಕಾಲ ಕಳೆದನು. ತಾನು ನೋಡಿದ ಅಂಶಗಳನ್ನು ಅವನು ಬರೆದಿಟ್ಟಿದ್ದಾನೆ. ಬೌದ್ಧನಾದ ಆತನಿಗೆ ಜಾವಾದಲ್ಲಿ ಬ್ರಾಹ್ಮಣಧರ್ಮವೇ ಪ್ರಚಾರದಲ್ಲಿದ್ದುದನ್ನು ಕಂಡು ವ್ಯಥೆಯಾಗುತ್ತದೆ; ಬೌದ್ಧಧರ್ಮದ ಪ್ರಭಾವವು ಅತ್ಯಲ್ಪವೆಂದು ಕೊರಗುತ್ತಾನೆ. ಹೀಗೆ, ಜಾವಾದ್ವೀಪದಲ್ಲಿ ಪೌರಾಣಿಕ ಹಿಂದೂ ಧರ್ಮವೇ ಮೊದಲು ಕಾಲಿಟ್ಟುದು ಸ್ಪಷ್ಟವಾಗುತ್ತದೆ. ಶಿವ, ಗಣಪತಿ, ವಿಷ್ಣುಗಳ ಆರಾಧನೆಗೆ ಸೂಚಕವಾಗಿ ಈ ದೇವತೆಗಳ ಮೂರ್ತಿಗಳು ಅನೇಕವಾಗಿ ಸಿಕ್ಕುತ್ತವೆ. ಉತ್ತರಾಪಥಕ್ಕಿಂತ ಹೆಚ್ಚಾಗಿ, ದಕ್ಷಿಣಾಪಥದ ಕಳಿಂಗ, ಆಂಧ್ರ, ಪಲ್ಲವ ಮುಂತಾದ ತೀರವಾಸಿಗಳೇ ಹೆಚ್ಚಾಗಿ ಸುವರ್ಣಭೂಮಿಯಲ್ಲಿ ನೆಲಸಿದುದೂ ವೇದ್ಯವಾಗುತ್ತದೆ. ಮೂರ್ತಿಗಳ ಶಿಲ್ಪರೀತಿ ಹಾಗೂ ಭಾಷೆಯ ಲಿಪಿಗಳೂ ಈ ಅಂಶಕ್ಕೆ ಸಮರ್ಥನೆಯನ್ನೀಯುತ್ತವೆ. ಜಾವಾದ ಮೂಲನಿವಾಸಿಗಳು ಭಾರತೀಯರ ಸಂಸ್ಕೃತಿಗೆ ಮಾರುಹೋಗಿ ಅದನ್ನೆ ತಮ್ಮದನ್ನಾಗಿ ಮಾಡಿಕೊಂಡುದು ಐತಿಹಾಸಿಕ ಸತ್ಯ. ಭಾಷೆ, ಧರ್ಮ, ಸಾಹಿತ್ಯ, ಕಲೆ ಎಲ್ಲದರಲ್ಲಿಯೂ ಭಾರತದ ಸಂಸ್ಕೃತಿಯೇ ಆದರ್ಶಪ್ರಾಯವಾಗಿದ್ದಿತು. ಆದರೆ ರಾಜರು ಮೂಲ ಸಂಸ್ಕೃತಿಯ

ವಿನಾಶಮಾಡಲು ಹೋಗದೆ ಅದರ ಅಂಗಗಳನ್ನೂ ಭಾರತಸಂಸ್ಕೃತಿಯೊಳಗೇ ಸಮರಸವಾಗಿ ಅಳವಡಿಸಿಕೊಂಡದ್ದನ್ನು ಮುಂದೆ ಪ್ರಸ್ತಾಪಿಸಲಾಗುತ್ತದೆ; ಸಂಸ್ಕೃತದ ಜತೆಗೆ ದೇಶಭಾಷೆಗಳೂ ಭಾರತದ ಆಚಾರಗಳೊಂದಿಗೆ ದೇಶಾಚಾರಗಳೂ ಪರಸ್ಪರ ಸಾಮಂಜಸ್ಯವನ್ನು ಪಡೆದು ಬೆಳೆಯುತ್ತಾ ಹೋದುವು.

ಫಾಹಿಯೆನನು ಹೋದ ಹತ್ತೇ ವರ್ಷಗಳ ತರುವಾಯ, ಕಾಶ್ಮೀರದ ಬೌದ್ಧಾಚಾರ್ಯನಾದ ಗುಣವರ್ಮನೆಂಬಾತನು ಜಾವಾಕ್ಕೆ ಹೋಗಿ ಅಲ್ಲಿ ಹೀನಯಾನ ಪಂಥವನ್ನು ಪ್ರಚಾರಮಾಡಿದನು. ರಾಜನೂ ಬೌದ್ಧ ಧರ್ಮವನ್ನು ಸ್ವೀಕರಿಸಿದನಂತೆ. ಬ್ರಾಹ್ಮಣ ಧರ್ಮಕ್ಕೂ ಬೌದ್ಧಧರ್ಮಕ್ಕೂ ಘರ್ಷಣೆಯೊದಗಲಿಲ್ಲ. ಸಹಿಷ್ಣುತೆಯು ಅಖಂಡವಾಗಿದ್ದ ಕಾರಣ ಬೌದ್ಧಸ್ತೂಪಗಳೂ ಬ್ರಾಹ್ಮಣ ದೇವಾಲಯುಗಳೂ ಅಕ್ಕಪಕ್ಕದಲ್ಲಿಯೇ ನಿರ್ಮಿತವಾಗುತ್ತಿದ್ದುವು.

ಕ್ರಿ. ಶ. ೮ನೆಯ ಶತಮಾನದ ವೇಳೆಗೆ ಜಾವಾದ ಭಾಗಗಳು ಸುಮಾತ್ರಾ ದ್ವೀಪದ ಶ್ರೀವಿಜಯದ ಶೈಲೇಂದ್ರರಾಜರ ಅಧೀನದಲ್ಲಿ ಬಂದುವು. ಇವರು ಮಹಾಯಾನ ಬೌದ್ಧಧರ್ಮವನ್ನು ಅನುಸರಿಸುತ್ತಿದ್ದರು. ಶೈಲೇಂದ್ರರಾಜನಾದ ಬಲಪುತ್ರನು ಭಾರತದ ನಾಳಂದಾದಲ್ಲಿ ಕಟ್ಟಿಸಿದ ವಿಹಾರದ ರಕ್ಷಣೆಗೆಂದು ಪಾಲವಂಶದ ಪ್ರಸಿದ್ಧರಾಜನಾದ ದೇವಪಾಲನು ಐದು ಹಳ್ಳಿಗಳನ್ನು ಬಿಟ್ಟ ತಾಮ್ರಪಟವು ನಾಲಂದಾದಲ್ಲಿ ಸಿಕ್ಕಿದೆ. ಶೈಲೇಂದ್ರರು ಜಾವಾದಿಂದಲೇ ಶ್ರೀವಿಜಯಕ್ಕೆ ಹೋದವರೆಂದೂ ಕೆಲವರ ಮತ. ಹೇಗೇ ಇರಲಿ; ಈ ರಾಜರು ಪ್ರಪಂಚದಲ್ಲೇ ಅತಿ ಸುಂದರಗಳೆನಿಸುವ ಕಲಾರತ್ನಗಳಿಗೆ ಕಾರಣರಾದರು. ಇವರ ಶಾಸನಗಳ ಕಾವ್ಯಶೋಭೆಯೂ ಮೇಲ್ಮಟ್ಟದ್ದು. ತಾರಾದೇವಿಯ ಮಂದಿರವನ್ನು ಸ್ಥಾಪಿಸಿದಾಗ ಕ್ರಿ. ಶ. ೭೭೮ ರಲ್ಲಿ ನೆಟ್ಟ ಶಿಲಾಶಾಸನದಿಂದ ಒಂದು ಉದಾಹರಣೆಯನ್ನು ನೋಡಿ :—

> ಯಾ ತಾರಯತ್ಯಮಿತದುಃಖಭವಾಬ್ಧಿಮಗ್ನಂ
> ಲೋಕಂ ವಿಲೋಕ್ಯ ವಿಧಿವತ್ ತ್ರಿವಿಧೈರು-
> ಪಾಯೈಃ ।
>
> ಸಾ ವಸ್ಸುರೇಂದ್ರನರಲೋಕವಿಭೂತಿಸಾರಂ
> ತಾರಾ ದಿಶತ್ವಭಿಮತಂ ಜಗದೇಕತಾರಾ ॥

ಪ್ರಪಂಚದಲ್ಲೆಲ್ಲ ಸೌಂದರ್ಯಕ್ಕೆ ಹೆಸರಾಂತ, ವಿಶ್ವದ ಎಂಟನೆಯ ಅದ್ಭುತವೆಂದು ಕೀರ್ತಿತವಾದ, ಬೌದ್ಧಸ್ತೂಪವು ಜಾವಾದ 'ಬರೋಬುದೂರ್' ಎಂಬಲ್ಲಿದೆ. ಬೌದ್ಧಧರ್ಮದ ಜನ್ಮಭೂಮಿಯಲ್ಲಿಯೂ ಇಷ್ಟು ಮೋಹಕವಾದ ಬುದ್ಧನ ಸ್ಮಾರಕವಿಲ್ಲ. ಇದನ್ನು ಕಟ್ಟಿಸಿದವರು ಶೈಲೇಂದ್ರರು. ಮಹಾಯಾನ ಬೌದ್ಧದೇವತೆಗಳಿಂದ ಶಿಲ್ಪಕಲಾವಿಕಾಸಕ್ಕೆ ಭಾರತದಲ್ಲಿಯೂ ಇತರ ದೇಶಗಳಲ್ಲಿಯೂ ಅನುವು ದೊರೆಯಿತು. ಆದರೆ ಬರೋಬುದೂರ್‌ನ ಶಿಲ್ಪವು ಸೌಂದರ್ಯದಲ್ಲಿ ಸರ್ವಾಧಿಕವಾದುದು. 'ಬರೋಬುದೂರ್' ಎಂದರೆ 'ಬಹುಬುದ್ಧರು' ಎಂಬರ್ಥ.

ಒಂದು ಇಡಿಯ ಪರ್ವತಾಗ್ರವನ್ನೇ ಮೇಲಿಂದ ಕೆಳಕ್ಕೆ ಕ್ರಮವಾಗಿ ಒಂಭತ್ತು ಕಲ್ಲಿನ ಅಂತಸ್ತುಗಳಾಗಿ ಕಡೆದಿದ್ದಾರೆ. ಕೆಳಗಿನಿಂದ ಮೇಲಕ್ಕೆ ಒಂದೊಂದು ಅಂತಸ್ತೂ ಪ್ರಮಾಣದಲ್ಲಿ ಕುಗ್ಗುತ್ತಾ, ಎತ್ತರದಲ್ಲಿ ಹೆಚ್ಚುತ್ತಾ, ಹೋಗುತ್ತದೆ. ತುತ್ತತುದಿಯ ಅಂತಸ್ತಿನ ನಡುವೆ ಅಷ್ಟಮೂಲೆಯ ಅಲಂಕೃತ ಗೋಪುರದ ಮೇಲೆ ಸ್ತೂಪಾಕಾರವು ವಿರಾಜಿಸುತ್ತದೆ. ಇಲ್ಲಿ ಕೆತ್ತಿದ ಚಿತ್ರಗಳಲ್ಲಿ ಗುಪ್ತರ ಶಿಲ್ಪಕಲೆಯು ಎದ್ದು ಕಾಣುತ್ತದೆ. ಆದರೂ ಜಾವಾ ಕಲೆಯ ಸೂಚಕವಾಗಿ ಹಡಗು, ಹಕ್ಕಿ, ಎಲೆ, ಪ್ರಾಣಿಗಳ ಚಿತ್ರವೂ ಇರುತ್ತವೆ. ಹೀಗೆ ಭಾರತ ಶಿಲ್ಪಕಲೆಯು ಜಾವಾ ಕಲೆಯೊಡನೆ ಬೆರೆತು ವಿಶ್ವಕ್ಕೇ ಅನ್ಯಾದೃಶವಾದ ಶಿಲ್ಪರತ್ನವನ್ನು ಕೊಟ್ಟಿತೆನ್ನಬಹುದು.

ಶೈಲೇಂದ್ರರಾದ ಮೇಲೆ ಹಿಂದೂ ರಾಜರು ಮತ್ತೆ ಜಾವಾದಲ್ಲಿ ಅಧಿಕಾರಕ್ಕೆ ಬಂದರು. ಮತ್ತೆ ಹಿಂದೂ ದೇವಾಲಯುಗಳು ನಿರ್ಮಿತವಾದವು. ಲಾರಾ-ಜೋಂಗ್‌ರಾಂಗ್ ಎಂಬಲ್ಲಿರುವ ಹಿಂದೂ ದೇವಾಲಯುಗಳಲ್ಲಿ ಶಿವನ ದೇವಾಲಯುವು ದೊಡ್ಡ

ದಾಗಿ ನೆಲಸುನೆಯಿದ್ದು ಸೂತ್ತಲೂ ಬ್ರಹ್ಮ, ವಿಷ್ಣು, ಮೊದಲಾದ ದೇವತೆಗಳ ಗುಡಿಗಳಿವೆ. ಈ ಶಿವಾಲಯದಲ್ಲಿಯೂ ಬರೋಬುದೂರಿನಂತೆಯೇ ಬಲಿಪೀಠಗಳ ಕೆತ್ತನೆ ಕೆಲಸವಿದೆ. ಬುದ್ಧನ ಜೀವನ ಕಥೆಗೆ ಬದಲು ರಾಮಾಯಣದ ಕಥೆಯನ್ನು ಕೆತ್ತಿದೆ. ರಾಮನ ಜನನದಿಂದ ಹಿಡಿದು ಸೈನ್ಯವು ಲಂಕೆಯನ್ನು ಪ್ರವೇಶಿಸುವವರೆಗೆ ಈ ದೇವಾಲಯದಲ್ಲಿ ಕಥೆಯನ್ನು ಕೆತ್ತಿದ್ದಾರೆ. ಕಥೆಯು ಬ್ರಹ್ಮನ ಗುಡಿಯಲ್ಲಿ ಮುಂದುವರಿಯುತ್ತದೆ. ಈ ಕೆತ್ತನೆಯ ಕಲೆಯನ್ನೂ ಕಲಾವಿಮರ್ಶಕರು ಬಾಯಾರೆ ಹೊಗಳಿದ್ದಾರೆ.

ಜಾವಾದಲ್ಲಿ ಹೊಸ ರಾಜ್ಯಗಳು ಬಂದರೂ ಕ್ರಿ. ಶ. ೧೪ ನೆಯ ಶತಮಾನದ ವರೆಗೆ ಬ್ರಾಹ್ಮಣ ಮತ್ತು ಬೌದ್ಧ ಧರ್ಮಗಳು ಸಮರಸವಾಗಿಯೇ ಪ್ರಚಾರದಲ್ಲಿದ್ದವು. ಈ ಶತಮಾನದ ಕೃತನಗರನೆಂಬ ರಾಜನು ಶಿವ-ಬುದ್ಧನೆಂಬ ಬಿರುದನ್ನು ಪಡೆದಿದ್ದುದು ಈ ಸಾಮರಸ್ಯದ ಉತ್ತಮ ಪ್ರತೀಕ. ೧೫ ನೆಯ ಶತಮಾನದಲ್ಲಿ ಮುಸಲ್ಮಾನ ಧರ್ಮವು ಬಂದು ಇವುಗಳನ್ನು ಕಬಳಿಸಿತು. ೧೬ ನೆಯ ಶತಮಾನದ ಅಂತ್ಯದಲ್ಲಿ ಡಚ್ಚರು ಬಂದು ಸಂಸ್ಕೃತಿಯ ಸಂವರ್ಧನವನ್ನು ತಡೆದುಬಿಟ್ಟರು. ಕಡೆ ಕಡೆಗೆ ಬಂದ ಶಿಲ್ಪಗಳಲ್ಲಿ ಮೊದಲಿನ ಸೌಂದರ್ಯವು ಲೋಪವಾಗುತ್ತ ಬಂದಿತು.

* * *

ಜಾವಾದಲ್ಲಿಯೂ ಸಂಸ್ಕೃತದ ಶಾಸ್ತ್ರ-ಸಾಹಿತ್ಯಗಳನ್ನೇ ಓದುತ್ತಿದ್ದರು. ಹಳೆಯ ಜಾವನೀ ಭಾಷೆಯ ಗ್ರಂಥಗಳೆಲ್ಲಕ್ಕೂ ಸಂಸ್ಕೃತದ ಪುರಾಣ ಕಥೆಗಳೇ ಆಧಾರವನ್ನೊದಗಿಸಿದವು; ಅವುಗಳ ಶೈಲಿಯೂ ಸಂಸ್ಕೃತ ಶೈಲಿಯನ್ನೇ ಅನುಕರಿಸುತ್ತದೆ. ಭಾರತದ ವೀರರು ಜಾವನೀ ಭಾಷೆಯ ಪ್ರಬಂಧಗಳ ನಾಯಕರು; ಅವರ ನಾಟಕಗಳಲ್ಲಿಯೂ ನೃತ್ಯಗಳಲ್ಲಿಯೂ ಭಾರತ ಕಥಾಪುರುಷರೇ ಮುಖ್ಯ ಪಾತ್ರಗಳು. ಇಷ್ಟೇ ಅಲ್ಲ; ಭಾರತದ ವರ್ಣಾಶ್ರಮ ವ್ಯವಸ್ಥೆಯೂ ರಾಜನೀತಿ ವ್ಯವಹಾರಗಳೂ ಜಾವಾದಲ್ಲಿ ಪ್ರಚಾರದಲ್ಲಿದ್ದುದಕ್ಕೆ ಪ್ರಮಾಣಗಳಿವೆ. ಹೀಗೆ ಜಾವಾ ಜೀವನದ ಸರ್ವಾಂಗಗಳಲ್ಲಿಯೂ ಭಾರತದ ಪ್ರಭಾವವನ್ನು ಇತಿಹಾಸವು ಎತ್ತಿ ತೋರಿಸುತ್ತದೆ.

ಹಳೆಯ ಜಾವಾ ಭಾಷೆಗೆ "ಕವಿ" ಯೆನ್ನುವರು. ಈ ಭಾಷೆಯ ಅನೇಕ ಶಬ್ದಗಳು ಸಂಸ್ಕೃತ ಜನ್ಯವಾದರೂ ರೂಪವನ್ನು ಬದಲಾಯಿಸಿ ಗುರುತನ್ನು ಮರೆಸುತ್ತವೆ. 'ಭರತ' ನು 'ವರ್ದನ' ನಾಗುತ್ತಾನೆ; 'ಶತ್ರುಘ್ನ' ನು 'ಚಿತ್ರದನ' ನೆನಿಸುತ್ತಾನೆ; ಅತ್ಯಂತ ಪ್ರಾಚೀನ ಜಾವನೀ ಭಾಷೆಯ ಶಾಸನದ ಕೆಲವು ಸಾಲುಗಳನ್ನು ಕೆಳಗೆ ಉದಾಹರಿಸಿದೆ:—

"... ಮುಅಃ ಯ ಮಮ್ಬ್ಯದುಪಿ ಪಶು ಪ್ರಕಾರ ಮರ್ರ್ವುಲುನ್-ತುವಿ ವೃದ್ಧಿ, ಮುಅಃ ಯ ಜಾಙನ್ ಯ ನಿಕ್ಕೈ ಸವಙಕ್ಯಙ ಯವರ್ ಉಪಸರ್ಗ ಪೀಡನು ಸ್ವಪ್ನವಿಘ್ನ ವರನ್ ವುಅತಾಙ ಕಥಮಪಿ ಅನುಕೂಲ ಯವರ್ ಗ್ರಹ ನಕ್ಷತ್ರ ಪರಾವಿಸ್ ದಿಯು ನಿರ್ವ್ಯಾಧಿ ಅಜರ ಕವುಅತನಾಙ."

ಭಾಷಾಂತರ:—

[... ಮತ್ತು ಅವರು ಸಾಕಿದ ಎಲ್ಲ ಪ್ರಕಾರದ ಪಶುಗಳಿಗೂ ಅವರ ಭೃತ್ಯರಿಗೂ ವೃದ್ಧಿಯಾಗಲೆಂದು, ಅವಕ್ಕೆಂದೂ ಈತಿಬಾಧೆ, ನಿದ್ರಾಭಂಗಗಳು ಬರಲಾಗದೆಂದು, ಅದರ ಸಂತಾನಕ್ಕೆಲ್ಲ ಅನುಕೂಲ ಗ್ರಹನಕ್ಷತ್ರಸಂಪತ್ತಿಯೂ ಆರೋಗ್ಯ ಅಜರತ್ವಗಳೂ ಸಿದ್ಧಿಸಲೆಂದು ...]

ಇದು ಪಾಲೆಂಬಾಗ್‌ನಲ್ಲಿ ಸಿಕ್ಕಿರುವ (ಕ್ರಿ. ಶ. ೬೮೪) ಶಾಸನದ ಭಾಗ. ಆಗಲೇ ಮಣಿ-ಪ್ರವಾಳ ಶೈಲಿಯಂತೆ ಸಂಸ್ಕೃತ ಜಾವನೀ ಶಬ್ದಗಳ ಬೆರಕೆಯಾಗುತ್ತಿದ್ದುದು ಸ್ಪಷ್ಟವಾಗಿದೆ. ಇಂದಿನ ಇಂಡೋನೇಷಿಯನ್ ಭಾಷೆಯನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ಅಭ್ಯಾಸ ಮಾಡುವವರಿಗೆ ಸಂಸ್ಕೃತ ಪ್ರಾಕೃತಗಳ ಪ್ರಭಾವವು ವಿಮರ್ಶನೀಯವಾಗುತ್ತದೆ.

ಜಾವಾದಲ್ಲಿ ಪ್ರಚಾರದಲ್ಲಿದ್ದ ರಾಮ ಕಥೆಗೂ ವಾಲ್ಮೀಕಿ ರಾಮಾಯಣ ಕಥೆಗೂ ಕೆಲವೊಂದು ವ್ಯತ್ಯಾಸಗಳಿವೆ. ಯೋಗೀಶ್ವರನೆಂಬವನು ಹಳೆಯ ಜಾವನೀ ಭಾಷೆಯಲ್ಲಿ (ಕ್ರಿ. ಶ. ೧೨ ನೇ ಶತಮಾನ) ರಾಮಾಯಣ ಕಾಕವಿನ್ ಎಂಬ ಗ್ರಂಥವನ್ನು ಬರೆದಿರುವನು. ಇದು ವಿಶೇಷವಾಗಿ ಭಟ್ಟಿಕಾವ್ಯದ ಕಥೆಯನ್ನನುಸರಿಸುತ್ತದೆ. ಯುದ್ಧಕಾಂಡದ ಕಥೆಯಿಲ್ಲ. ಇದಲ್ಲದೆ ರಾವಣನು ಸೀತೆಯನ್ನು ಹೆದರಿಸಲು ರಾಮಲಕ್ಷ್ಮಣರ ಮಾಯಾಶಿರಗಳನ್ನು ಕತ್ತರಿಸಿ ತರುವುದು, ಶಬರಿಯು ತನ್ನ ಪೂರ್ವಜನ್ಮವೃತ್ತಾಂತವನ್ನು ವರಾಹಾವತಾರಕ್ಕೆ ಅನ್ವಯಿಸಿ ಹೇಳುವುದು, ಇವೇ ಮುಂತಾದ ಭಿನ್ನ ಘಟನೆಗಳು ಬರುತ್ತವೆ. ಮೇಲೆ ಹೇಳಿದ ಶಿವಾಲಯದಲ್ಲಿ ಕೆತ್ತಿರುವ ಕಥೆ ಮಾತ್ರ ವಾಲ್ಮೀಕಿಗಳ ಕಥೆಯೇ. ಆದರೆ ಇನ್ನೂ ಈಚಿನ ಹೊಸ ಜಾವನೀ ಭಾಷೆಯಲ್ಲಿ ರಾಮ ಕೇಲಿಂಗ್, ಸೇರತ ಕಾಂಡ, ಸೇರೀ ರಾಮ, ಮುಂತಾದ ರಚನೆಗಳಿದ್ದು ಅವುಗಳ ಕಥೆ ಮಾತ್ರ ರಾಮಾಯಣಕ್ಕೆ ಸಂಬಂಧವೇ ಇಲ್ಲದಷ್ಟು ವಿಪರ್ಯಸ್ತವಾಗಿದೆ.

ಕಥೆಯು ರಾವಣನ ಚರಿತೆಯಿಂದ ಆರಂಭವಾಗುತ್ತದೆ. ತಂದೆಯಿಂದ ನಿರ್ವಾಸಿತನಾದ ರಾವಣನು ಲಂಕೆಯಲ್ಲಿ ರಾಜನಾಗಿ ಇಂದ್ರಜಿತ್, ಮಹಿರಾವಣ, ಗಂಗಾಮಹಾಸೂರಿಗಳೆಂಬ ಮಕ್ಕಳನ್ನು ಪಡೆಯುತ್ತಾನೆ. ಮೂವರೂ ಕ್ರಮವಾಗಿ ದೇವ, ಪಾತಾಳ, ನಾಗ ಲೋಕಗಳ ಒಡೆಯರಾಗುತ್ತಾರೆ. ದಶರಥನಿಗೆ ಮಂಡೋದರಿ ಮತ್ತು ಬಲಿಯಾದರಿ ಎಂಬ ಇಬ್ಬರು ಹೆಂಡಿರಂತೆ. ಅವನ ಪುತ್ರಕಾಮೇಷ್ಟಿ ಯಾಗದ ಪಾಯಸದಲ್ಲಿ ಬಲಿಯಾದರಿಯ ಪಾಲನ್ನು ಕಾಗೆಯೊಂದು ಕದ್ದು ಲಂಕೆಗೆ ತರುವುದಂತೆ. ಕಾಗೆಯನ್ನು ರಾಮನು ಕೊಲ್ಲುವನೆಂದೂ ಪಾಯಸವನ್ನು ತಿಂದವರಿಗೆ ಮಗಳು ಜನಿಸಿ ರಾಮನನ್ನು ಮದುವೆಯಾಗುವ



ಬಲಿದ್ವೀಪದ ಒಂದು ನೃತ್ಯಭಂಗಿ



ಬಲಿದ್ವೀಪದ ಜಂಗರ್ ನೃತ್ಯ

ಳೆಂದೂ ಜೋಯಿಸನು ಹೇಳುತ್ತಾನೆ. ರಾವಣನೇ ಪಾಯಸವನ್ನು ತಿನ್ನುತ್ತಾನೆ. ದಶರಥನ ಹೆಂಡತಿಯಾದ ಮಂಡೋದರಿಯ ಸೌಂದರ್ಯವನ್ನು ಕೇಳಿ ಮೋಹಿತನಾದ ರಾವಣನು ಆಕೆಯನ್ನು ತನಗೆ ಒಪ್ಪಿಸುವಂತೆ ದಶರಥನಿಗೆ ಹೇಳಿಕಳುಹಿಸುತ್ತಾನೆ. ದಶರಥನು ಹಾಗೆ ಮಾಡಲು ಹೊರಟದ್ದನ್ನು ಕಂಡು ಮಂಡೋದರಿಯು ಮಾಯಾಬಲದಿಂದ ತನ್ನಂತೆ ಮತ್ತೊಬ್ಬಳನ್ನು ಸೃಷ್ಟಿಮಾಡಿ ಲಂಕೆಯ ದೂತನೊಡನೆ ಕಳುಹಿಸುತ್ತಾಳೆ. ಈ ಮಾಯಾಮಂಡೋದರಿಯು ರಾವಣನ ಹೆಂಡತಿಯಾಗಿ ಸೀತೆಯು ಅವಳಿಗೆ ಮಗಳಾಗಿ ಜನಿಸುತ್ತಾಳೆ. ಆಕೆಯ ಪತಿಯು ರಾವಣನನ್ನು ಕೊಲ್ಲುವನೆಂದು ಜೋಯಿಸರು ನುಡಿಯಲು, ರಾವಣನು ಶಿಶುವನ್ನು ಪೆಟ್ಟಿಗೆಯಲ್ಲಿಟ್ಟು ಸಮುದ್ರದಲ್ಲಿ ತೇಲಿಬಿಡುತ್ತಾನೆ. ಕಲಿಯೆಂಬ ಮಹರ್ಷಿಗೆ ಸೀತೆ ಸಿಕ್ಕಿ ಅವನು ಅವಳನ್ನು ಪಾಲಿಸುತ್ತಾನೆ; ಅವನೇ ಅವಳನ್ನು ಸ್ವಯಂವರದಲ್ಲಿ ರಾಮನಿಗೆ ಲಗ್ನ ಮಾಡಿಕೊಡುತ್ತಾನೆ. ಮುಂದೆ ಬಲಿಯಾದರಿಯ ಪ್ರೇರಣೆಯಂತೆ ರಾಮನು ಋಷಿಯಾಗಿ ವನವಾಸ ಮಾಡುತ್ತಾ ಅಲ್ಲಿ ಕುಶಗಳಿಂದ ನಿಲು ಹುಡುಗಿಯರನ್ನೂ ಐದು ಹುಡುಗರನ್ನೂ ಸೃಷ್ಟಿಸಿಕೊಂಡು ಅವರ ಸೇವೆಯನ್ನು ಪಡೆಯುತ್ತಾನೆ. ಶೂರ್ಪಣಖೆಯ ಪತಿಯು ರಾವಣನ ಕತ್ತಿಯಿಂದ ಸತ್ತ ಕಾರಣ, ಅವಳ ಮಗನಾದ ಧೇಸಾರ್ಸಿಂಹನು ರಾವಣನನ್ನು ಕೊಲ್ಲುವ ಕತ್ತಿಯನ್ನು ಪಡೆಯಲೆಳಸಿ ತಪಸ್ಸು ಮಾಡುತ್ತಿರುತ್ತಾನೆ. ಬ್ರಹ್ಮನು ಮೆಚ್ಚಿ ಕತ್ತಿಯನ್ನು ಅವನ ಪಕ್ಕದಲ್ಲಿಟ್ಟು ಹೋಗಿರುತ್ತಾನೆ. ಯೋಗಾಯೋಗದಿಂದ ಲಕ್ಷ್ಮಣನಲ್ಲಿ ಬಂದು ಕತ್ತಿಯನ್ನು ತೆಗೆದುಕೊಂಡು ಅವನನ್ನು ಕೊಂದುಬಿಡುತ್ತಾನೆ. ಶೂರ್ಪಣಖೆಯನ್ನು ವಿರೂಪಗೊಳಿಸುತ್ತಾನೆ. ಈ ನವೀನವಾದ ರಾಮಕಥೆಯು ವಿಚಿತ್ರವಾಗಿರುವಂತೆಯೇ ವಾಲ್ಮೀಕಿ ರಾಮಾಯಣದ ಮೂಲ ಪಾಠವನ್ನು ಕುರಿತು ವಿಮರ್ಶಿಸುವ ಸಂಶೋಧಕರಿಗೆ ಉಪಯುಕ್ತವಾಗಿಯೂ ಇದೆ.

ಮಹಾಭಾರತವೂ ಹಳೆಯ ಜಾವನೀ ಭಾಷೆಗೆ ಕ್ರಿ. ಶ. ೧೦ ನೆ ಶತಮಾನದಲ್ಲಿ ಅಷ್ಟಿಷ್ಟು ಪರಿವರ್ತಿತವಾಗಿದೆ. ಬಲಿದ್ವೀಪದಲ್ಲಿ ಪ್ರತಿಗಳು ಸಿಕ್ಕಿವೆ. ಆರ್ಯಾ, ಶಾರ್ದೂಲವಿಕ್ರೀಡಿತ ಮುಂತಾದ ವೃತ್ತಗಳನ್ನು ಆ ಭಾಷೆಯಲ್ಲಿಯೂ ಬಳಸಿರುವದನ್ನು ನೋಡಿದರೆ ವ್ಯಾಸರ ಮೂಲಕ್ಕಿಂತಲೂ ವೇಣೀಸಂಹಾರವೇ ಮುಂತಾದ ನಾಟಕಗಳ ಪ್ರಭಾವವು ಹೆಚ್ಚಾಗಿದ್ದುದು ಕಾಣುತ್ತದೆ. ಒಂದು ಪ್ರತಿಯಲ್ಲಿ ವೇಣೀಸಂಹಾರದ ಎರಡನೆಯ ಮಂಗಲ ಶ್ಲೋಕವೇ ಸಿಕ್ಕಿದೆ. ಇದರಿಂದ ವಯಾಂಗ್ ಎಂದು ಅವರೆನ್ನುವ ಜಾವಾ ನಾಟಕಗಳಿಗೂ ಸಂಸ್ಕೃತ ನಾಟಕಗಳೇ ಸ್ಫೂರ್ತಿಯನ್ನಿತ್ತುವೆಂದು ಪ್ರಖ್ಯಾತ ವಿದ್ವಾಂಸರಾದ ಡಾ॥ ಸಿಲ್ವೇನ್ ಲೇವಿಯವರು ನಿರ್ಣಯಿಸಿದ್ದಾರೆ.

ಬೋರ್ನಿಯೋ: ದಕ್ಷಿಣಾಪಥದ ಪಲ್ಲವ ಲಿಪಿಯಲ್ಲಿ ಬರೆದಿರುವ ಕ್ರಿ. ಶ. ೪ ನೆ ಶತಮಾನದ ಸಂಸ್ಕೃತ ಶಾಸನಗಳೇ ದ್ವೀಪಸ್ತೋಮದಲ್ಲಿ ಉಪಲಬ್ಧವಿರುವ ಶಾಸನಗಳಲ್ಲೆಲ್ಲ ಹಳೆಯವು. ಒಂದರಲ್ಲಿ ಕುಂಡುಂಗನ ಮಗನಾದ ಅಶ್ವವರ್ಮನು ವಂಶಕರ್ತನೆಂದೂ, ಆತನ ಮಗ ಮೂಲವರ್ಮನು ಬಹು ಸುವರ್ಣಯಾಗವನ್ನು ಮಾಡಿ ಯೂಪವನ್ನು ನೆಟ್ಟನೆಂದೂ ಹೇಳಿದೆ. ಯಾಗ ಕಾಲದಲ್ಲಿ ವಪ್ರಕೇಶ್ವರ ಕ್ಷೇತ್ರದಲ್ಲಿ ನೆರೆದ ಬ್ರಾಹ್ಮಣರಿಗೆ 'ವಿಂಶತಿ ಗೋಸಹಸ್ರಕ' ವನ್ನು ಅವನು ದಾನ ಮಾಡಿದನಂತೆ. ಇನ್ನೊಂದು ಕಂಬದಲ್ಲಿ 'ಜಲಧೇನು', 'ಘೃತಧೇನು', 'ಕಪಿಲಾ', 'ತಿಲ', 'ವೃಷಭೈಕಾದಶ' ಗಳ ದಾನದ ಉಲ್ಲೇಖವಿದೆ. ಮತ್ತೊಂದು "ಯೂಪೋಽಯಂ ಸ್ಥಾಪಿತೋ ವಿಪ್ರೈರ್ನಾನಾದೇಶಾದಿಹಾಗತೈಃ" ಎಂದು ಹೇಳಿದೆ. ಇಲ್ಲಿಯೂ ಕೆಲ ಬುದ್ಧ ವಿಗ್ರಹಗಳೂ ಲಿಂಗಮೂರ್ತಿಗಳೂ ಗಣೇಶನ ಪ್ರತಿಮೆಗಳೂ ಸಿಕ್ಕಿವೆ.

ಸುಮಾತ್ರಾ: ಮಹಾಯಾನ ಬೌದ್ಧ ಸಂಪ್ರದಾಯಗಳು ಮೊದಲು ಸುಮಾತ್ರಾದಲ್ಲಿ ಬೇರೂರಿದುದನ್ನು ಆಗಲೇ ಪ್ರಾಸ್ತಾಪಿಸಿದೆ. ಕಾಂಚೀ ನಗರದ ಧರ್ಮಪಾಲನು ನಾಳಂದಾದಲ್ಲಿ ಮೂವತ್ತು ವರ್ಷಗಳ ಕಾಲ ಕಲಿತು ಸುಮಾತ್ರಾಕ್ಕೆ ಹೋಗಿ ಮಹಾಯಾನ ಧರ್ಮವನ್ನು ಪ್ರಸಾರ ಮಾಡಿದನು. ಕ್ರಿ. ಶ. ೭ ನೆ ಶತಮಾನದಲ್ಲಿ ಇತ್ಸಿಂಗನು ಚೀಣಾದಿಂದ ಭಾರತಕ್ಕೆ ಬಂದು ಹೋಗುವಾಗ ಸುಮಾತ್ರಾ ಅಥವಾ ಶ್ರೀವಿಜಯದಲ್ಲಿ ಕೆಲವು ವರ್ಷಗಳನ್ನು ಕಳೆದನು. ರಾಜಧಾನಿಯಲ್ಲಿ ಒಂದು ಸಾವಿರ ಬೌದ್ಧ ಭಿಕ್ಷುಗಳಿದ್ದರಂತೆ. ಅವರಲ್ಲಿಯೇ ಇತ್ಸಿಂಗನು ಸಂಸ್ಕೃತವನ್ನು ಕಲಿತುದು. ನಾಳಂದಾದಿಂದ ತಿರುಗಿಹೋಗುವಾಗ ಅವನು ಎಷ್ಟೋ ಸಂಸ್ಕೃತ ಗ್ರಂಥಗಳನ್ನು ಶ್ರೀವಿಜಯದಲ್ಲಿಯೇ ಚೀಣೀ ಭಾಷೆಗೆ ಪರಿವರ್ತಿಸಿದನು. "ಭಾರತದಲ್ಲಿರುವಂತೆಯೇ ಇಲ್ಲಿಯ ಭಿಕ್ಷುಗಳು ಎಲ್ಲ ಶಾಸ್ತ್ರಗಳನ್ನು ಅಭ್ಯಾಸ ಮಾಡುತ್ತಾರೆ. ನೀತಿ ನಿಯಮಗಳಲ್ಲಿ ಯಾವ ಭೇದವೂ ಇಲ್ಲ. ಚೀಣದಿಂದ ಭಾರತಕ್ಕೆ ಹೋಗುವವರು ಇಲ್ಲಿ ಇಳಿದು ವಿಷಯಗಳನ್ನು ತಿಳಿದ ಮೇಲೆ ಭಾರತಕ್ಕೆ ಹೋಗುವದೊಳ್ಳಿತು" ಎಂದು ಅವನು ಬರೆದಿದ್ದಾನೆ.

ಇಲ್ಲಿಯ ಮೊದಲ ಶಾಸನಗಳು ಅಶುದ್ಧ ಸಂಸ್ಕೃತದಲ್ಲಿದ್ದರೂ ಕ್ರಿ. ಶ. ೮ ನೆಯ ಶತಮಾನದ ಶಾಸನಗಳು ಅತ್ಯಂತ ರಮಣೀಯವಾದ ಪ್ರೌಢಸಂಸ್ಕೃತದಲ್ಲಿವೆ. ಇದಕ್ಕೆ ವಂಗದೇಶದ ಸಂಪರ್ಕವೇ ಕಾರಣ.

ಶೈಲೇಂದ್ರ ರಾಜರ ಕಾಲದಲ್ಲಿ ಶ್ರೀ ವಿಜಯದ ಸಂಸ್ಕೃತ ಪಾಂಡಿತ್ಯಕ್ಕೆ ಈ ಶಾಸನಗಳೇ ಸಾಕ್ಷಿಯಾಗಿವೆ. ಶೈಲೇಂದ್ರ ರಾಜರು ದಕ್ಷಿಣಾಪಥದ ಚೋಳ ರಾಜರೊಡನೆ ರಾಯಭಾರಿ ಸಂಬಂಧವನ್ನೂ ಇಟ್ಟುಕೊಂಡಿದ್ದರು. ಆದರೆ ಕ್ರಿ. ಶ. ೧೧ ನೆಯ ಶತಮಾನದಲ್ಲಿ ವೈರ ಮೊಳೆತು ಚೋಳ ರಾಜರು ಅವರೊಡನೆ ಯುದ್ಧಮಾಡಿ ಸೋಲಿಸಿದಂತೆ ಇತಿಹಾಸದಿಂದ ತಿಳಿಯುತ್ತದೆ. ಕಡೆಗೆ ಅವರ ಒಡೆತನವು ಕುಂದಿಹೋಯಿತು.

ಬಲಿ: ಈ ದ್ವೀಪವು ಸಣ್ಣದಾದರೂ ಮೊನ್ನೆ ಮೊನ್ನೆಯವರೆಗೂ ಅಚ್ಚಳಿಯದಂತೆ ಹಿಂದೂ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದ ಕೀರ್ತಿ ಬಲಿದ್ವೀಪಕ್ಕಿದೆ. ಕೌಂಡಿನ್ಯನೆಂಬುದು ಹಿಂದೂ ರಾಜರ ವಂಶನಾಮಧೇಯವಾಗಿತ್ತು. ದೊಡ್ಡ ದ್ವೀಪಗಳಲ್ಲಿ ಮೊದಲು ಬೌದ್ಧ, ಆ ಮೇಲೆ ಮುಸಲ್ಮಾನ, ಕಡೆಗೆ ಪಾಶ್ಚಾತ್ಯ ಧರ್ಮಗಳು ಕಾಲಿಟ್ಟಾಗ, ಹಿಂದೂ ಧರ್ಮದಲ್ಲಿ ಶ್ರದ್ಧಾಸಕ್ತಿಗಳಿದ್ದವರು ಅವುಗಳನ್ನು ಬಿಟ್ಟು ಇಲ್ಲಿಗೆ ಬಂದು ಸುಖವಾಗಿದ್ದರು. ಈಗ ಇಪ್ಪತ್ತು ವರ್ಷಗಳ ಕೆಳಗೆ ಈ ದ್ವೀಪಗಳಿಗೆ ಭೆಟ್ಟಿ ಕೊಟ್ಟ ಡಾ॥ ಸಿಲ್ವೇನ್ ಲೇವಿ ಎಂಬ ಸಂಸ್ಕೃತ ವಿದ್ವಾಂಸರು ಅಲ್ಲಿ ಇಂದೂ ನಿತ್ಯ ಜೀವನದಲ್ಲಿ ಆಚರಣೆಯಲ್ಲಿರುವ ಭಾರತ ಧರ್ಮವನ್ನು ಕಂಡು ಚಕಿತರಾದರು. ಅಲ್ಲಿ ಈಗಲೂ ಬ್ರಾಹ್ಮಣ, ಶೂದ್ರ ಎಂಬ ಭೇದಗಳಿವೆ.

ಬ್ರಾಹ್ಮಣರು ಸಂಧ್ಯಾವಂದನೆ ಮಾಡುತ್ತಾರೆ. ಪೂರ್ವಾಪರ ಸಂಸ್ಕಾರಗಳಿಗೆ ಪುರಾಣೋಕ್ತ ಮಂತ್ರಗಳನ್ನು ಬಳಸುತ್ತಾರೆ. ಅಲ್ಲಿಯ ಗ್ರಂಥಗಳನ್ನು ಅವರು ಒಟ್ಟುಗೂಡಿಸಿ ಮುದ್ರಿಸಿದ್ದಾರೆ. ಅವುಗಳ ಶೀರ್ಷಿಕೆಗಳಲ್ಲಿ ಕೆಲವನ್ನು ಮಾತ್ರ ಕೆಳಗೆ ಬರೆದಿದೆ— ವೇದಶಾಸ್ತ್ರ, ಅರ್ಘಸಾರ, ಅಷ್ಟಕ ಮಂತ್ರ, ಆತ್ಮರಕ್ಷಾ, ನಾಯುಸ್ತವ, ಪೂಜಾಕ್ರಮ, ಶಿವಸ್ತವ, ಉಮಾಸ್ತವ, ವಿಷ್ಣು ಜಯ, ದೇವಾಗಮ, ಮಾನವಶಾಸನ, ಅರ್ಥ ಕ್ರಮ, ಶಿವಶಾಸನ, ನೀತಿಸಾರ, ರಾಜನೀತಿ, ಶಿವತತ್ವ, ಚತುರಾಶ್ರಮ, ದಶಕಾಂಡ, ಸ್ಮರತಂತ್ರ ಆದಿಪರ್ವ, ರಾಮಕಾಂಡ, ಪಾರ್ಥವಿಜಯ. ಗ್ರಂಥಗಳನ್ನು ಓದಿ ನೋಡಿದರೆ ಇಂದೂ ಭಾರತದಲ್ಲಿ ಪ್ರಚಾರದಲ್ಲಿರುವ ಅನೇಕಾನೇಕ ಸ್ತೋತ್ರಗಳೂ ಪುರಾಣೇತಿಹಾಸಗಳೂ ಈ ಬಲಿದ್ವೀಪವಾಸಿಗಳ ಧರ್ಮಗ್ರಂಥಗಳು. ಆದರೆ ಅವರಿಗೆ ಈ ಭಾಷೆ ಸಂಸ್ಕೃತವೆಂಬ ಕಲ್ಪನೆಯೂ ಇಲ್ಲ. ಎಷ್ಟೋ ತಪ್ಪುಗಳಿವೆ.

***

ಬಲಿದ್ವೀಪವಾಸಿಗಳ ನಾಟ್ಯಗಳೂ ಛಾಯಾನಾಟಕವೇ ಮೊದಲಾದ ಆಟಗಳೂ ಇಂದಿನ ಪಾಶ್ಚಾತ್ಯ ಯಾತ್ರಿಕರ ಮನಸ್ಸನ್ನು ಹೆಚ್ಚಾಗಿ ಆಕರ್ಷಿಸಿವೆ. ಇವುಗಳನ್ನು ವಿವರಗಾಗಿ ಬಣ್ಣಿಸದ ಯಾತ್ರಿಕನೇ ಇಲ್ಲ. ಆದರೆ ಇವುಗಳ ಮೂಲವೂ ಸಂಸ್ಕೃತವೇ ಎಂಬುದನ್ನು ಡಾ|| ಪಿಷೆಲ್ ಮುಂತಾದ ವಿದ್ವಾಂಸರು ನಿಶ್ಚಯಿಸಿದ್ದಾರೆ.

ಇಂಡೋನೇಷಿಯಾ ದ್ವಿಪಗಳಲ್ಲಿ ಕಾಣುವ ಹಿಂದೂಧರ್ಮವೆಂದರೆ ದಕ್ಷಿಣಾಪಥದಲ್ಲಿ ಪೂರ್ವದಲ್ಲಿ ಪ್ರಚಾರದಲ್ಲಿದ್ದ ಶೈವಮತ; ಭಾಗವತಸಂಪ್ರದಾಯವು ಅಲ್ಲಿ ಹರಡಲಿಲ್ಲ; ಬೌದ್ಧಧರ್ಮವು ಮುಂದೆ ಹರಡಿ, ಮುಸಲ್ಮಾನ ಮತವು ಎಲ್ಲವನ್ನೂ ಮುಗಿಸಿತು.

ಹೀಗೆ ಇಂಡೋನೇಷಿಯನ್ ಜನರ ನಡೆ-ನುಡಿಗಳಲ್ಲಿ, ಜನರ ಹಾಗೂ ಊರುಗಳ ಹೆಸರುಗಳಲ್ಲಿ, ರಾಜರ ಶಾಸನಗಳಲ್ಲಿ, ಮನೆ-ಮಠಗಳಲ್ಲಿ, ಗುಡಿಗುಂಡಾರಗಳಲ್ಲಿ, ವಿಚಾರ-ವಿನೋದಗಳಲ್ಲಿ, ಕಾವ್ಯಶಾಸ್ತ್ರಗಳಲ್ಲಿ ಭಾರತೀಯ ಸಂಸ್ಕೃತಿಯ ಪ್ರಾಚೀನ ಇತಿಹಾಸವು ಎತ್ತಿತೋರುತ್ತದೆ. ಸಾಮಾನ್ಯವಾಗಿ ಭಾರತೀಯ ಸಂಸ್ಕೃತಿಯ ಇತಿಹಾಸಕಾರರು ಕೈಬಿಡುವ ಅಧ್ಯಾಯವೇ ಇದಾಗಿದ್ದರೂ ಯಥಾರ್ಥದ ಜಿಜ್ಞಾಸುಗಳಿಗೆ ಇದೇ ಎಲ್ಲಕ್ಕಿಂತಲೂ ದೇದೀಪ್ಯಮಾನವಾದ ಅಧ್ಯಾಯವೆನಿಸೀತು. ಭಾರತಸಂಸ್ಕೃತಿಯ ವೈಶಿಷ್ಟ್ಯವನ್ನು ಇಲ್ಲಿ ಕಾಣುವಷ್ಟು ಸ್ಪಷ್ಟವಾಗಿ ಬೇರೆಡೆ ಕಾಣುವದಿಲ್ಲ. ಭಾರತದ ಅಳರಸರು ಪರಾಕ್ರಮ ಪ್ರದರ್ಶನಕ್ಕಾಗಲಿ, ರಾಜ್ಯಲಾಲಸೆಯಿಂದಾಗಲಿ, ದೇಶಾಂತರ ಸಿರಿಯನ್ನಪಹರಿಸುವಾಸೆಯಿಂದಾಗಲಿ ಯವದ್ವೀಪಕ್ಕೆ ದಂಡಯಾತ್ರೆ ಮಾಡಲಿಲ್ಲ. ಭಾರತದ ಕುಟುಂಬಿಗಳು ಅಲ್ಲಿ ಹೋಗಿ ನೆಲಸಿದ ಮೇಲೆ ಅಲ್ಲಿಯವರೇ ಆಗಿಬಿಟ್ಟರು; ಅಲ್ಲಿಯವರೊಡನೆ ರಕ್ತಸಂಬಂಧವನ್ನೂ ಬೆಳಸಿ ತಮ್ಮ ಸಂಸ್ಕೃತಿಯನ್ನು ಅವರಿಗೆ ಹಂಚಿದಂತೆಯೇ ಅವರ ಸಂಸ್ಕೃತಿಯನ್ನೂ ತಮ್ಮಲ್ಲಿ ಸೇರ್ಪಡೆಮಾಡಿಕೊಂಡರು. ಹೀಗೆ ಪರಸ್ಪರವಿನಿಮಯದಿಂದ ಹೊಸದೊಂದು ವಿಶ್ವ-ಶ್ಲಾಘನೀಯವಾದ ಸಂಸ್ಕೃತಿಯೇ ಹುಟ್ಟಿತು. ಶೈವ, ಬೌದ್ಧ ಧರ್ಮಗಳ ಸಂಪೂರ್ಣಸಮನ್ವಯವನ್ನು ನೋಡುವುದು ನಾವು ಇಂಡೋನೇಷಿಯಾದಲ್ಲಿಯೇ. ಗಾಂಧಾರ, ಗುಪ್ತ, ಆಂಧ್ರ ಶಿಲ್ಪಕಲೆಗಳ ಸಂಗಮವನ್ನು ಕಾಣುವದೂ ಅಲ್ಲಿಯೇ. ಹೊಸ ರಾಮಾಯಣವನ್ನೂ ಹೊಸ ಹೊಸ ನಾಟ್ಯ ನಾಟಕ ಪ್ರಕಾರಗಳನ್ನೂ ಸಂಸ್ಕೃತಮಿಶ್ರವಾದ ನವಸಾಹಿತ್ಯವನ್ನೂ ಸಂದರ್ಶಿಸುವುದಾದರೂ ಅಲ್ಲಿಯೇ. ಭಾರತಸಂಸ್ಕೃತಿಯಂತೆ, ದೇಶ್ಯಸಂಸ್ಕೃತಿಗೆ ಮಾರಕವಾಗದೆ ಪೋಷಕವಾಗಿ ಸಾವಿರಾರು ವರ್ಷ ಸಮನ್ವಯಸೂತ್ರವನ್ನು ಪಾಲಿಸಿದ ಮತ್ತೊಂದು ಸಂಸ್ಕೃತಿ ವಿಶ್ವದಲ್ಲಿಯೇ ವಿರಲ. ಪ್ರಾಚೀನ ಭಾರತಧರ್ಮದ ಈ ಅಂತಸ್ಸತ್ವವು ಇಂದಿನ ಸ್ವತಂತ್ರ ಭಾರತಕ್ಕೂ ಹೆಮ್ಮೆಯನ್ನು ತರುವಂತಹದು; ಸ್ಫೂರ್ತಿದಾಯಕವಾದುದು.*

---

* ಈ ವಿಷಯವಾಗಿ ಹೆಚ್ಚಿನ ವಿವರಗಳನ್ನರಿಯುವ ಕುತೂಹಲವುಳ್ಳವರು ಕೆಳಗಿನ ಪುಸ್ತಕಗಳನ್ನು ನೋಡಬಹುದು:


1 K. A. Nilakantha Sastri: *History of Sri. Vijaya* ಮತ್ತು *South Indian Influences in the Far East.*

2 R. C. Mujumdar: *Hindu Colonies in the Far East.*

3 A. K. Coomaraswamy: *A History of Indian and Indonesian Art.*

4 J. Ph. Vogel: *Buddhist Art in India, Ceylon and Java.*


ಜಗತ್ತು ಕೆಡುತ್ತಿದೆಯೆಂದು ನಮಗೆ ಒಮ್ಮೊಮ್ಮೆ ಅನಿಸುವದು ನಿಜ. ಆದರೆ ಈಗ ಸುದ್ದಿ-ಸಂಗ್ರಹದ ವ್ಯವಸ್ಥೆ ಸುಧಾರಿಸಿರುವುದೇ ಅದಕ್ಕೆ ಕಾರಣವಾಗಿರಲೂ ಬಹುದು. —ಅಜ್ಞಾತ

# ಬೆಲೆಗಳ ಏರಿಳಿತ ಮತ್ತು ಅದರ ಪರಿಣಾಮ

**ಕೆಲ ತಿಂಗಳುಗಳಿಂದ ಭಾರತದಲ್ಲಿ ಸರಕುಗಳ ಬೆಲೆಗಳು ತಗ್ಗುತ್ತಿವೆ. ಅದರಿಂದ ಕೆಲ ವರ್ಗಗಳಿಗೆ ಈಗಲೇ ಹಾನಿ ತಟ್ಟುತ್ತಿದೆ. ಬೆಲೆಗಳು ಏಕೆ ಏರಿಳಿಯುತ್ತವೆ ಮತ್ತು ತೀಕ್ಷ್ಣ ಏರಿಳಿಕೆಗಳು ಇಡಿ ಸಮಾಜಕ್ಕೇ ಹೇಗೆ ಹಾನಿಕರ ಎಂಬುದನ್ನು ಇಲ್ಲಿ ನೋಡಿರಿ. . . .**

ಲೇಖಕರು: ಶ್ರೀ ಬಿ. ಎಂ. ಎಲ್. ಮೂರ್ತಿ, ಸಹ ಸಂಪಾದಕರು, "ಕಾಮರ್ಸ್", ಮುಂಬಯಿ

ಉಪಯೋಗ ಮತ್ತು ಕೊರತೆ ಇವೆರಡೂ ಅರ್ಥಜಗತ್ತಿನಲ್ಲಿರುವ ಮಹಾ ಶಕ್ತಿಯುತವಾದ ಗುಣಗಳು. ಈ ಮಹಾಶಕ್ತಿ ಸಾಧಾರಣವಾಗಿ ಕಣ್ಣಿಗೆ ಬೀಳುವುದಿಲ್ಲ. ವಸ್ತುಗಳಲ್ಲಿ ಈ ಗುಣಗಳು ಒಟ್ಟು ಸೇರಿಕೊಂಡು ಹೊಸ ಅರ್ಥ ಪ್ರಪಂಚವನ್ನೇ ಸೃಷ್ಟಿಸಿವೆ ಹಾಗೂ ಈ ಪ್ರಪಂಚದ ಬದಲಾವಣೆಯನ್ನೇ ಇವು ಮಾಡುತ್ತಿವೆ. ಇಂದಿನ ಸಂಪತ್‌ಸೃಷ್ಟಿಯ ಮೂಲವನ್ನು ತೋಡಿ ನೋಡಿದಲ್ಲಿ, ಅದರ ತಳದಲ್ಲಿ ಈ ಎರಡು ಗುಣಗಳು ಕಂಡುಬರುತ್ತವೆ.

ಈ ಎರಡು ಗುಣಗಳಲ್ಲಿ ಯಾವದಾದರೂ ಒಂದು ಗುಣ ಲೋಪವಾಗಿದ್ದಲ್ಲಿ, ಇನ್ನೊಂದಕ್ಕೆ ಶಕ್ತಿ ಬರುವದಿಲ್ಲ. ದಾಹವನ್ನು ಅಡಗಿಸುವುದು ನೀರಿನ ಶಕ್ತಿ, ಈ ಶಕ್ತಿ ಅದಕ್ಕೆ ಉಪಯೋಗದ ಗುಣವನ್ನು ಕೊಟ್ಟಿದೆ. ನದಿ ಅಥವಾ ಕೆರೆಯ ಹತ್ತಿರ ನೀರು ಯಥೇಚ್ಛವಾಗಿ ಸಿಗುತ್ತದೆ. ಅದಕ್ಕೆ ಉಪಯೋಗವಿದ್ದರೂ ಅಲ್ಲಿ ಅದು ಕೊರತೆಯಲ್ಲಿಲ್ಲ. ಆದುದರಿಂದ ನೀರಿಗೆ ಬೆಲೆ ಇಲ್ಲ. ಹಾಗೆಯೇ ಮರಳುಕಾಡಿನಲ್ಲಿ ಮರಳು ಯಥೇಚ್ಛವಾಗಿ ಸಿಗುತ್ತದೆ. ಆದರೆ ಅಲ್ಲಿ ಅದರ ಉಪಯೋಗವೇ ಇಲ್ಲ. ಆದುದರಿಂದ ಅದಕ್ಕೆ ಬೆಲೆಯೇ ಇಲ್ಲ. ಅದೇ ಮರಳನ್ನು ಪಟ್ಟಣಗಳಿಗೆ ತಂದರೆ ಅಲ್ಲಿ ಮನೆಕಟ್ಟಲು ಸಾಧಕವಾಗುವ ಉಪಯೋಗ ಹುಟ್ಟುತ್ತದೆ. ಆಗ ಅದಕ್ಕೆ ಅಲ್ಲಿ ಬೆಲೆ ಉಂಟು.

ಉಪಯೋಗ ಮತ್ತು ಕೊರತೆ ಇವೆರಡೂ ಸೇರಿ ವಸ್ತುಗಳಿಗೆ ಜನಜೀವನದಲ್ಲಿ ಬೇಡಿಕೆಯನ್ನು ಹುಟ್ಟಿಸುತ್ತವೆ. ಈ ಬೇಡಿಕೆ ಆ ವಸ್ತುಗಳ ಅವಶ್ಯಕತೆಯನ್ನು ಸೂಚಿಸುತ್ತದೆ. ನಮ್ಮ ದಿನಚರಿಯಲ್ಲಿ ಈ ಅವಶ್ಯಕತೆಯು ಹಣದ ರೂಪದಲ್ಲಿ ವ್ಯಕ್ತಪಡುತ್ತದೆ. ಈ ಹಣದ ರೂಪವನ್ನೇ ನಾವು ಬೆಲೆಯೆಂದು ಕರೆಯುತ್ತೇವೆ. ಅಂದರೆ ಬೇಡಿಕೆಯನ್ನು ರೂಪಾಯಿ, ಆಣೆ, ಪೈಗಳ ಮೂಲಕ ಹೇಳುವುದೇ ಬೆಲೆ. ಒಟ್ಟಿನಲ್ಲಿ ಹೇಳುವದಾದರೆ ಬೆಲೆಗೆ ವಸ್ತುಗಳಲ್ಲಿರುವ ಉಪಯೋಗ ಮತ್ತು ಕೊರತೆಯ ಶಕ್ತಿಗಳೇ ಆಧಾರ.

★

ವಸ್ತುಗಳಿಗೆ ಅವಶ್ಯಕತೆ ಹೆಚ್ಚಿದಷ್ಟೂ ಬೇಡಿಕೆ ಹೆಚ್ಚುತ್ತದೆ. ಬೇಡಿಕೆ ಹೆಚ್ಚಿದಷ್ಟೂ ಬೆಲೆ ಏರುತ್ತದೆ. ಬೆಲೆ ಏರಿದರೆ ಜನಗಳಿಗೆ ಆ ವಸ್ತುಗಳ ಪೂರೈಕೆಯನ್ನು ಮಾಡುವ ಕೆಲಸ ಲಾಭದಾಯಕವಾಗುತ್ತದೆ. ಈ ಲಾಭ ಹೆಚ್ಚಾದಷ್ಟೂ ವಸ್ತುವಿನ ಪೂರೈಕೆ ಮಾಡುವ ಆತುರ ಹೆಚ್ಚಾಗುತ್ತದೆ. ಈ ಆತುರ ಮತ್ತು ಲಾಭದ ಆಶೆಗಳೆರಡೂ ಸೇರಿ, ಜನರ ಆಸಕ್ತಿ, ಮನ, ಧನ, ಹೊತ್ತು, ಕ್ರಿಯೆ ಮತ್ತು ಸಾಧನಗಳನ್ನು ಬೆಲೆ ಹೆಚ್ಚಿರುವ ಪದಾರ್ಥಗಳ ತಯಾರಿಕೆ ಕಡೆಗೆ ಎಳೆಯುತ್ತವೆ. ಈ ತಯಾರಿಕೆಯಿಂದ ದೇಶದ ಸಂಪತ್ತು ಹೆಚ್ಚುತ್ತದೆ. ಈ ಸಂಪತ್ತು ಬೆಳೆದಂತೆ ಜನಗಳಿಗೆ ಹಣ ಸಿಕ್ಕುಕೊಳ್ಳುವ ಶಕ್ತಿಯನ್ನು ಹೆಚ್ಚಿಸುತ್ತದೆ. ಹಣ ಸಿಕ್ಕಷ್ಟು ಅವರ ಜೀವನದ ಮಟ್ಟ ಹೆಚ್ಚುತ್ತದೆ. ಈ ಮಟ್ಟ ಏರಿದಷ್ಟೂ ಪದಾರ್ಥಗಳ ಬೇಡಿಕೆ ಹೆಚ್ಚುತ್ತದೆ. ಈ ಬೇಡಿಕೆ ಹೆಚ್ಚಾದರೆ, ಬೆಲೆ ಏರುತ್ತದೆ. ಬೆಲೆ ಏರಿದರೆ ತಯಾರಿಕೆ ಹೆಚ್ಚಾಗುತ್ತದೆ. ಹೀಗೆ ಒಂದರ ಅಭಿವೃದ್ಧಿಯು ಇನ್ನೊಂದರ ಅಭಿವೃದ್ಧಿಗೆ ಕಾರಣವಾಗಿ ಈ ಕಾರಣದ ಸರಪಳಿಯು ವರ್ತುಲಾಕಾರದಲ್ಲಿ ಬೆಳೆಯುತ್ತದೆ. ಇದಕ್ಕೆ ಅಭಿವೃದ್ಧಿಚಕ್ರವೆಂದು ಹೇಳುವುದು ವಾಡಿಕೆ.

ಈ ಅಭಿವೃದ್ಧಿ ಚಕ್ರದ ಬೆಳವಣಿಗೆಗೆ ಒಂದು ಮಿತಿ ಇದೆ. ಈ ಮಿತಿ ಮೀರಿದರೆ, ಚಕ್ರವು ವಿಷಮ ಚಕ್ರವಾಗುತ್ತದೆ. ವಿಷಮಚಕ್ರದ ಸರಪಳಿ ಪ್ರಾರಂಭವಾದರೆ ದೇಶದ ಕ್ಷೇಮಕ್ಕೆ ಹಾನಿಕರ. ಈ ಸರಪಳಿಯ ಸೃಷ್ಟಿ ಹೀಗಿದೆ. ಬೆಲೆಗಳು ಬಹಳ ಹೆಚ್ಚಾದರೆ, ಆಗ ಆ ವಸ್ತುಗಳಿಗೆ ಬೇಡಿಕೆ ಇಲ್ಲವಾಗುವದು. ಬೇಡಿಕೆ ಇಲ್ಲದಿದ್ದರೆ ಬೆಲೆಗಳು ಇಳಿಯುವವು. ಬೆಲೆಗಳು ಇಳಿದರೆ ತಯಾರಿಕೆ ಲಾಭದಾಯಕವಾಗುವದಿಲ್ಲ. ಆದುದರಿಂದ ತಯಾರಿಕೆಯನ್ನು ತಗ್ಗಿಸಬೇಕಾಗುತ್ತದೆ. ಹೀಗೆ ತಗ್ಗಿಸಿದಾಗ ಜನಗಳನ್ನು ಕೆಲಸದಿಂದ ತೆಗೆಯಬೇಕಾಗುತ್ತದೆ. ಅವರನ್ನು ಹಾಗೆ ತೆಗೆದರೆ ಅವರ ಸಂಪಾದನೆ ನಿಲ್ಲುತ್ತದೆ. ಅವರಲ್ಲಿ ಹಣವಿಲ್ಲದೆ ಪದಾರ್ಥಗಳಿಗೆ ಬೇಡಿಕೆ ಇನ್ನಷ್ಟು ತಗ್ಗುತ್ತದೆ. ಹೀಗೆ ತಗ್ಗಿದಾಗ ಬೆಲೆ ಇಳಿದು ಪುನಃ ನಿರುದ್ಯೋಗ ಬೆಳೆದು ವಿಷಮ ಚಕ್ರವು ತೀಕ್ಷ್ಣವಾಗುತ್ತದೆ. ಇದು ತೀಕ್ಷ್ಣವಾದಾಗ ಆರ್ಥಿಕ ಸ್ಥಿತಿಯು ಬಹಳ ಕೆಟ್ಟು ಜನರಲ್ಲಿ ಬಡತನ ಹೆಚ್ಚಾಗಿ ದೇಶದ ಪೀಡೆಗೆ ಕಾರಣವಾಗುತ್ತದೆ.

ಒಟ್ಟಿನಲ್ಲಿ ಯಾವ ಉಪಯೋಗ ಮತ್ತು ಕೊರತೆ ಸೇರಿ ಅಭಿವೃದ್ಧಿಚಕ್ರವನ್ನು ಬೆಳಸಿದವೋ ಅವೇ ಗುಣಗಳು ಆ ಅಭಿವೃದ್ಧಿಚಕ್ರವನ್ನು ಮಿತಿಮೀರುವಂತೆ ತಿರುಗಿಸಿ, ವಿಷಮ ಚಕ್ರದ ಆಟಕ್ಕೆ ದಾರಿಕೊಡುತ್ತವೆ. ಈ ವಿಷಮ ಚಕ್ರದ ಪರಿಣಾಮದಿಂದ ಉದ್ದಿಮೆಗಳು ಕ್ಷಯಿಸುವದು, ವರ್ತಕರು ದಿವಾಳಿಗಳಾಗುವದು, ಬ್ಯಾಂಕುಗಳು ಮುಳುಗುವದು, ನಿರುದ್ಯೋಗ ಇವುಗಳ ಬಾಧೆಯು ಜಾಸ್ತಿಯಾಗಿ ಆರ್ಥಿಕ ಸ್ಥಿತಿಯು ದುಃಖಮಯವಾಗುವದು. ಇದನ್ನು ತಪ್ಪಿಸುವದೇ ಇಂದಿನ ಸರಕಾರಗಳ ಮುಖ್ಯ ಕೆಲಸವಾಗಿದೆ. ಈ ಕೆಲಸದ ಧ್ಯೇಯ ಅಭಿವೃದ್ಧಿಚಕ್ರವನ್ನು ಹೆಚ್ಚು ಬೆಳಿಯಿಸದೇ, ತಕ್ಕ ಸ್ಥಿತಿಯಲ್ಲಿಟ್ಟಿರುವುದೇ ಆಗಿದೆ. ಈ ಧ್ಯೇಯವನ್ನು ಸಾಧಿಸಬೇಕಾದರೆ, ಬೆಲೆಗಳನ್ನು ಸ್ಥಾಯಿಯಲ್ಲಿರುವಂತೆ ನೋಡಿಕೊಳ್ಳಬೇಕು. ಅಂದರೆ ಬೆಲೆಗಳು ಅಭಿವೃದ್ಧಿ ಚಕ್ರದ ಸ್ಥಿತಿಯನ್ನು ತೋರಿಸುವ ಅಳತೆಕಡ್ಡಿಯಾಗುತ್ತವೆ. ಥರ್ಮಾಮೀಟರ್ ದೇಹದ ಶಾಖವನ್ನು ತೋರಿಸುವಂತೆ, ಬೆಲೆಗಳು ದೇಶದ ಆರ್ಥಿಕ ಸೌಖ್ಯದ ಸ್ಥಿತಿಯನ್ನು ತೋರಿಸುತ್ತವೆ.

★

ಆರ್ಥಿಕ ಸೌಖ್ಯವು ಅಭಿವೃದ್ಧಿಚಕ್ರದ ಬೆಳವಣಿಗೆಯಿಂದ ಹುಟ್ಟುತ್ತದೆ. ಈ ಬೆಳವಣಿಗೆ ಎರಡು ಕ್ಷೇತ್ರಗಳಲ್ಲಿ ಆಗುತ್ತದೆ; ಒಂದು, ಭೂಮಿಯ ಮೂಲಕ; ಎರಡು, ಉದ್ದಿಮೆಗಳ ಮೂಲಕ. ಭೂಮಿಯಿಂದ ಬೆಳೆ ಮತ್ತು ಖನಿಜಗಳ ಸಂಪತ್ತನ್ನು ಪಡೆಯಬಹುದು. ಈ ಸಂಪತ್ತನ್ನೇ ಉದ್ದಿಮೆಗಳಿಗೆ ಆಧಾರವನ್ನಾಗಿ ಮಾಡಿಕೊಂಡು, ಉದ್ದಿಮೆಗಳನ್ನು ಹೆಚ್ಚಿಸಬಹುದು.

ಬೆಳೆಗಳಲ್ಲಿ ಎರಡು ವಿಶಾಲವಾದ ಪಂಗಡಗಳಿವೆ. ಒಂದನೆಯದು ಆಹಾರ ಧಾನ್ಯಗಳು. ಎರಡನೆಯದು ರೊಕ್ಕದ ಬೆಳೆಗಳು. ಆಹಾರ ಧಾನ್ಯಗಳಲ್ಲಿ ಭತ್ತ, ರಾಗಿ, ಜೋಳ, ಗೋಧಿ ಇವು ಮುಖ್ಯವಾದವು. ರೊಕ್ಕದ ಬೆಳೆಗಳಲ್ಲಿ ಹತ್ತಿ, ಸಣಬು, ಕಬ್ಬು, ಎಣ್ಣೆಕಾಳು ಇವೇ ಪ್ರಾಮುಖ್ಯವಾದವು. ಈ ಧಾನ್ಯಗಳಿಗೆ ಬೇಡಿಕೆಯ ಮೇಲೆ ಬೆಲೆಗಳು ನಿಲ್ಲುತ್ತವೆ. ಅಂದರೆ ಬೇಡಿಕೆ ಯಾವ ಧಾನ್ಯಕ್ಕೆ ಹೆಚ್ಚುತ್ತಿದೆಯೋ ಆ ಧಾನ್ಯದ ಬೆಲೆ ಏರುತ್ತದೆ. ಆಗ ರೈತರು ಆ ಧಾನ್ಯವನ್ನೇ ಬೆಳೆಯಲು ತೊಡಗುತ್ತಾರೆ. ಈ ಕಾರಣದಿಂದ

ಭೂಭಾಗಗಳು ಬೆಳೆಯಿಂದ ಬೆಳೆಗೆ ವರ್ಷ ವರ್ಷವೂ ಬದಲಾಯಿಸುತ್ತಿರುತ್ತವೆ. ಈ ಬದಲಾವಣೆಯಂತೆ ಪೂರೈಕೆಯೂ ಪೂರೈಕೆಯಂತೆ ಬೆಲೆಯ ಬದಲಾವಣೆಗಳೂ ಆಗುತ್ತವೆ. ಬೆಲೆಗಳು ಏರಿದಾಗ ರೈತರಿಗೆ ಹೆಚ್ಚು ಹಣವೂ ಇಳಿದಾಗ ಕಡಿಮೆ ಹಣವೂ ಬರುತ್ತದೆ. ಇದರಂತೆ ಅವರ ಆದಾಯದಲ್ಲಿ ಅಭಿವೃದ್ಧಿಚಕ್ರ ಮತ್ತು ವಿಷಮಚಕ್ರದ ಸುಳಿಗಳು ಒದಗಿ ವಿಶೇಷ ಸಂತೋಷ, ಸುಖ ಮತ್ತು ದುಃಖದ ನೋವನ್ನು ಅನುಭವಿಸುತ್ತಾರೆ.

ರೈತರ ಸುಖದುಃಖಗಳು ಅವರಲ್ಲಿಯೇ ನಿಲ್ಲು-ವದಿಲ್ಲ. ಅವುಗಳು ಉದ್ದಿಮೆಗಳಿಗೂ ತಗಲುತ್ತವೆ. ಒಂದು ಉದಾಹರಣೆಯಿಂದ ಇದನ್ನು ವಿಶದಪಡಿಸಬಹುದು. ಯಾವದಾದರೂ ಒಂದು ವರ್ಷದಲ್ಲಿ ಭತ್ತಕ್ಕೆ ಬೆಲೆ ಜಾಸ್ತಿಯಾದರೆ ಆ ವರ್ಷ ಭೂಮಿಯನ್ನು ಭತ್ತದ ಬಿತ್ತನೆಗಾಗಿ ಉಪಯೋಗಿಸುವುದು ಸಹಜ. ಹೀಗೆ ಉಪಯೋಗಿಸುವಾಗ, ಕಬ್ಬಿನ ಬಿತ್ತನೆಯ ಪ್ರದೇಶ ತಗ್ಗುತ್ತದೆ. ಇದರಿಂದ ಕಬ್ಬಿನ ಬೆಳೆ ಕಡಿಮೆಯಾಗುತ್ತದೆ. ಕಬ್ಬು ಸಕ್ಕರೆ ಕಾರ್ಖಾನೆಗಳಿಗೆ ಅಗತ್ಯವಾಗಿ ಬೇಕಾದ ಪದಾರ್ಥ. ಅವು ಆತುರತೆಯಿಂದ ಕಬ್ಬನ್ನು ಕೊಳ್ಳಲು ಹೋಗುತ್ತವೆ. ಆಗ ಕಬ್ಬಿನ ಬೆಲೆ ಏರುತ್ತದೆ. ಕಬ್ಬಿನ ಬೆಲೆ ಎದ್ದರೆ ಸಕ್ಕರೆಯ ತಯಾರಿಕೆಗೆ ಖರ್ಚು ಹೆಚ್ಚುತ್ತದೆ. ಅದರಿಂದ ಸಕ್ಕರೆಯ ಬೆಲೆ ಹೆಚ್ಚುತ್ತದೆ. ಸಕ್ಕರೆ ಬೆಲೆಹೆಚ್ಚಿದರೆ ಅನೇಕ ಸಕ್ಕರೆ ಕಾರ್ಖಾನೆಗಳು ಸಕ್ಕರೆಯನ್ನು ಇನ್ನೂ ಹೆಚ್ಚು ತಯಾರಿಸಲು ಬೇಕಾದ ಮಾರ್ಗಗಳನ್ನು ಹಿಡಿಯುತ್ತವೆ. ಒಟ್ಟಿನಲ್ಲಿ ಸಕ್ಕರೆ ಪೂರೈಕೆ ಬೇಡಿಕೆಗಿಂತ ಜಾಸ್ತಿಯಾಗುತ್ತದೆ. ಆಗ ಸಕ್ಕರೆಗೆ ಗಿರಾಕಿ ತಗ್ಗಿ ಬೆಲೆ ತಗ್ಗುತ್ತದೆ. ಬೆಲೆತಗ್ಗಿದಾಗ ಆದಾಯ ಕಡಿಮೆಯಾಗಿ ನಷ್ಟಕ್ಕೆ ಗುರಿಯಾಗಿ ತೊಂದರೆಗೀಡಾಗುತ್ತವೆ. ಆಗ ಸಕ್ಕರೆ ತಯಾರಿಕೆ ಕೆಲವು ಸಣ್ಣ ದಕ್ಷತೆಯಿಲ್ಲದಿರುವ ಕಾರ್ಖಾನೆಗಳಲ್ಲಿ ನಿಂತು, ಅಲ್ಲಿನ ಕೆಲಸಗಾರರಿಗೆ ಕೆಲಸವಿಲ್ಲದೆಹೋಗುವದು. ಇದರಿಂದ ಆರ್ಥಿಕ ಸ್ಥಿತಿ ಕೆಟ್ಟು ಜನಸಾಮಾನ್ಯಕ್ಕೆ ತೊಂದರೆಯಾಗುತ್ತದೆ.

## ಬೆಲೆಗಳ ಓಟದಲ್ಲಿ ರೈತನಿಗೆ ಸೋಲಾಗುತ್ತಿದೆ




ಸ್ವಾತಂತ್ರ್ಯಾನಂತರ ಸಾಮಾನ್ಯವಾಗಿ ಎಲ್ಲ ಸರಕುಗಳ ಬೆಲೆ ಏರಿದ ಸರಾಸರಿ ಕ್ರಮವನ್ನೂ ಆಹಾರ ವಸ್ತುಗಳ ಬೆಲೆ ಏರಿದ ರೀತಿಯನ್ನೂ ಇದು ತೋರಿಸುತ್ತದೆ. ೧೯೪೮ ರಿಂದ ೧೯೫೧ ಆದಿಯ ವರೆಗೂ ಬೆಲೆಗಳ ಏರಾಟಿಕೆಯಲ್ಲಿ ಆಹಾರ ಬೆಳೆಯುವ ರೈತನೇ ಗೆಲ್ಲುತ್ತ ಬಂದನು. ಅನಂತರ ಬೆಲೆಗಳು ಇಳಿಯತೊಡಗಿದಾಗ ಮಾತ್ರ ಅವನೇ ಸೋಲುತ್ತ ಬಂದಿದ್ದಾನೆ. ರೈತನು ತನ್ನ ಉತ್ಪತ್ತಿಗಳನ್ನು ಕಡಿಮೆ ಬೆಲೆಗೆ ಮಾರಿ ತನಗೆ ಬೇಕಾದ ಸರಕುಗಳನ್ನು ಹೆಚ್ಚು ಬೆಲೆಗೆ ಕೊಳ್ಳುವ ಪ್ರಸಂಗ ಬಂದಿದೆ. ಅಂದರೆ ಈಗ ಅಷ್ಟೇ ಸರಕು ಕೊಳ್ಳಲು ರೈತನು ಹೆಚ್ಚು ಧಾನ್ಯ ಮಾರಬೇಕಾಗುವದು. ಇದು ಹೀಗೇ ಸಾಗಿದರೆ ರೈತನ ಕೊಳ್ಳುವ ಶಕ್ತಿ ಇಳಿದು ಅವನು ಬಟ್ಟೆ ಮೊದಲಾದ ಉದ್ದಿಮೆಗಳ ಉತ್ಪತ್ತಿಗಳನ್ನು ಈಗಿನಷ್ಟು ಕೊಳ್ಳಲು ಅಸಮರ್ಥನಾಗುವನು. ಆಗ ಉದ್ದಿಮೆ ರಂಗದಲ್ಲೂ ಮುಗ್ಗಟ್ಟು ಹೆಚ್ಚುವದು.

ಮೇಲೆ ಹೇಳಿದ ಭೂಕ್ಷೇತ್ರದಲ್ಲೂ ಮತ್ತು ಉದ್ದಿಮೆ ಕ್ಷೇತ್ರಗಳಲ್ಲೂ ಆಗುವ ಬದಲಾವಣೆಗಳು ಕಬ್ಬು ಮತ್ತು ಸಕ್ಕರೆ ಉದ್ದಿಮೆಗೆ ಮಾತ್ರ ಸೇರಿದ್ದು ಇಂಥಾ ಬದಲಾವಣೆಗಳು ಹತ್ತಿ ಬೆಳೆ ಮತ್ತು ಅದರಿಂದಾಗುವ ಬಟ್ಟೆ ಉದ್ದಿಮೆಯಲ್ಲಿಯೂ ಎಣ್ಣೆ ಕಾಳು ಮತ್ತು ಎಣ್ಣೆ ತೆಗೆಯುವ ಉದ್ದಿಮೆಗಳಲ್ಲಿಯೂ ಕಬ್ಬಿಣದ ಅದಿರು ಮತ್ತು ಕಬ್ಬಿಣದ ಮತ್ತು ಉಕ್ಕಿನ ತಯಾರಿಕೆಯಲ್ಲಿಯೂ ಹಾಗೂ ಇಂಥಾ ನೂರಾರು ಕ್ಷೇತ್ರಗಳಲ್ಲಿ ನೂರಾರು ವಿಧಗಳಿಂದ ಆಗುತ್ತಿರುತ್ತವೆ. ಈ ಬದಲಾವಣೆಗಳೆಲ್ಲಾ ಬೆಲೆಗಳ ಏರಿಳಿತಗಳಲ್ಲಿ ಪ್ರತಿಬಿಂಬಿಸುತ್ತವೆ. ಈ ಪ್ರತಿಬಿಂಬದಿಂದ ಆಯಾ ಕ್ಷೇತ್ರಗಳ ಸುಖದುಃಖ ಪರಿಸ್ಥಿತಿಯು ತಿಳಿಯುತ್ತದೆ. ಸರಿಯಾದ ಪರಿಸ್ಥಿತಿಯು ಪ್ರತಿಬಿಂಬಿಸಿದರೆ ಸರಿಯಾದ ಪರಿಹಾರವನ್ನು ಒದಗಿಸಬಹುದು. ಈ ಪ್ರತಿಬಿಂಬವು ಸರಿಯಾಗಿರಬೇಕಾದರೆ ಪ್ರತಿ ಕ್ಷೇತ್ರದಲ್ಲಿಯೂ ಅಂಕಿ ಅಂಶಗಳ ತಪಶೀಲುಗಳು ಸಮಗ್ರವಾಗಿರಬೇಕು. ಇವುಗಳಲ್ಲಿ ಕುಂದಿದ್ದರೆ ಪ್ರತಿಬಿಂಬವು ಕುಂದಿನಿಂದ ಕೂಡಿರುತ್ತದೆ. ಆಗ ತೆಗೆದುಕೊಂಡ ಪರಿಹಾರಕ್ರಮವೂ ತಪ್ಪಾಗುತ್ತದೆ. ಇಂದು ಸರಕಾರದ ಆಡಳಿತದಲ್ಲಿ ಕುಂದು ಕೊರತೆಗಳು ಕಂಡುಬಂದರೆ, ಅದಕ್ಕೆ ಸರಿಯಾದ ಅಂಕಿ ಮತ್ತು ಅಂಶಗಳ ಜಮಾವಣೆ ಇಲ್ಲದಿರುವುದು ಒಂದು ಮುಖ್ಯ ಕಾರಣ.

★

ಬೆಲೆಗಳಲ್ಲಿ ಏರಿಳಿತಗಳಿಲ್ಲದೆ ಸ್ಥಾಯಿಯಲ್ಲಿದ್ದರೆ ಜನಜೀವನಕ್ಕೆ ಸೌಖ್ಯವೆಂದು ಮೊದಲೇ ಹೇಳಿದೆ. ಈಗ ಈ ಸ್ಥಾಯಿಯ ವಿಚಾರದಲ್ಲಿ ಎರಡು ಮಾತನ್ನು ಇಲ್ಲಿ ಹೇಳುವುದು ಅವಶ್ಯಕ. ಬೆಲೆಗಳಿಗೆ ಮೇಲ್ಮಟ್ಟ ಮತ್ತು ಕೆಳಮಟ್ಟಗಳಿವೆ. ಈ ಮಟ್ಟಗಳೊಳಗೆ ಒಂದು ವಸ್ತುವಿನ ಬೆಲೆಯು ನಿಧಾನವಾಗಿ ಏರಿಳಿತಗಳನ್ನು ಅನುಭವಿಸಿದರೆ ಆಗ ಆ ಬೆಲೆ ಸ್ಥಾಯಿಯಲ್ಲಿದೆಯೆಂದು ಹೇಳುವುದು ವಾಡಿಕೆ. ಒಂದು ವಸ್ತುವಿನ ಮೇಲ್ಮಟ್ಟ ಆ ವಸ್ತುವನ್ನು ಅಪೇಕ್ಷಿಸುವ ಒಂದು ಸಾಮಾನ್ಯ ಗುಂಪಿನ ಕೊಳ್ಳುವ ಶಕ್ತಿಯಿಂದ ನಿರ್ಧಾರವಾಗುತ್ತದೆ. ಆ ವಸ್ತುವಿನ ಕೆಳಮಟ್ಟ ಅದರ ತಯಾರಿಕೆಗೆ ಬರುವ ಖರ್ಚಿನಿಂದ ನಿರ್ಧಾರವಾಗುತ್ತದೆ.

ಒಂದು ಉದಾರಣೆಯಿಂದ ಇದನ್ನು ವಿವರಿಸಬಹುದು. ಬಂಗಾಲದಲ್ಲಿ ಒಂದು ಮಣ ಸಣಬನ್ನು ಬೆಳೆಯುವದಕ್ಕೆ ರೈತರಿಗೆ ೧೮ ರೂಪಾಯಿ ಖರ್ಚಾಗುತ್ತದೆ. ಈ ಖರ್ಚಿನಲ್ಲಿ ನೆಲವನ್ನು ಊಳುವದು, ಸಣಬಿನ ಕಾಳನ್ನು ಕೊಳ್ಳುವದು, ಬಿತ್ತುವದು, ಗೊಬ್ಬರ ಹಾಕುವದು, ಕಳೆ ಕೀಳುವದು, ನೀರು ಹಾಯಿಸುವದು, ನೇಗಿಲು, ಎತ್ತು ಮತ್ತು ಇತರ ಉತ್ತು ಬಿತ್ತುವ ಸಲಕರಣೆಗಳ ಬಗ್ಗೆ ಮಾಡಿದ ಖರ್ಚು, ಆಗಾಗ ಕೂಲಿ ಆಳುಗಳನ್ನೂ ನೇಮಿಸುವದು, ಸಣಬನ್ನು ಕೊಯ್ಯು

ವದು, ಅದನ್ನು ನೀರಿನಲ್ಲಿ ನೆನೆಸುವದು, ಅದರ ಹೊಟ್ಟನ್ನು ತೆಗೆದು ಅದನ್ನು ಜಜ್ಜಿ ಸಣಬಿನ ದಾರ ವನ್ನು ಮಾಡುವದು ಮತ್ತು ಕಟ್ಟುಗಳನ್ನಾಗಿ ಕಟ್ಟಿ ಪೇಟೆಯ ಮಾರಾಟಕ್ಕೆ ಸಿದ್ಧಪಡಿಸುವದು ಇನ್ನೂ ಇತರ ಸಣ್ಣಪುಟ್ಟ ಖರ್ಚು ಸೇರುತ್ತದೆ. ಅದನ್ನು ಮಾರಿದಾಗ ಈ ೧೮ ರೂಪಾಯಿ ಗಿಂತ ಎಷ್ಟು ಹೆಚ್ಚು ಹಣ ಬಂದರೆ ಅದೆಲ್ಲಾ ರೈತನ ಲಾಭ. ಇದಕ್ಕಿಂತ ಕೆಳಗೆ ಮಾರಿದರೆ ಹಾಗೆ ಕೆಳ ಗಿಳಿದಷ್ಟು ಅವನಿಗೆ ನಷ್ಟ. ಅವನು ಸಣಬನ್ನು ತಯಾರಿಸಬೇಕಾದರೆ ಕಡೆಪಕ್ಷ ಮಣ ೧ ಕ್ಕೆ ೧೮ ರೂಪಾಯಿಯಾದರೂ ಬರಬೇಕು. ಒಂದು ವರ್ಷ ದಲ್ಲಿ ಬೆಳೆದ ಸಣಬು ಸಣಬಿನ ಗಿರಣಿಗಳಿಗೆ ಬೇಕಾ ಗುವ ಮೊತ್ತಕ್ಕಿಂತ ಕಡಿಮೆಯಾದಲ್ಲಿ, ಅಂದರೆ ಕೊರತೆಯಾದರೆ, ಸಣಬಿನ ಬೆಲೆ ಏರುತ್ತದೆ. ಅದು ಪ್ರಾಯಶಃ ರೂ.೩೦ ರವರೆಗೂ ಹೋದರೆ ಸಣಬಿನ ಗಿರಣಿಗಳು ಆ ಸಣಬನ್ನು ಕೊಳ್ಳಲು ಯೋಚನೆ ಮಾಡಬೇಕಾಗುತ್ತದೆ. ಅದಕ್ಕಿಂತ ಮೇಲೆ ಹೋದರೆ ಅವು ಕೊಳ್ಳುವದನ್ನು ನಿಲ್ಲಿಸುವವು. ಏಕೆಂದರೆ ಈ ದರದಲ್ಲಿ ಸಣಬಿನ ಚೀಲಗಳನ್ನು ಮಾಡಿದರೆ ಆ ಚೀಲಗಳ ಬೆಲೆ ಬಹಳವಾಗಿ ಏರಿ, ಅವುಗಳನ್ನು ಚೀಲಬೇಕಾದವರು ಕೊಳ್ಳುವುದಿಲ್ಲ. ಆದುದರಿಂದ ಸಣಬನ್ನು ಮಣ ೧ಕ್ಕೆ ರೂ. ೩೦ರಲ್ಲಿ ಕೊಳ್ಳುವದು ಲಾಭದಾಯಕವಾಗುವುದಿಲ್ಲ. ಈ ದರ ಆಗ ಮೇಲ್ಮಟ್ಟವಾಗುತ್ತದೆ. ಅಂದರೆ ಗಿರಣಿ ಗಳಿಗೆ ಸಣಬನ್ನು ರೂ ೧೯೯ ರಲ್ಲಿ ಕೊಳ್ಳುವದು ಬಹಳ ಲಾಭಕರ. ಇದಕ್ಕಿಂತ ಮೇಲೆ ದರ ಏರಿ ದಷ್ಟೂ ಗಿರಣಿಗಳ ಲಾಭ ಕಡಿಮೆಯಾಗುತ್ತ ಹೋಗುತ್ತದೆ. ರೂ. ೩೦ ಕ್ಕೆ ಏರಿದಾಗ ಅವು ಗಳಿಗೆ ಲಾಭವೇ ಬರುವದಿಲ್ಲ. ರೈತರಿಗೂ ಗಿರಣಿಗಳಿಗೂ ಬೆಲೆ ಲಾಭದಾಯಕವಾಗಿರಬೇಕಾ ದರೆ ರೂ. ೨೩ ರಿಂದ ರೂ. ೨೫ ರಲ್ಲಿ ಬೆಲೆಗಳು ಓಡಾಡಬೇಕು. ಆಗ ಸಣಬಿನ ಬೆಲೆಗಳು ಸ್ಥಾಯಿ ಯಲ್ಲಿವೆ ಎಂದು ಹೇಳಬಹುದು. ಹೀಗೆ ಸ್ಥಾಯಿ ಯಲ್ಲಿದ್ದರೆ ಎರಡು ಪಂಗಡಗಳಿಗೂ ಕ್ಷೇಮ. ಸಾಮಾನ್ಯ ಜನರಿಗೂ ಈ ಸ್ಥಾಯಿ ಬೆಲೆಗಳು ನಷ್ಟ ವನ್ನುಂಟುಮಾಡುವದಿಲ್ಲ.

ಗಿರಣಿಗಳಿಗೆ ಸಣಬನ್ನು ಕೊಳ್ಳುವ ಖರ್ಚೇ ಅಲ್ಲ, ಇನ್ನೂ ಇತರ ಖರ್ಚುಗಳಿವೆ. ಸಣಬನ್ನು ಪೇಟೆಗಳಿಂದ ಗಿರಣಿ ಭಾಗಗಳಿಗೆ ತರಲು ರವಾ ನೆಯ ಖರ್ಚು, ಅದನ್ನು ಪಟ್ಟಾಗಿ ನೇಯಲು ಸಿದ್ಧ ಪಡಿಸುವ ಖರ್ಚು, ನೆಯ್ಗೆ ಯಂತ್ರದ ಖರ್ಚು, ಅದಕ್ಕೆ ತಗಲುವ ವಿದ್ಯುಚ್ಛಕ್ತಿ ಮತ್ತು ಕಲ್ಲಿದ್ದ ಲಿನ ಖರ್ಚು, ಕೆಲಸಗಾರರಿಗೆ ಕೊಡುವ ಕೂಲಿ ಮತ್ತು ಸಂಬಳ, ಸಣಬನ್ನು ತಟ್ಟನ್ನಾಗಿ ಮಾಡಲು ಇತರ ಸಣ್ಣ ಖರ್ಚುಗಳು, ಆ ತಟ್ಟನ್ನು ಸರಿಯಾಗಿ ಪ್ಯಾಕಮಾಡಿ ಅದನ್ನು ಮಾ- ರುವ ಸ್ಥಳಗಳಿಗೆ ಕಳಿಸುವ ಖರ್ಚು, ದಲಾಲಿ, ಬಂಡವಲಿನ ಮೇಲಿನ ಬಡ್ಡಿ ಮತ್ತು ಅದರ ಮೇಲ ಮಾಲಕನಿಗೆ ಬೇಕಾದ ಲಾಭ ಇಷ್ಟು ಖರ್ಚುಗಳೂ ಬೆಲೆಯಲ್ಲಿ ಹುಟ್ಟಬೇಕು. ಈಗ ೧೦೦ ಗೋಣಿ ಗಳಿಗೆ ರೂ. ೯೫ ರಂತೆ ಬೆಲೆಯಿದ್ದರೆ ಗಿರಣಿಗಳು ಗೋಣಿಯನ್ನು ತಯಾರಿಸುವುದು ಲಾಭಕರ. ಅದಕ್ಕಿಂತ ಕಡಿಮೆಯಾದರೆ ಅವು ತಯಾರಿಸುವ ದನ್ನು ತಗ್ಗಿಸುತ್ತವೆ ಇಲ್ಲವೆ, ನಿಲ್ಲಿಸುತ್ತವೆ. ಆದು ದರಿಂದ ಗೋಣಿಗಳಿಗೆ ಈ ಮಟ್ಟ ಕನಿಷ್ಠವಾಗು ತ್ತದೆ. ಈ ಮಟ್ಟಕ್ಕಿಂತ ದರ ಹೆಚ್ಚಿದಷ್ಟು ಅವಕ್ಕೆ ಲಾಭಕರ. ಆದರೆ ಸುಮಾರು ರೂ. ೧೨೫ ಕ್ಕೆ ಹತ್ತಿದರೆ ಅವುಗಳಿಗೆ ಬರುವ ಆರ್ಡರುಗಳು ಕಡಿಮೆಯಾಗುತ್ತವೆ. ಆಗ ಗೋಣಿಗಳನ್ನು ಮಾರಲು ಆಗದೆ ತಯಾರಿಕೆ ನಿಲ್ಲಬೇಕಾಗುತ್ತದೆ. ಆದುದರಿಂದ ರೂ. ೧೨೫ ಮೇಲ್ಮಟ್ಟವಾಗುತ್ತದೆ. ಗಿರಣಿಗಳಿಗೂ ಗೋಣಿ ಬೇಕಾದವರಿಗೂ ಲಾಭ ವಿರಬೇಕಾದರೆ, ರೂ. ೧೦೫ ರಿಂದ ರೂ. ೧೧೫ ರ ವರೆಗೆ ಓಡಾಡುತ್ತಿದ್ದರೆ ಎರಡೂ ಪಕ್ಷಕ್ಕೆ ಅಲ್ಲದೆ ಸಣಬಿನ ರೈತನಿಗೂ ಸಾಮಾನ್ಯ ಜನರಿಗೂ ಕ್ಷೇಮ. ಇದೇ ಸ್ಥಾಯಿ ಬೆಲೆ ಎಂದು ಹೇಳ ಬಹುದು. ಈ ಸ್ಥಾಯಿ ಬೆಲೆ ಸಹ ಗಿರಣಿಯಿಂದ ಗಿರಣಿಗೂ ಒಂದು ಕಾಲದಿಂದ ಇನ್ನೊಂದು ಕಾಲಕ್ಕೂ ಬದಲಾವಣೆಯಾಗುತ್ತಿರುತ್ತವೆ. ಆದರೆ ಈ ಬದಲಾವಣೆಗಳು ಹಾನಿಕರವಲ್ಲ.

## ಆಹಾರ ಬೆಳೆಯುವ ರೈತನ ಸ್ಥಿತಿ




ಕಳೆದ ೧೫ ತಿಂಗಳಲ್ಲಿ ಪ್ರಮುಖ ಆಹಾರ ಧಾನ್ಯಗಳಾದ ಗೋದಿ, ಅಕ್ಕಿ, ಜೋಳಗಳ ಬೆಲೆಗಳು ತೀವ್ರವಾಗಿ ಇಳಿದು ರೈತನು ನುಗ್ಗಾ ಗುತ್ತಿದ್ದಾನೆ. ಆದರೆ ಅವನು ಕೊಳ್ಳಬೇಕಾದ ಬಟ್ಟೆಯ ಬೆಲೆ ಇಳಿಯುವ ಬದಲು ಏರುತ್ತಿದೆ ಹತ್ತಿ ಬೆಳೆಯುವವನ ಸ್ಥಿತಿ ಅಷ್ಟು ಕೀಳಿಲ್ಲ. ಬೆಲೆಗಳು ಹೀಗೆ ಅಡ್ಡಾತಿಡ್ಡ ಇಳಿದರೆ ಧಾನ್ಯ ಬೆಳೆಯುವವನು ರೊಕ್ಕದ ಪೈರಿಗೆ ಹೊರಳುವ ಭಯವಿದೆ.

## ರೊಕ್ಕದ ಬೆಳೆಗಳ ಸ್ಥಿತಿ




ಕಳೆದ ೧೫ ತಿಂಗಳಲ್ಲಿ ತಂಬಾಕು ಬೆಳೆಯು ವವನಿಗೂ ಶೇಂಗಾ ಬೆಳೆಯುವವನಿಗೂ ಲಾಭ ದಲ್ಲಿ ಎಂಥ ಅಂತರ ನೋಡಿರಿ. ತಂಬಾಕು ಬೆಳೆಯುವವನಿಗೆ ೧೯೩೯ ರಲ್ಲಿ ಬರುತ್ತಿದ್ದ ಬೆಲೆಗಿಂತ ೧೦-೧೨ ಪಟ್ಟು ಬೆಲೆ ಬರುತ್ತಿದೆ. ಶೇಂಗಾ ಬೆಳೆಯುವವನಿಗೂ ೫-೬ ಪಟ್ಟು ಬರುತ್ತಿದ್ದರೂ ಅವನೀಗ ವೇಗವಾಗಿ ಕಳೆದು ಕೊಳ್ಳುತ್ತಿದ್ದಾನೆ.

---

ಯುದ್ಧ ಕಾಲದಲ್ಲಿ ವಿಪರೀತವಾಗಿ ಉಪಯೋ ಗಕ್ಕೆ ಬರುವ ವಸ್ತುಗಳೆಲ್ಲ ಕೊರತೆಯಲ್ಲಿರುವದ ರಿಂದ ಅವುಗಳ ಬೆಲೆಗಳು ಏರಿ, ಜನರಿಗೆ ತೊಂದರೆ ಯಾಗುತ್ತದೆ. ಆದುದರಿಂದ ಅವುಗಳನ್ನು ಹಿಡಿದು ಇಡುವದಕ್ಕಾಗಿ ನಿಯಂತ್ರಣಗಳನ್ನು ಸರಕಾರವು ಜಾರಿಗೆ ತರುತ್ತವೆ. ಕಳೆದ ಯುದ್ಧದಲ್ಲಿ ಜಾರಿಗೆ ಬಂದ ಅನೇಕ ನಿಯಂತ್ರಣಗಳು ಈಗಾಗಲೆ ಹೋಗಿವೆ. ಈಗ ಉಕ್ಕು, ಸಿಮೆಂಟ, ಬಟ್ಟೆ, ಇನ್ನೂ ಕೆಲವು ವಸ್ತುಗಳ ಮೇಲೆ ನಿಯಂತ್ರಣ ಉಳಿದಿದೆ.

# ಭಾರತದ ಮಹಿಳೆಯರ ಪ್ರಗತಿ
# ಸಾಧಿಸಿದ್ದು ಮತ್ತು ಸಾಧಿಸಬೇಕಾದ್ದು

**ಕಳೆದ ಅರ್ಧ ಶತಮಾನದಲ್ಲಿ ಭಾರತೀಯ ಮಹಿಳೆ ಬಂಧನದಿಂದ ಸ್ವಾತಂತ್ರ್ಯದ ಕಡೆ ಬಹಳ ದೂರ ನಡೆದು ಬಂದಿದ್ದಾಳೆ. ಆದರೆ ಜನ-ಸಾಮಾನ್ಯದ ದೃಷ್ಟಿಯಿಂದ ನೋಡಿದಾಗ ಮಹಿಳೆಯರು ಸಮಾನಾಧಿ-ಕಾರದ ಅರ್ಥವನ್ನು ಸರಿಯಾಗಿ ಮಾಡಿಕೊಂಡಿಲ್ಲ. . .**

ಬರೆದವರು : ಶ್ರೀಮತಿ ಸರೋಜಿನಿ ಮಹಿಷಿ, ಎಂ. ಎ., ಧಾರವಾಡ

ಯಾವದೊಂದು ದೇಶದ ಸಾಮಾಜಿಕ, ರಾಜಕೀಯ, ಆರ್ಥಿಕ ಪ್ರಗತಿಯನ್ನಳೆಯಲು ಅನೇಕ ಪ್ರಮಾಣಗಳನ್ನು ಕೊಡಬಹುದು; ಅವು ಗಳಲ್ಲಿ ಮಹಿಳೆ ಆ ದೇಶದ ಆಯಾ ಕ್ಷೇತ್ರಗಳಲ್ಲಿ ಆಕ್ರಮಿಸಿರುವ ಸ್ಥಾನವೂ ಒಂದು; ಭಾರತೀಯ ಮಹಿಳೆಯರ ಚಳವಳಿಯನ್ನಂತೂ ಇಂದು ಒಪ್ಪುವದು ಅನಿವಾರ್ಯವಾಗಿದೆ, ಅರ್ಥಾತ್ ಚಳವಳಿಯೆಂದೆನ್ನಿಸಿಕೊಳ್ಳುವ ಅವಸ್ಥೆಯನ್ನೂ ಅದು ದಾಟಿದೆಯೆಂದು ಹೇಳಬಹುದು. ೧೯೦೦ ರ ವರೆಗೂ ಭಾರತದ ಮಹಿಳೆಯರು ಸಾಮಾಜಿಕ, ರಾಜಕೀಯ ದಾಸ್ಯಗಳೆರಡರಲ್ಲೂ ಬಂಧಿತರು. ಇಂದು ರಾಜಕೀಯ ಸಮಾನತೆ ಎಲ್ಲೆಡೆಗೆ ಬಂದಿದ್ದರೂ ಮಹಿಳೆಯರ ಪ್ರಪಂಚ ದಲ್ಲಿ ಸಾಮಾಜಿಕ ವಿಷಮತೆಯನ್ನು ಅದಿನ್ನೂ ಹೋಗಲಾಡಿಸಿಲ್ಲ. ಸಾಮಾಜಿಕ ವಿಷಮತೆಯ ನಿರ್ಮೂಲನಕ್ಕೆ ಬೇಕಾದ ಆರ್ಥಿಕ ಸ್ವಾತಂತ್ರ್ಯ, ಬುದ್ಧಿವಿಕಾಸದ ಅವಕಾಶ ಇವುಗಳ ಅಭಾವವೂ ಅದಕ್ಕೆ ಕಾರಣವಾಗಿದೆ: ಬುದ್ಧಿ ಬಲಿಯದ, ಮುಂಬರುವ ಹೊಸ ಪೀಳಿಗೆಯ ಜನ ಇನ್ನೇನಾ-ಗುವದೋ; ಆದರೆ ರಾಜಕೀಯ ದಾಸ್ಯದಲ್ಲಿ ಜೀವನದ ಅರ್ಧ ಭಾಗವನ್ನು ಕಳೆದ ಸಾಮಾನ್ಯ ಜನರಲ್ಲಿ, ರಾಜಕೀಯ ಜಾಗೃತಿಯನ್ನಾಗಲಿ, ಅದರ ಮೂಲಕವಾಗಿ ಬರುವ ಆರ್ಥಿಕ, ಸಾಮಾ ಜಿಕ ಸೌಕರ್ಯಗಳನ್ನಾಗಲಿ ಬಿಂಬಿಸುವದು ಕಠಿಣ; ತಾವು ಹಿಂದುಳಿದ ಜನಾಂಗವೆಂದು ನಂಬಿದ ಹೆಣ್ಣುಮಕ್ಕಳಲ್ಲಿಯಂತೂ ಸರಿಯೇ ಸರಿ. ಇದರ ಒಂದು ಒಳ್ಳೆಯ ನಿದರ್ಶನವನ್ನು ಮತ ದಾನ ಪ್ರಸಂಗದಲ್ಲಿ ಕಾಣಬಹುದು. ಹಳ್ಳಿಗಳಲ್ಲಿ ಗುಡಿಸಲುಗಳಲ್ಲಿ ವಾಸಿಸುವ ಜನ ಮತಗಟ್ಟೆಗೆ ತಾವು ಬರಬೇಕಾದರೆ, ತಮ್ಮೊಡನೆ ಸ್ತ್ರೀಯರನ್ನು ಕರೆತರಲು ಒಪ್ಪುವದಿಲ್ಲ. ಯಾಕೆಂದರೆ ಅವರಿಗೇನೂ ತಿಳಿಯದಂತೆ! ಹೆಣ್ಣುಮಕ್ಕಳೂ ಅದನ್ನು ಒಪ್ಪುತ್ತಾರೆ! ಅಂದರೆ ಅಲ್ಲಿ ವಾಸಿಸುವ ಪುರುಷರಿಗೆ ಯಾವ ರಾಜಕೀಯ ತಿಳಿಯುತ್ತೋ!

ಸಾಮೂಹಿಕವಾಗಿ ಮಹಿಳೆಯರೂ ಕಾರ್ಯ ಕ್ಷಮರೆಂಬುದನ್ನು ಭಾರತೀಯ ಮಹಿಳೆಯರು ಕಳೆದರ್ಧ ಶತಮಾನದಲ್ಲಿ ತೋರಿಸಿಕೊಟ್ಟಿದ್ದಾರೆ. ಕೇವಲ ನಲುವತ್ತು ವರುಷಗಳ ಅವಧಿಯಲ್ಲಿ ಶೈಕ್ಷಣಿಕ, ಸಾಮಾಜಿಕ, ರಾಜಕೀಯ ರಂಗಗಳಲ್ಲಿ ಅವರು ಸಾಧಿಸಿದ ಪ್ರಗತಿಯನ್ನು ನೋಡಿದರೆ ಭಾರತವು ಹಿಂದುಳಿದ ದೇಶವೆಂದು ಯಾರೂ ಹೇಳಲಾರರು! ಭಾರತಕ್ಕೆ ಸ್ವಾತಂತ್ರ್ಯ ಕೊಡಲು ಬ್ರಿಟಿಷರು ಎತ್ತಿದ ಆಕ್ಷೇಪಗಳಲ್ಲಿ ಒಂದು ಕಾಲಕ್ಕೆ ಅಲ್ಲಿಯ ಸ್ತ್ರೀಯರು ಅಜ್ಞಾನಿಗಳೆಂಬುದೂ ಒಂದಾಗಿತ್ತು! ಇಂದು ಸ್ವತಂತ್ರ ಭಾರತದ ಮಹಿಳೆಯರು ಸಾಂಸ್ಕೃತಿಕ ಶಿಷ್ಟಮಂಡಳದ ಮುಖಂಡರಾಗಿ ರಶಿಯಾಕ್ಕೆ ಹೋಗಲೂ ಬಹುದು; ಇಜಿಪ್ತಿನ ಮಹಿಳೆಯರಿಗೆ ರಾಜಕೀಯ ಸಾಮಾಜಿಕ ಸಮಾನಾಧಿಕಾರ ಪ್ರಾಪ್ತಿಯ ಹೋರಾ ಟದಲ್ಲಿ ಸಹಕಾರವನ್ನು ತೋರಿಸಲೂ ಬಹುದು! ರಾಜಕೀಯ ಸಾಮಾಜಿಕ ಕ್ರಾಂತಿಯ ಅವಶ್ಯಕ ತೆಯ ಬೇಡಿಕೆಗಳನ್ನು ಪೂರೈಸುವಲ್ಲಿ ಉಂಟಾಗುವ ಮಾರ್ಪಾಟಿಗೆ, ಕ್ರಮೇಣ ಜನತೆಯೂ ತನ್ನನ್ನು ತಾನೇ ಅಳವಡಿಸಿಕೊಳ್ಳುತ್ತದೆ. ಆದರೆ ಕ್ರಾಂತಿ-ಕಾರಿಗಳಲ್ಲಿ ಮಾತ್ರ ಆತ್ಮವಿಶ್ವಾಸ, ತಾಳ್ಮೆ ಅವಶ್ಯ! ಅವರ ಜೀವನಾವಧಿಯಲ್ಲಿ ಕ್ರಾಂತಿಯ ಇಚ್ಛಿತ ಫಲ ದೊರೆಯದೆ ಹೋಗಬಹುದು, ಇಲ್ಲವೆ ವಿಕೃತ ರೂಪದಲ್ಲಿ ದೊರೆಯಬಹುದು. ಆದರೆ ಕಾಲವುರುಳಿದಂತೆ ಅವರ ಶಾಶ್ವತ ಫಲವನ್ನೂ ಕಾಣುವದು ನಿಶ್ಚಿತ!

* * *

೧೯೫೦ ರಲ್ಲಿ, "ಸ್ತ್ರೀಯರು ಸಾಮಾಜಿಕ ರಾಜಕೀಯ ರಂಗಗಳಲ್ಲಿ ಹೆಚ್ಚು ಅಧಿಕಾರ ಸಂಪಾ ದಿಸಿದ ರಾಷ್ಟ್ರಗಳಲ್ಲಿ" ಭಾರತವು ಮೂರನೆ-ಯದು! ವಿವಿಧ ಪ್ರಾಂತಗಳ ಮತ್ತು ಸಂಸ್ಥಾನ ಗಳ ವಿಧಾನ ಮಂಡಲಗಳಲ್ಲಿ ಭಾರತದಲ್ಲಿ ಒಟ್ಟಿಗೆ ಎಂಬತ್ತು ಜನ ಸದಸ್ಯೆಯರು!

೧೮೮೫ ರಲ್ಲಿ ಸಂಸ್ಥಾಪಿಸಲ್ಪಟ್ಟ ಭಾರತ ರಾಷ್ಟ್ರೀಯ ಕಾಂಗ್ರೆಸ್ಸು ಸ್ತ್ರೀ-ಪುರುಷರನ್ನು ಸದಸ್ಯರನ್ನಾಗಿ ಮಾಡಿಕೊಂಡು ನವಜಾಗೃತಿ ಯನ್ನು ಜನತೆಯಲ್ಲಿ ಬಿತ್ತಿತು. ಕಾಂಗ್ರೆಸ್ಸಿನ ಸದಸ್ಯೆ ಟಾಗೋರ ಮನೆತನದ ಸರಲಾದೇವಿ ಚೌಧುರಾನಿಯವರು ಆಗ ಕರ್ವೆ ವಿಶ್ವವಿದ್ಯಾ-ಲಯದ ಸಿನೇಟ ಸದಸ್ಯೆಯೂ ಆಗಿದ್ದರು. ೧೯೧೪ ರಲ್ಲಿ ಆನಿ ಬೆಸಂಟ ಕಾಂಗ್ರೆಸ್ಸನ್ನು ಸೇರಿದಾಗ ದೇಶ ದಲ್ಲಿಯೇ ಹೊಸ ಚೈತನ್ಯ ತುಂಬಿತು. ಅವರ ಬಂಧನ ದೇಶದ ಮಹಿಳೆಯರನ್ನೇ ಕೆಣಕಿತು. ಅಸಹಕಾರ ಚಳವಳಿಯಲ್ಲಿ ಪುರುಷರೊಡನೆ ಭಾಗವಹಿಸಲು ಅವರೂ ಮುಂದೆ ಬಂದರು. ಆನಿ ಬೆಸಂಟ ಬಂಧನದಿಂದೀಚೆಗೆ ಬಂದಾಗ ಅನೇ ಕರು ಅವರ ಅನುಯಾಯಿಗಳಾದರು. ಭಾರತ ಗೃಹರಕ್ಷಕ ದಲವನ್ನೂ ಅನೇಕ ಮಹಿಳೆಯರು ಸೇರಿದರು. ಕಾಂಗ್ರೆಸ್ಸಿನ ಇತಿಹಾಸದಲ್ಲಿ ಅಧ್ಯಕ್ಷ ರಾದ ಪ್ರಥಮ ಮಹಿಳೆ ಆನಿ ಬೆಸಂಟರೇ ೧೯೧೭ ರಲ್ಲಿ ಕಲಕತ್ತೆಯ ಅಧಿವೇಶನದಲ್ಲಿ! ೧೯೨೫ ರಲ್ಲಿ ಅಖಿಲ ಭಾರತ ಕಾಂಗ್ರೆಸ ಅಧಿವೇಶ-ನದ ಅಧ್ಯಕ್ಷ ಪದವನ್ನು ಅವರೇ ವಹಿಸಿದರು.

೧೯೨೧–೨೨ ರ ಅಸಹಕಾರ ಚಳವಳಿಯಲ್ಲಿ ಸ್ತ್ರೀ-ಯರು ಪ್ರತ್ಯಕ್ಷ ಅಪ್ರತ್ಯಕ್ಷವಾಗಿ ಕೂಡಿಯೇ ಭಾಗವಹಿಸಿದರು. ಜನಸಾಮಾನ್ಯರಿಗಾಗಿ ಅಂದು ಆಗಬೇಕಾದ ರಾಜಕೀಯ ಕಾರ್ಯವೆಂದರೆ, ಸ್ತ್ರೀ-ಯರು ತಮ್ಮ ಹೆಸರುಗಳನ್ನೂ ಮತದಾರ ಯಾದಿ ಯಲ್ಲಿ ಸೇರಿಸುವದು. ೧೯೨೨ ರ ಯಾದಿಯಲ್ಲಿ ಹೆಸರು ಸೇರಿಸಿದರೆ ಮರುವರ್ಷ ಮತದಾನ ಮಾಡಲು ಅನುಕೂಲವಾಗಬಹುದೆಂಬ ದೃಷ್ಟಿ-ಯಿಂದ. ಮತಾಧಿಕಾರವುಳ್ಳ ಸ್ತ್ರೀಯರ ಮನೆ ಮನೆಗೆ ಹೋಗಿ ಪ್ರಚಾರಮಾಡಿ ಬರುವದೂ ಅಂದು ಮಹತ್ವದ ಕೆಲಸವೇ! ಅಂತೂ ೧೯೧೯ ರ ಮೊಂಟಗೋ-ಚೇಮ್ಸ್‌ಫರ್ಡ ಸುಧಾರಣೆಯಲ್ಲಿ ಭಾರತದ ಹತ್ತು ಸಾವಿರ ಮಹಿಳೆಯರು ಮತಾಧಿ-ಕಾರವನ್ನು ಪಡೆದರು. ೧೯೨೩ರಲ್ಲಿ ಅದರ ಪ್ರಯೋ ಗವೂ ಆಯ್ತು! ೧೯೩೦ ರಲ್ಲಿ ಗಾಂಧೀಜಿಯವರ ದಾಂಡೀಯಾತ್ರೆ, ಕರನಿರೋಧಗಳು ಅಸಹಕಾರ ಚಳವಳಿಯಲ್ಲಿ ಮಹಿಳೆಯರಿಗೂ ಆಮಂತ್ರಣ ವಿತ್ತವು; ಅವರೂ ಅಸಂಖ್ಯರಾಗಿ ತಮ್ಮ ಪ್ರತಿಕ್ರಿ-ಯೆಯನ್ನು ತೋರಿಸಿದರು. ಮೂರು ಸಾವಿರಕ್ಕಿಂತ ಮಿಗಿಲಾಗಿ ಸ್ತ್ರೀಯರು ಭಾಗವಹಿಸಿ, ಸೆರೆಮನೆ-ಯನ್ನು ಸೇರಿದರು, ಲಾಠೀಪೆಟ್ಟುಗಳನ್ನು ತಿಂದರು, ಅಪಮಾನವನ್ನು ಸಹಿಸಿದರು, ಪಾನಪ್ರತಿಬಂಧ ದಲ್ಲಿ ಸಿಕ್ಕುಬಿದ್ದು ನ್ಯಾಯಸ್ಥಾನಗಳನ್ನೂ ಸಂದ-ರ್ಶಿಸಿದರು. ಸ್ವಾತಂತ್ರ್ಯಸಿದ್ಧಿಯ ಪಥದಲ್ಲಿ, ಜಾತಿಮತಗಳನ್ನು ಕುರಿತಿದ್ದ ಸ್ತ್ರೀಯರ ಅಂಧ-ಶ್ರದ್ಧೆಗಳು ಅಳಿದುಹೋದವು. 'ಮಾನವ ಜಾತಿ ಯೊಂದು', ಎಂಬ ಭಾವನೆ ಬೇರೂರಿತು. ವ್ಯಕ್ತಿಸುಖವನ್ನು ಬದಿಗಿಟ್ಟು ರಾಷ್ಟ್ರಸೇವೆಯ

ಭಾರವನ್ನು ಯಾರ ಅಗ್ರಹವೂ ಇಲ್ಲದೆ ತಾವೇ ಕೈಕೊಳ್ಳುವಲ್ಲಿ, ಅವರಿಗೊಂದು ಬಗೆಯ ಸಮಾಧಾನ ದೊರೆಯಿತು; ಎಷ್ಟೋ ಸಾಮಾಜಿಕ ಕಾರ್ಯಗಳನ್ನು ಕೈಕೊಂಡು ಪೂರೈಸಬಲ್ಲೆವೆಂಬ ಆತ್ಮವಿಶ್ವಾಸ ಚಿಗುರಿತು; ರಾಷ್ಟ್ರದ ಕಾರ್ಯಕ್ಕಾಗಿ ಆತ್ಮೀಯಭಾವ ತಲೆಯೆತ್ತಿತ್ತು. ಜನಸಾಮಾನ್ಯರಲ್ಲೂ ಅಜ್ಜಿ, ಮಗಳು, ಮೊಮ್ಮಗಳು ಒಂದೇ ಕಾಲದಲ್ಲಿ ಸೆರೆಮನೆಯಲ್ಲಿದ್ದುದನ್ನು ನೋಡಿದರೆ ಈ ಜಾಗೃತಿಯ ಅರ್ಥವಾಗಬಹುದು. ಸ್ವತಂತ್ರ ಭಾರತದಲ್ಲಿ ಬೆಳಕಿಗೆ ಬರಲಿದ್ದ ಎಷ್ಟೋ ಮಗುಗಳು ಸೆರೆಮನೆಯ ಅಂಧಕಾರದಲ್ಲಿಯೇ ಹುಟ್ಟಿದವು. ಚಳವಳಿಗೆ ತೆರೆಯ ಮರೆಯಿಂದಲೂ ಹೊರಗಿನಿಂದಲೂ ಸಹಕಾರ ದೊರೆಯಿತು.

೧೯೩೫ ರ ಇಂಡಿಯಾ ಬಿಲ್ಲು ಸಾರ್ವತ್ರಿಕ ಚುನಾವಣೆಯ ತಳಹದಿಯನ್ನು ತಯಾರಿಸಿತು. ಈ ಕಾಲಕ್ಕೆ ಸ್ತ್ರೀಮತದಾರರ ಸಂಖ್ಯೆ ೫೦,೦೦೦ಕ್ಕೆ ಮುಟ್ಟಿತ್ತು ; ಹೆಚ್ಚಿನ ಸಂಖ್ಯೆಯಲ್ಲಿ ಸ್ತ್ರೀಯರು ಆರಿಸಿಯೂ ಬಂದರು. ೧೯೪೨ ರ ಅಸಹಕಾರ ಚಳವಳಿ ಮಹಿಳೆಯರ ಶಕ್ತಿಯನ್ನು ಇನ್ನೂ ಪರೀಕ್ಷಿಸಿತು. ಬಂಧಿತಳಾದ ಯಾವ ಸ್ತ್ರೀಯೂ ತನ್ನದು ತಪ್ಪೆಂದು ಒಪ್ಪಿಕೊಂಡು ಹಿಂದಿರುಗಲಿಲ್ಲ. ಇವರ ಸಹನೆಯ ಪ್ರತೀಕವಾಗಿ ಕಸ್ತೂರಬಾ ಆಗಲೇ ಸೆರೆಮನೆಯಲ್ಲಿ ಕಾಲವಾದರು !

* * *

ಭಾರತೀಯ ಸ್ವಾತಂತ್ರ್ಯಪ್ರಾಪ್ತಿಯ ನಂತರ, ಅನೇಕ ಜನ ಮಹಿಳೆಯರು ಹೆಚ್ಚಿನ ಹೊಣೆಯನ್ನು ಹೊತ್ತು ರಾಜಕೀಯ ಕಾರ್ಯವನ್ನು, ಆಡಳಿತೆಯನ್ನು ನಿರ್ವಹಿಸುತ್ತಿದ್ದಾರೆ. ಶ್ರೀ ಸರೋಜಿನಿ ನಾಯುಡು ಸಂಯುಕ್ತ ಪ್ರಾಂತದ ಗವರ್ನರರಾಗಿದ್ದರು. ಶ್ರೀಮತಿ ವಿಜಯಲಕ್ಷ್ಮಿ ಸಂಯುಕ್ತ ರಾಷ್ಟ್ರ ಸಂಘದ ಅಧ್ಯಕ್ಷೆಯಾದರು! ಶ್ರೀ ದುರ್ಗಾಬಾಯಿ ದೇಶಮುಖರು ಯೋಜನಾ ಆಯೋಗದಲ್ಲಿದ್ದಾರೆ. ಅಲ್ಲದೆ ಪ್ರಾಂತೀಯ ಮಂತ್ರಿಮಂಡಲಗಳಲ್ಲಿ, ವಿಧಾನ ಸಭೆಗಳಲ್ಲಿ ಅನೇಕರು ದಕ್ಷತೆಯಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ಕೆಳಗೆ ಬಂದರೆ ಹಳ್ಳಿಗಳಲ್ಲಿ ಕೂಡ ಮಹಿಳೆಯರು ಸರಪಂಚರಾಗಿದ್ದಾರೆ. ಆದರೆ ಜನಸಾಮಾನ್ಯರ ದೃಷ್ಟಿಯಿಂದ ನೋಡಿದಾಗ, ಮಹಿಳೆಯರು ಸಮಾನಾಧಿಕಾರದ ಅರ್ಥವನ್ನು ಇನ್ನೂ ಮಾಡಿಕೊಂಡಿಲ್ಲವೆಂದು ಕಂಡುಬರುವದು. ಮಧ್ಯಮ ವರ್ಗದ ಜನ ಶಿಕ್ಷಣ-ಸಂಸ್ಕೃತಿ ಎಂದು ಕೂಗಿದರೆ, ಕೂಲಿಕಾರ ವರ್ಗದ ಮಹಿಳೆಯರಲ್ಲಿ ಹೊಟ್ಟೆಯ ಪ್ರಶ್ನೆಗಾಗಿಯೇ ದಿನದ ಬಹುಭಾಗ ಹೋಗಿಬಿಡುತ್ತದೆ; ಈ ವರ್ಗದ ಹತ್ತು ವರ್ಷದ ಬಾಲಿಕೆಗೂ ಶಿಕ್ಷಣ ಪಡೆಯಲು ಅವಕಾಶ ಅಸಾಧ್ಯವಾಗಿ ಕಾಣುತ್ತದೆ!

ಭಾರತೀಯ ಮೇಲ್ವರ್ಗದ ಮಹಿಳೆಯು ಸಿರಿವಂತನ ಹೆಂಡತಿಯಾಗಿರುವದೇ ತನ್ನ ಸುದೈವವೆಂದು ತಿಳಿದು ಸಮಾಧಾನ ಪಟ್ಟುಕೊಂಡಿರುತ್ತಾಳೆ; ಕೂಲಿಕಾರ ವರ್ಗದ ಮಹಿಳೆಗೆ ಮನೆಗೆಲಸ, ಹೊಟ್ಟೆಯ ಪ್ರಶ್ನೆಗಳೆರಡನ್ನು ಬಿಟ್ಟು ಇನ್ನಾವುದರೆಡೆಗೂ ದೃಷ್ಟಿಯನ್ನು ಹೊರಳಿಸಲು ಸಮಯ ಸಾಲದು. ಈ ಎರಡು ವರ್ಗದ ಮಹಿಳೆಯರಲ್ಲಿ ಚಳವಳಿಗೆಂದು ಯಾರಾದರೂ ಮುಂದೆ ಬಂದರೆ, ಅದೊಂದು ಸಾಹಸ, ಆಶ್ಚರ್ಯಗಳ ಮಾತು! ಇರುವ ಅತೃಪ್ತಿಯೆಲ್ಲ ಮಧ್ಯಮ ವರ್ಗದಲ್ಲಿ ನೆಲೆಸಿದೆ. ಯಾವುದೇ ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಕ್ರಾಂತಿ ತಲೆದೋರಬೇಕಾದರೂ ಈ ಜನಸಮುದಾಯದಿಂದಲೇ. ಹೆಣ್ಣುಮಕ್ಕಳಿಗೆ ಉಚ್ಚ ಶಿಕ್ಷಣ ಕೊಡಬೇಕೆಂಬ ದಿಕ್ಕಿನಲ್ಲಿ ಪ್ರಯೋಗ ನಡೆಸಿದ್ದು ಈ ವರ್ಗವೇ. ಬಳಿಕ ಯುದ್ಧದ ನಂತರ ಏರಿದ ಬೆಲೆಯನ್ನು ಎದುರಿಸಲಾರದ ಈ ವರ್ಗ, ಮಹಿಳೆಯರು ಆರ್ಥಿಕ ಸಂಪಾದನೆಯಲ್ಲಿ ತೊಡಗಿರುವದು ಅನಿವಾರ್ಯವೆಂದುಕೊಂಡಿತು. ಹೆಚ್ಚು ಹೆಚ್ಚು ಮಹಿಳೆಯರು ಉಚ್ಚ ಶಿಕ್ಷಣದ ಅವಕಾಶ ಪಡೆದೋ, ಪಡೆಯದೆಯೋ ಸಂಪಾದನೆ ಮಾಡಲು ಪ್ರಾರಂಭಿಸಿದಾಗ, ತಮಗೂ ಕುಟುಂಬಕ್ಕೂ ಅದರಿಂದ ಆರ್ಥಿಕ ಸೌಕರ್ಯವಾಯಿತೇನೋ ಸರಿ. ಆದರೆ ಅದರಿಂದಾಗಿ ಮಹಿಳೆಯರಲ್ಲಿಯೇ ಎರಡು ವರ್ಗಗಳು ತಲೆದೋರಿದವು. ಸಂಪಾದನೆ ಮಾಡಿಯೂ ದಾಸ್ಯದಲ್ಲಿರುವ ಕೂಲಿಕಾರ ಭಗಿನಿಯನ್ನು ಬಿಟ್ಟುಕೊಡೋಣ. ಅಂತೂ ಸಂಪಾದನೆ ಮಾಡಿ ಸ್ವಚ್ಛಂದವಾಗಿ ಅಡ್ಡಾಡಬಹುದಾದ ಪುರುಷರಂತಹ ಮಹಿಳೆಯರು ಒಂದು ಜಾತಿ, ಮನೆಯ ಒಳಗೇ ಇದ್ದುಕೊಂಡು ಗೃಹಕೃತ್ಯಗಳನ್ನು ನಿರ್ವಹಿಸಿಕೊಂಡಿರುವ ಮೆತ್ತನೆಯ ಮಹಿಳೆಯರು ಇನ್ನೊಂದು ಜಾತಿ ! ಇಲ್ಲಿ ಪರಸ್ಪರರಲ್ಲಿ ವೈಮನಸ್ಯವೂ ಸಹಜವಾಗಿದೆ: ಮೊದಲ ಜಾತಿಯವರು ಗೃಹನಿರ್ವಹಣೆಯಲ್ಲಿ ಅಸಮರ್ಥರೆಂದು ಹೇಳಿ, ಎರಡನೆಯ ಜಾತಿಯವರು ತಮ್ಮ ಹೆಚ್ಚಳವನ್ನು ಹೇಳಿಕೊಳ್ಳುತ್ತಾರೆ. ಮೊದಲನೆಯ ಜಾತಿಯವರೂ ಹಿಂದುಳಿಯದೆ, ಆರ್ಥಿಕ ಸಂಪಾದನೆ ಮಾಡುವ ತಾವು ಮಿಕ್ಕವರಿಗಿಂತ ಹೆಚ್ಚು ಎಂಬ ಕೂಗನ್ನು ಎಬ್ಬಿಸಿದ್ದಾರೆ !




ಎರಡು ಧ್ರುವ :
ಮಧ್ಯಮಾರ್ಗ ಸಾಧ್ಯವಿಲ್ಲವೆ ?

ಇನ್ನುಳಿದ ರಾಷ್ಟ್ರಗಳ ಮಹಿಳೆಯರೆಡೆಗೆ ನೋಡಿದಾಗ ಎಂತಹ ಚಿಕ್ಕಪುಟ್ಟ ಭೇದಭಾವ ಅವರಲ್ಲಿವೆ, ಎಂದು ನಾವೇ ನಗೆಯಾಡಬಹುದು. ಆದರೆ ನಮ್ಮ ನಮ್ಮೊಳಗಿರುವ ಭೇದಭಾವಗಳ ವಿಚಾರ ದೇವರೆ ಬಲ್ಲ ! ಮಹಿಳೆಯರಲ್ಲಿ ಸಾಮೂಹಿಕವಾಗಿ ಶಿಕ್ಷಣದ ಒಂದು ಮಟ್ಟ, ಆರ್ಥಿಕ ಸೌಕರ್ಯದ ಒಂದು ತಳಹದಿ ಪ್ರಗತಿಪರ ವಿಚಾರದ ಒಂದು ಹಿನ್ನೆಲೆ ಇದ್ದರೆ, ಅದರ ಮೇಲೆ ಯಾವದೇ ಚಿಕ್ಕ ದೊಡ್ಡ ಕಟ್ಟಡವನ್ನು ಕಟ್ಟಬಹುದು. ಆದರೆ ಇದಾವ ತಳಹದಿಯೂ ಇಲ್ಲದಾಗ ಕಟ್ಟಡದ ಮಾತೇನು ಬಂತು ? ಯಾವ ವಿಚಾರಕ್ಕೂ ಆಸ್ಪದ ಕೊಡದ ಜನರಿಂದ ಪ್ರಾರಂಭಿಸಿ ಕ್ರಾಂತಿಕಾರಿ ವಿಚಾರಕ್ಕೆಡೆಗೊಡುವವರವರೆಗೂ ಜನತೆಯಲ್ಲಿ ಏರಿಳಿತವಿದ್ದರೆ, ಮತ್ತೆ ವಿಚಾರವಿಲ್ಲದವರು, 'ಇಲ್ಲ'ವೆಂದು ಒಪ್ಪಿಕೊಳ್ಳುವ ಸಾಹಸ ಮಾಡದಿದ್ದರೆ, ವಿಚಾರ ಸಂಸ್ಕೃತಿಗಳ ಸಂಬಂಧ ಜನತೆಯಲ್ಲಿ ಬೆಳೆಯುವದು ಅಸಾಧ್ಯವೆಂದೇ ಹೇಳಬೇಕು. ಇಂತಹ ಪರಿಸ್ಥಿತಿ ಹಿಂದುಸ್ಥಾನದಲ್ಲಿಯೇ ಇದೆಯೆಂದರೂ ಮಹಿಳೆಯರಲ್ಲಿ ಅದು ವಿಶೇಷವಾಗಿದೆ ! ಮಹಿಳಾ ಸಮಾಜವೆಂದರೆ, ಸಮೂಹದೊಳಗಿನ ಸಮೂಹವದು ! ಅಲ್ಲದೆ ಅವರ ಕಾರ್ಯಕ್ಷೇತ್ರ ಚಿಕ್ಕದು ; ವೈಯಕ್ತಿಕವಾಗಿ ಮತ್ಸರವನ್ನು ಮಹಿಳೆಯರಲ್ಲಿಯೇ ತೋರಿಸುವದೂ ಅವರಿಗೆ ಅನಿವಾರ್ಯವಾಗುತ್ತದೆ.

ರಾಜಕೀಯ, ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಮೂಡಿಬರುವ ಯಾವುದೇ ಪ್ರಗತಿಪರ ವಿಚಾರವು, ಈ ಮೂರು ಕ್ಷೇತ್ರಗಳಲ್ಲಿಯೂ ತನ್ನನ್ನು ತಾನೇ ಹೆಣೆದುಕೊಂಡಿರುತ್ತದೆ. ಪ್ರತ್ಯೇಕವಾಗಿಯೇ, ಯಾವ ರೀತಿಯಲ್ಲಿಯೂ ಇನ್ನುಳಿದ ಕ್ಷೇತ್ರಗಳ ಸಂಬಂಧ ಬರದಂತೆ, ಯಾವದೇ ಮಾತನ್ನು ಕಾರ್ಯರೂಪದಲ್ಲಿ ತರುವದು ಅಸಾಧ್ಯವಾದುದು. ಸ್ಕಾಟಲಂಡಿನ ಪಾರ್ಲಿಮೆಂಟನಲ್ಲಿ ಮಹಿಳೆಯರು ತಮ್ಮ ಮನೆ

ಕೆಲಸಗಳ ಪ್ರತಿಫಲವೆಂದು ಯಜಮಾನನ ಆದಾಯದ ಹತ್ತನೆಯ ಭಾಗವನ್ನು ಪಡೆಯಬೇಕೆಂಬ ಬಿಲ್ಲು, ಸಾಮಾಜಿಕ ಸುಧಾರಣೆಯ ಮೂಲವಾಗಿ ಬಂದಿತ್ತು. ಇಂದು ಭಾರತದ ಪಾರ್ಲಿಮೆಂಟಿನಲ್ಲಿರುವ 'ಹಿಂದೂ ಕೋಡ ಬಿಲ್ಲು' ಕೂಡ ಸ್ತ್ರೀಯರ ರಾಜಕೀಯ, ಸಾಮಾಜಿಕ, ಆರ್ಥಿಕ ಹಕ್ಕುಬಾಧ್ಯತೆಗಳಿಗೆ ಕಾಯ್ದೆಯಿಂದ ಮೂರ್ತಸ್ವರೂಪ ಕೊಡಲು ನೋಡುತ್ತಿದೆ. ನಡೆದುಬಂದ ಸಂಪ್ರದಾಯದಲ್ಲಿ ಯಾವುದೇ ಬದಲಾವಣೆಯನ್ನು ಆಶಿಸದ ಜನ ಅದನ್ನು ವಿರೋಧಿಸುತ್ತಾರೆ. ಸ್ವಾರ್ಥಕ್ಕೆ ಬಾಧೆಯಾದೀತೆಂಬ ಭೀತಿ ಇದರಲ್ಲಿದೆ; ಆರ್ಥಿಕ ಸಂಪಾದನೆ ಮಾಡುವ ಪುರುಷನ ಇಚ್ಛೆಗೆ ವಿರೋಧವನ್ನು ವ್ಯಕ್ತಮಾಡುವ ಆಶೆ ಮಹಿಳೆಯರಲ್ಲಿಲ್ಲ. ಇದರಿಂದ ಹಿಂದೂ ಕೋಡ ಬಿಲ್ಲನ್ನೂ ವಿರೋಧಿಸುವ ಮಹಿಳೆಯರ ಸಂಖ್ಯೆ ನಿರ್ಮಾಣವಾಗಿದೆ. ದಾಸ್ಯದ ಮನೋವೃತ್ತಿಯಲ್ಲಿ ಬೆಳೆದುಬಂದವರಿಗೆ ಇದು ಸಹಜವೇ ಆಗಿದೆ. ಆದರೆ ಈ ಬಿಲ್ಲಿನಲ್ಲಿ ಹೊಸದು ಹೆಚ್ಚಾಗಿಲ್ಲ, ಹಳೆಯದನ್ನೇ ಹೊಸ ಕಾಲಕಾಲಕ್ಕೆ ಅನ್ವಯಿಸಿಕೊಳ್ಳಬೇಕೆಂಬ ಪ್ರಯತ್ನ ನಡೆದಿದೆ ಎಂಬುದನ್ನು ನಾವು ಮರೆಯುವಂತಿಲ್ಲ.

ಮಹಿಳೆಯರು ಉಚ್ಚಶಿಕ್ಷಣ ಪಡೆಯಬೇಕೆಂಬ ಮಾತು ಇಂದು ಕೇವಲ ಫ್ಯಾಶನ್ನಿನ ವಿಷಯವಾಗಿದೆ, ವೇದಿಕೆಯ ಮಾತಾಗಿದೆ! ಹೀಗಾಗಲು ಉಚ್ಚಶಿಕ್ಷಣದಿಂದ ಮಹಿಳೆಯರ ಮೇಲಾದ ಪ್ರತಿಕ್ರಿಯೆಯೂ ಕಾರಣವಾಗಿದೆ. ಉಚ್ಚಶಿಕ್ಷಣ, ಸುಶಿಕ್ಷಿತ ಮತ್ತು ಸಾಮಾನ್ಯ ಮಹಿಳೆಯರಲ್ಲಿ ನಿಲುಕಲಾರದ ಕೊರಕಲನ್ನುಂಟುಮಾಡಿದರೆ, ಶಿಕ್ಷಣದ ಪ್ರಯೋಜನವೇನು ಬಂತು? "ನಾವು ಇತರರಿಗಿಂತ ದೊಡ್ಡವರು" ಎಂದು ದೂರ ಉಳಿಯಲು ಮಾತ್ರ ಇಂದಿನ ಶಿಕ್ಷಣ ಸಹಾಯಕಾರಿಯಾಗಿದ್ದರೆ, ಶಿಕ್ಷಣವು ನಮ್ಮಿಂದ ದೂರ ಉಳಿದಷ್ಟೂ ಒಳ್ಳೆಯದು! ಶಿಕ್ಷಣಪಡೆದ ಮೇಲೂ ಆರ್ಥಿಕ ಸಂಪಾದನೆ ಮಾಡಬೇಕೋ ಬಾರದೋ ಎಂಬುದು ಸಮಸ್ಯೆಯೆ! ಒಳ್ಳೇ ಮನೆತನದವರೆಂದು ಹೇಳಿಕೊಳ್ಳುವ ಜನಕ್ಕೆ ಮಹಿಳೆಯರು ಆರ್ಥಿಕ ಸಂಪಾದನೆ ಮಾಡುವದು ಗೌರವಕ್ಕೆ ಕುಂದು; ತಮ್ಮ ಅಸಮರ್ಥತೆಯ ಕುರುಹು! ಮತ್ತೆ ಶಿಕ್ಷಣವು ಹೆಚ್ಚಾದಂತೆ ಮದುವೆ ಮಾರ್ಕೆಟ್ಟಿನಲ್ಲಿ ತೊಂದರೆಯೂ ಹೆಚ್ಚು ಎಂಬ ಇತ್ತೀಚಿನ ಅನುಭವದಿಂದ ಮಹಿಳೆಯರ ಉಚ್ಚಶಿಕ್ಷಣದ ಹವ್ಯಾಸ ಕೆಳಗೆ ಬರತೊಡಗಿದೆ. ಆದರೆ ಆರ್ಥಿಕ ಸ್ವಾತಂತ್ರ್ಯವನ್ನು ಮೆಚ್ಚಿದ ಮಹಿಳೆಯರು ಸಂಪಾದನೆಯನ್ನು ಬಿಟ್ಟುಕೊಡಲು ಸಿದ್ಧರಾಗಿಲ್ಲ. ವಿದೇಶೀಯ ಕುಟುಂಬಗಳಲ್ಲಿ ಸಹಕಾರದಿಂದ ಗೃಹಕೃತ್ಯಗಳನ್ನು ಮುಗಿಸಿ, ಚಿಕ್ಕಮಕ್ಕಳನ್ನು 'ಕ್ರೇಷೆ' (ಮಗುಗಳ ಶುಶ್ರೂಷಾಕೇಂದ್ರ) ಯಲ್ಲಿಟ್ಟು, ದೊಡ್ಡ ಮಕ್ಕಳನ್ನು ಶಾಲೆಗೆ ಕಳಿಸಿ, ಪತಿ-ಪತ್ನಿಯರಿಬ್ಬರೂ ತಮ್ಮ ಉದ್ಯೋಗಕ್ಕಾಗಿ ತೆರಳುವ ರೀತಿ ಭಾರತೀಯರಿಗೆ ಹೊಸದು; ಅಲ್ಲದೆ ಆ ಬಗೆಯ ಸೌಕರ್ಯ-ಸಾಧನೆಗಳೂ ಇಲ್ಲಿಲ್ಲ. ಅವಿಭಕ್ತ ಕುಟುಂಬ ಪದ್ಧತಿ ಒಡೆದು ಚಿಕ್ಕ ಚಿಕ್ಕ ಕುಟುಂಬಗಳಾಗಿ ರೂಪಾಂತರಿಸಲ್ಪಟ್ಟವೆ. ಮತ್ತೆ ಇಲ್ಲಿಯೂ ಕುಟುಂಬನಿಯೋಜನೆ ತಲೆಯಿಕ್ಕಿದೆ. ಎಂಬುದರಿಂದ, ಮನೆಯಲ್ಲಿ ಬೇಕು-ಬೇಡಾದ ಜನರ ತೊಂದರೆಯಿಂದ ಉಂಟಾಗುವ ಅವ್ಯವಸ್ಥೆಗೆ ಅವಕಾಶವಿಲ್ಲ ಎಂಬುದು ತಾನೇ ಸಿದ್ಧವಾಗುತ್ತದೆ. ಕುಟುಂಬನಿಯೋಜನೆಯ ಪ್ರಯೋಗವೂ ಹಳೇ-ಹೊಸ ವಿಚಾರಗಳ ತಿಕ್ಕಾಟಕ್ಕೆ ಸಿಕ್ಕು ಬದ್ದಾಡದೆ ಇಲ್ಲ! ಭಾರತೀಯ ಪರಂಪರೆಗೆ ಒಳಪಟ್ಟವರಿಗೆ ಈ ನಿಯೋಜನೆ ಆಘಾತವನ್ನೂ ಉಂಟುಮಾಡಿದೆ.

* * *

ಇಂದು ಸಾಮಾನ್ಯ ಮಹಿಳೆಯು ಕೂಡ ಕೇವಲ ವೈಯಕ್ತಿಕ ಜೀವನವನ್ನೇ ಜೀವಿಸಲಾರಳು. ಸಾಮುದಾಯಿಕ ಜೀವನದಲ್ಲಿ ಅವಳೂ ಪ್ರವೇಶಿಸುವದು ಅನಿವಾರ್ಯವಾಗಿದೆ. ಮತದಾನದ ಅಧಿಕಾರವನ್ನು ಪಡೆದ ಅವಳು ತನ್ನ ಸಾಮಾಜಿಕ, ರಾಜಕೀಯ ಸ್ಥಾನಮಾನಗಳನ್ನು ರೂಪಿಸಿಕೊಳ್ಳಬೇಕಾಗಿದೆ. ಕಾಯ್ದೆಯನ್ನು ತನಗೂ ಅನುಕೂಲವಾಗಿರುವಂತೆ ವ್ಯತ್ಯಾಸಗೊಳಿಸಿಕೊಳ್ಳಬೇಕಾಗಿದೆ. ಹಿಂದುಸ್ಥಾನದ ರಾಜ್ಯಘಟನೆ, ಅವಳ ಸಮಾನಾಧಿಕಾರವನ್ನು ಕರಡಿನಲ್ಲಿ ಒಪ್ಪಿದರೂ ಅದು ಬಳಕೆಯಲ್ಲಿ ಬರಲು ಹೊಸ ಪೀಳಿಗೆಯಲ್ಲಾದರೂ ವಿಚಾರದ ಕ್ರಾಂತಿ ತಲೆದೋರಬೇಕು.

ಯಜಮಾನನ ಆಸ್ತಿಯಾದ ಮನೆ, ಹೊಲ, ಮೋಟರ ಕಾರುಗಳೊಡನೆ ಸ್ತ್ರೀಯೂ ಒಂದಾಗಿದ್ದ ಕಾಲದಿಂದ ರಾಜ್ಯಘಟನೆಯಲ್ಲಿ ಸಮಾನಾಧಿಕಾರವನ್ನು ಪಡೆಯುವವರೆಗೂ ಭಾರತೀಯ ಚಳವಳಿ ಮುಂದುವರಿದಿದೆ, ಎಂದು ಸಾಮಾನ್ಯವಾಗಿ ಹೇಳುತ್ತೇವೆ. ಪುರುಷನಿಗೆ ದೇವನಿಂದ ಮುಕ್ತಿದೊರೆತರೆ, ಸ್ತ್ರೀಗೆ ಪುರುಷನಿಂದಲೇ ಮುಕ್ತಿ ಎಂದು ಹೇಳುವಂತೆ, ಪುರುಷನೊಡನೆ ಸಮಾನಾಧಿಕಾರವೆಂದರೇ ಸ್ತ್ರೀಯ ಮುಕ್ತಿಯಲ್ಲ. ಆದರೆ ಇಷ್ಟರಿಂದಲೇ ಅನೇಕರು ವಿವಂಚನೆಗೊಳಗಾಗಿದ್ದಾರೆ. ಹಿಂದೂ ಕೋಡ ಬಿಲ್ಲು ಪಾಸಾದರೆ, ಪಾಶ್ಚಾತ್ಯ ಮಹಿಳೆಯರನ್ನು ಅನುಸರಿಸುವ ಭಾರತೀಯ ಸ್ತ್ರೀಯರೂ ವರುಷಕ್ಕೊಂದು ವಿವಾಹ-ವಿಚ್ಛೇದವನ್ನು ಮಾಡಿದರೆ ಗತಿಯೇನು? ಎಂದು. ವಿಚ್ಛೇದನದ ಅಧಿಕಾರವಿದ್ದಮಾತ್ರಕ್ಕೆ ಅದನ್ನು ಉಪಯೋಗಿಸಿಯೇ ತೀರ

ಬೇಕೆಂಬ ನಿರ್ಬಂಧ ಎಲ್ಲಿಯೂ ಇಲ್ಲ. ಅಲ್ಲದೆ ಹೊಂದಿಕೊಂಡಿರದ ಎರಡು ಮನಸ್ಸುಗಳನ್ನು ಒಂದೆಡೆ ಕೂಡಿಟ್ಟರೆ, ವಿವಾಹದ ಉದ್ದೇಶವೂ ಸಾಧಿಸದು. ವಿಚ್ಛೇದಕ್ಕೆ ಅವಕಾಶವಿಲ್ಲದೆ ತೊಳಲಾಡುವದು ಬೇಡ ಎಂಬುದೇ ಇದರಲ್ಲಿ ಮುಖ್ಯವಾದುದು. ಭಾರತ ನಿವಾಸಿಗಳಾದ ಮುಹಮ್ಮದೀಯರಲ್ಲಿ ಈ ಅವಕಾಶವಿದೆ, ಈಸಾಯಿಗಳಲ್ಲಿದೆ; ಹಿಂದೂ ಸಮಾಜದ ಹಿಂದುಳಿದ ವರ್ಗವೆಂದು ಹೇಳಿಸಿಕೊಳ್ಳುವ ಜನಾಂಗದಲ್ಲಿಯೂ ಇದೆ. ಅವಕಾಶವಿಲ್ಲದ್ದು ಮುಂದುವರಿದ ಜನಾಂಗದಲ್ಲಿ ಮಾತ್ರ ! ಈ ಜನಾಂಗಕ್ಕೇ ಅದೊಂದು ಸಮಸ್ಯೆಯಾಗಿದೆ. ಮತ್ತೆ ಆರ್ಥಿಕ ಸ್ವಾತಂತ್ರ್ಯ ದೊರೆಯದೆ ಈ ಸಮಸ್ಯೆ ಬಗೆಹರಿಯುವದೂ ಸಾಧ್ಯವಿಲ್ಲ. ಆರ್ಥಿಕ ಸ್ವಾತಂತ್ರ್ಯವಿದ್ದು, ವಿಚ್ಛೇದದ ಉಳಿದ ಸಂಗತಿಗಳು ಸರಿಹೋಗುತ್ತಿದ್ದರೆ, ಕ್ವಚಿತ್ ಪ್ರಸಂಗಗಳಲ್ಲಿ ಈ ಅಧಿಕಾರದ ಉಪಯೋಗವಾಗಬಹುದು.

ಮಧ್ಯಮವರ್ಗದಲ್ಲಿ ಮಹಿಳೆಯರು ಹೋರಾಟದಲ್ಲಿ ಬೆಳೆದಿದ್ದರೂ ಅದನ್ನು ಆಸಕ್ತಿಯಿಂದ ಮೈಗೂಡಿಸಿಕೊಂಡು ಮುಂದುವರಿಸುವವರು ಕಡಿಮೆಯೆಂದು ಕಾಣುತ್ತದೆ. ಹೋರಾಟ ಮೊದಲಿದ್ದರೂ ವೈವಾಹಿಕ ಜೀವನದಲ್ಲಿ ಆರ್ಥಿಕ ಹೋರಾಟ ಬೇಡವೆಂದು ಆಶಿಸುವವರು ಬಹಳ. ಇನ್ನು ಸುಖವಸ್ತುಗಳಾಗಿ ಬೆಳೆದವರು, ಅದೇ ಅಥವಾ ಅದಕ್ಕೂ ಹೆಚ್ಚಿನ ಆರ್ಥಿಕ ಸುಖ ಮುಂದುವರಿಯಲೆಂದು ಆಶಿಸುವದು ಸಹಜ. ಹೀಗಾಗಿ ಬಹುಸಂಖ್ಯಾಕ ಸುಶಿಕ್ಷಿತ ಮಹಿಳೆಯರು, ಸುಖವಸ್ತುಗಳಾಗಿರಲು ಧನಿಕರನ್ನು - ಬುದ್ಧಿ ಕೊಂಚ ಕಡಿಮೆಯಾಗಿದ್ದರೂ ಸರಿ - ವರಿಸಲು ಆಶೆಪಡುತ್ತಿರುವದು ಇಂದು ಕಂಡುಬರುತ್ತದೆ. ತಾಳ್ಮೆ, ಪರಿಶ್ರಮಪಡುವ ಇಚ್ಛೆ, ಮಧ್ಯಮ ವರ್ಗದಲ್ಲಿಯೂ ಎರಡು ಭಾಗ ಮಾಡಬಹುದಾದರೆ, ಕೆಳಗಿನವರಲ್ಲಿ ಹೆಚ್ಚಾಗಿರುತ್ತವೆನ್ನಬಹುದು. ಪಾಶ್ಚಾತ್ಯ ಸಂಸ್ಕೃತಿಯಿಂದ, ನಮ್ಮ ಪಕ್ಷದ ಸಮರ್ಥನೆಗೆ ಬೇಕಾದಷ್ಟೇ ನಾವಿಂದು ತೆಗೆದುಕೊಳ್ಳುತ್ತಿದ್ದೇವೆ. ಸುಶಿಕ್ಷಿತ ಮಹಿಳೆಯರು ಸಮಾಜಋಣವನ್ನು ತಿಳಿಯದೆ ಹೋದರೆ, ಮೇಲಿನ ಮತ್ತು ಕೆಳಗಿನ ವರ್ಗಗಳಲ್ಲಿ ಅಪಾರ ಅಂತರವುಂಟಾಗಿ, ಬೌದ್ಧಿಕ ವಿಷಮತೆ ತನ್ನ ರಾಜ್ಯವನ್ನೇ ನಡೆಸೀತು !

ಸ್ವಾತಂತ್ರ್ಯಪೂರ್ವದಲ್ಲಿದ್ದ ಮಹಿಳಾ ಚಳವಳಿಯು ಹೆಚ್ಚು ಉತ್ಸಾಹಶಕ್ತಿಗಳಿಂದ ಕೂಡಿದುದೆಂದು ಹೇಳಿದರೂ ಅದರ ರೂಪವಿಂದು ಬದಲಾದುದರಿಂದ ಶಕ್ತಿಯನ್ನು ವಿಧಾಯಕ ಕಾರ್ಯಗಳಲ್ಲಿ ಉಪಯೋಗಿಸಬೇಕಾಗಿದೆ. ಪರೀಕ್ಷೆ ಕಟ್ಟಿ ಕಾರಕೂನರಾಗುವದೊಂದೇ ಗುರಿ, ಎಂಬುದನ್ನು ಬಾಯ್ದೆರೆದು ನಿಂತ ನಿರುದ್ಯೋಗದ ಪರಿಸ್ಥಿತಿಯೂ ಮೆಚ್ಚುವದಿಲ್ಲ. ಸಂದರ್ಶನಕೊಡುವ ಪರದೇಶದ ಪ್ರತಿನಿಧಿಗಳಿಗೆ, ನಮ್ಮ ಕೆಲ ಮಹಿಳೆಯರು ಮುಂದುವರಿದುದು, ಅರ್ಥಾತ್ ಎಚ್ಚತ್ತು ಹೋರಾಡುತ್ತಿರುವದು ಕಂಡುಬರಬಹುದು. ಇದೇ ಆಧಾರದಿಂದ, ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಇಜಿಪ್ತದ ಭಗಿನಿಯರು ನಮ್ಮ ಸಹಾನುಭೂತಿಯನ್ನೂ ಬಯಸಬಹುದು. ಆದರೆ ಅದಕ್ಕೆ ಮೊದಲು, ನಾವು ನಮ್ಮ ಸಾಮಾಜಿಕ ಒಕ್ಕಟ್ಟನ್ನೂ ಶಕ್ತಿಉತ್ಸಾಹಗಳನ್ನೂ ಕಾಯ್ದುಕೊಂಡು, ಪರಸ್ಪರರ ದೌರ್ಬಲ್ಯವನ್ನು ಮರೆತು, ವಿಧಾಯಕ ಕಾರ್ಯದಲ್ಲಿ ತೊಡಗಿ ನಮ್ಮನ್ನು ನಾವು ವಂಚಿಸಿಕೊಳ್ಳದಿರುವದು ಒಳಿತಲ್ಲವೇ ? ಅಂದು ಚಳವಳಿಯಿಂದ ಗಳಿಸಿದ ರಾಜಕೀಯ ಸ್ವಾತಂತ್ರ್ಯ, ಇಂದು ಇವೆಲ್ಲವುಗಳಿಗೆ ಮೂಲ !

---

**ಹೆಂಗಸು ವರ್ತಮಾನ ಪತ್ರಿಕೆಯಂತಿದ್ದಾಳೆ, ಏಕೆ?**

* ಎರಡೂ ಪ್ರತಿಯೊಬ್ಬನಿಗೆ ತನ್ನ ಸ್ವಂತದ್ದಿರಬೇಕೇ ಹೊರತು ಮಂದಿಯದರಲ್ಲಿ ಹಣಕುವುದು ಶಿಷ್ಟಾಚಾರವಲ್ಲ.
* ಅದರಂತೆ ಇವಳೂ ಹೋದಲ್ಲೆಲ್ಲ ಸುದ್ದಿಗಳನ್ನು ಹಬ್ಬಿಸುತ್ತಾಳೆ.
* ಎರಡೂ ಮೊದಲಿಗಿಂತ ಈಗ ಕೃಶವಾಗಿವೆ.
* ಎರಡೂ ಹೇಳಿದ್ದೇ ಕೊನೆಯ ಮಾತು.
* ಎರಡೂ ಹಳೆಯವಾದರೆ ಯಾರೂ ಕಣ್ಣೆತ್ತಿ ನೋಡುವುದಿಲ್ಲ.









# ಭಾರತದ ರಾಜಧಾನಿಯಲ್ಲಿ



**ಜನವರಿಯಲ್ಲಿ ಹವಾಮಾನ ೩೭°; ಮುಂದೆ ೧೧೫° : ಈ ಮಹದಂತರವೇ ರಾಜಧಾನಿಯ ಜೀವನದ ವಿವಿಧ ರಂಗಗಳಲ್ಲಿ ಕಾಣಬರುತ್ತಿರುವದು. ಅತಿ ಬಡವರೂ ಅತಿ ಶ್ರೀಮಂತರೂ ಮಾತ್ರವೇ ಇಲ್ಲಿರುವರೆ? . .**

ಲೇಖಕರು : "ಶ್ರೀರಂಗ"

ಸಾರ್ವಜನಿಕ ಹಕ್ಕು ನ್ಯಾಯಗಳಿಗಾಗಿ ಬಡಿದಾಡುವುದು ತಮ್ಮ ಧ್ಯೇಯ, ತಮ್ಮ ಕರ್ತವ್ಯ ಎಂದು ಪತ್ರಿಕಾಸಂಪಾದಕರು ಆವೇಶದಿಂದ ಬರೆಯುತ್ತಾರೆ. ಆದರೆ ಈ ಸಂಪಾದಕರ ಇಂತಹ ಮಾತುಗಳನ್ನು ಸಹಸಾ ನಂಬಬೇಡಿರಿ ಎಂದು ಮೊದಲಿಗೆಯೆ ನಾನು ಓದುಗರಿಗೆ ಸಾರಿ ಹೇಳುತ್ತೇನೆ. ಒಂದೆಡೆ ನ್ಯಾಯದ ಬಗ್ಗೆ ಜಂಬದ ಮಾತನ್ನೇ ಹೇಳುವ ಸಂಪಾದಕರೆ ಇನ್ನೊಂದೆಡೆಗೆ ಅನ್ಯಾಯವನ್ನು ಮಾಡಲು ಹಿಂದುಮುಂದು ನೋಡುವುದಿಲ್ಲ. ಅನೇಕ ದೃಷ್ಟಾಂತಗಳನ್ನು ಕೊಟ್ಟು— ಅಥವಾ ಈ 'ಅನೇಕ' ದ ಜಂಜಾಲವೇಕೆ? ಸದ್ಯದ ನನ್ನ ಅನುಭವದ ದೃಷ್ಟಾಂತವನ್ನೆ ಕೊಡಬಹುದಾಗಿದೆ. "ರಾಜಧಾನಿಯಲ್ಲಿಯ ಜೀವನ" ಎಂಬ ವಿಷಯದ ಮೇಲೆ ಹರಟೆಯನ್ನು ಬರೆಯಬೇಕು ಎಂದು ನನಗೆ ಕೇಳಿದ್ದಾರೆ. ನೋಡಿದಿರಾ ಇದರೊಳಗಿನ ಚಮತ್ಕೃತಿಯನ್ನು? ಹರಟೆ ಎಂದರೆ ನನಗೆ ಯಾವಾಗಲೂ ಪ್ರಿಯವಾದ ವಿಷಯ; ಬಾಯಿ ಹರಟೆಯಲ್ಲ, ಬರೆಹ-ಹರಟೆ. ವಿಶೇಷ ಸಂಚಿಕೆಗಾಗಿ ಬರೆಯಲು ನನಗೆ ಕೇಳಿಕೊಂಡಿದ್ದಾರೆ ಎಂಬ ಮಾತಿಗಾಗಿ ಹೆಮ್ಮೆ ಮುಗಿಯಿತಲ್ಲ? ತಟ್ಟನೆ ಬರೆಯಲು ತೊಡಗಿದೆ. ಲೇಖನಿಯನ್ನು ಹಿಡಿದ ಪರಿಶ್ರಮಕ್ಕಾಗಿ ಬೆರಳಿಗೆ ಬೆವರು ಬಿಟ್ಟಿತು, ತಡೆದೆ; ಬೆವರಿನೊಡನೆ ನನ್ನ ಹೆಮ್ಮೆಯೂ ಆರಿತು. ಆಗ ವಿಚಾರ ಮಾಡಿದೆ— ಮತ್ತೆ ಬೆವರು ಬಿಟ್ಟಿತು, ಈ ಸಲ ಹೆದರಿಕೆಯಿಂದ. ಎಂತಹ ಪೇಚಿನಿಂದ ಪಾರಾದೆ ಎಂದು ಮೈತುಂಬ ಉಸಿರನ್ನು ಬಿಟ್ಟೆ. ಸಂಪಾದಕರ ಕುಯುಕ್ತಿಯ ಮರ್ಮ ಆಗ ಹೊಳೆಯಿತು ನನಗೆ. ರಾಜೇಂದ್ರನಿದ್ದರೂ ರಾಜನಿಲ್ಲದ ರಾಜಧಾನಿಯಲ್ಲಿಯ ಜೀವನದ ಬಗ್ಗೆ ನಾನು ಬರೆದೆನೆಂದು ತಿಳಿಯೋಣ, ಅರ್ಥಾತ್ ಇಲ್ಲಿಯ ಜೀವನದ ಪೂರ್ತಿ ಚಿತ್ರವನ್ನು ಕೊಟ್ಟೆನೆಂದು ತಿಳಿಯೋಣ. ಆಗ ಚಾಣಾಕ್ಷರಾದ ಓದುಗರಿಗೆ ಏನೆನ್ನಿಸಬಹುದು? "ಓಹೋ ಸಂಬಳವನ್ನು ಪಡೆಯುತ್ತ ಒಂದು ಹುದ್ದೆಯ ನಿಮಿತ್ತಕ್ಕಾಗಿ ದಿಲ್ಲಿಗೆ ಹೋದವನು ಇದನ್ನೆ ಮಾಡಿದನೊ?" ಎಂದು ಅವರು ತಿಳಿದರೆ ತಪ್ಪೇನು? ಕ್ರಮೇಣ "ಇವನಿಗೆ ಇದನ್ನೆಲ್ಲ ಅರಿತುಕೊಳ್ಳಲು ಇಷ್ಟು ಸಮಯ ದೊರೆಯಿತು ಹೇಗೆ?" ಎಂದು ಸಂಬಂಧಿಸಿದವರಿಗೆ ಸಂಶಯ ಬರಬಹುದಲ್ಲ? ಹೋಗಲಿ. ಇವೆಲ್ಲ ಕಾರಣಗಳಿಗಾಗಿ ಬರೆಯುವುದನ್ನೆ ಬಿಟ್ಟೆ ಎಂದು ತಿಳಿಯೋಣ. ಆಗ? "ದಿಲ್ಲಿಗೆ ಹೋಗಿ ಇವನು ಕನ್ನಡದಲ್ಲಿ ಬರೆಯುವುದನ್ನೆ ಬಿಟ್ಟಿದ್ದಾನೆ," ಎಂಬ ಮಾತು ಪರಿಚಿತ ವರ್ಗಗಳಲ್ಲಿ ಹೇಳಲ್ಪಡುತ್ತಿದೆ ಎಂದು ವಿಶ್ವಸನೀಯವಾಗಿ ನಂಬಲು ಅಡ್ಡಿ ಇಲ್ಲ ಎಂಬ ವಾತಾವರಣವನ್ನೆ ಸಂಪಾದಕರು ತೇಲಿಬಿಡಬಹುದಲ್ಲ! ತಿಳಿಯಿತೆ? ಬರೆದರೆ ಒಂದು, ಬರೆಯದಿದ್ದರೆ ಇನ್ನೊಂದು; ಎರಡೂ ಪೇಚುಗಳೆ! ಅಂತೂ ಇಂತೂ ಸ್ವತಂತ್ರ ಭಾರತದಲ್ಲಿ ಪರತಂತ್ರ ಬರೆಹಗಾರನ ಭಾಗ್ಯ ಯಾರಿಗೂ ಬೇಡ ಎಂದು ದೇವನಲ್ಲಿ ಮೊರೆಯಿಟ್ಟು, ಆ ಪರಮಾತ್ಮನೆ ನನ್ನಿಂದ ಬರೆಯಿಸುತ್ತಾನೆ ಎಂದು ನಮ್ರನಾಗಿ ಕಣ್ಮುಚ್ಚಿ ಬರೆಯುತ್ತಿದ್ದೇನೆ. ಬರೆಯಲೇ ಬೇಕಲ್ಲವೆ? ಸಂಪಾದಕನ ಹಟಕ್ಕಾಗಿ ಅಲ್ಲದಿದ್ದರೆ ಸ್ವಂತದ ಚಟಕ್ಕಾಗಿ ಬರೆಯಬೇಕಲ್ಲವೆ?

* * *

ಬರೆಯುವದಾದರೂ ಏನು? ಜನವರಿ ತಿಂಗಳಲ್ಲಿ ಹವಾಮಾನ ೩೭ ಇದ್ದಾಗ ಬಂದೆ, ಮುಂದೆ ಹವಾಮಾನ ೧೧೫ ಕ್ಕೆ ಹೋಯಿತು! ಇಂತಹ ವಿಕ್ಷಿಪ್ತ ಇರುವಿಕೆಯ ನಗರದ ಬಗ್ಗೆ ಬರೆಯುವುದು ಸುಲಭವಲ್ಲ. ಈ ರೀತಿಯ ಬದಲಾವಣೆ ನಡದೇ ಇರುತ್ತದೆ. ಇಂದು ನೋಡಿದ ಬಯಲಲ್ಲಿ ನಾಳೆ ಕಟ್ಟಡ ನಿಂತಿರುವುದು, ಆದರೂ ಜನರಿಗೆ ಸಾಕಷ್ಟು ವಾಸಸ್ಥಾನಗಳಿಲ್ಲ. ಹೊಸತಾಗಿ ಬಂದವನು ಹೆದರಬಹುದಾಗಿದೆ. ದೇಶದ ರಾಜಧಾನಿಯಲ್ಲವೆ ದಿಲ್ಲಿ? ಇಲ್ಲಿಯವರ ಸಂಸ್ಕೃತಿ ಉಚ್ಚ ಮಟ್ಟದ್ದಿರಬಹುದು— ಎಂದೂ ಹೆದರಿಕೆಯಾಗುವುದು. ನಾನು ಆ ರೀತಿ ಹೆದರಿದೆನೋ ಇಲ್ಲವೊ? ಆದರೆ ಒಂದು ಸಂಗತಿ ಮಾತ್ರ ನನ್ನನ್ನು ಖಂಡಿತವಾಗಿ ಹೆದರಿಸಿತು, ಅದೆಂದರೆ ಊರೊಳಗೆ ಓಡಾಡುವ ಬಸ್ಸುಗಳು. ದಿಲ್ಲಿಯಲ್ಲಿ ಬಸ್ಸುಗಳಿಗೂ ಸ್ವತಂತ್ರಬುದ್ಧಿ ಇದೆ ಏನೋ? ಬೇಕಾದಾಗ ಬರಬಹುದು, ಬೇಕಾದಲ್ಲಿ ಕೆಟ್ಟು ನಿಲ್ಲಬಹುದು, ಬೇಕಾದರೆ ಬಾರದೆಯೂ ಇರಬಹುದು. ನಿಮಗೆ ಏನನ್ನೂ ಮಾಡಲು ಬರುವಂತಿಲ್ಲ. ಈ ಮಾತಿಗಾಗಿಯೆ ಏನೊ— ಇಲ್ಲಿಯವರ ಸ್ವಭಾವ ಅತ್ಯಂತ ತಾಳ್ಮೆಯದಾಗಿದೆ. ಯಾವುದಕ್ಕೂ ಅವಸರವಿಲ್ಲ, ಯಾವುದರ ಬಗ್ಗೆಯೂ ಕಾತರವಿಲ್ಲ, ಎಂತಹ ಪರಿಸ್ಥಿತಿಯಲ್ಲೂ ಉಲ್ಲಾಸದಿಂದಿರುವರು. ನಾನು ಹೇಳುವುದು ದಿಲ್ಲಿಯಲ್ಲಿಯೆ ಹುಟ್ಟಿ ಬೆಳೆದವರ ಮಾತು.

'ಮಾತು' ಎಂಬುದಕ್ಕಾಗಿ ನೆನಪಿಗೆ ಬಂತು (ನಾನು ನನ್ನ ಅನುಭವವನ್ನೇ ಬರೆಯುತ್ತಿದ್ದೇನೆ). ಇಲ್ಲಿ ಬಂದ ಕೆಲ ದಿನಗಳ ವರೆಗೆ ನನಗೊಂದು ಗೂಢ ಬಿದ್ದಿತ್ತು. ಯಾರಾದರೂ ಟೆಲಿಫೋನ ಮಾಡುವಾಗ ಕೇಳಿದರೆ ಎರಡೇ ಎರಡು ಶಬ್ದಗಳು ಪ್ರಾಮುಖ್ಯವಾಗಿ ನನಗೆ ತಿಳಿಯುತ್ತಿದ್ದವು. ಒಂದು 'ಹಾಂ ಜೀ'; ಇನ್ನೊಂದು 'ಅಚ್ಛಾ ಜೀ'. ಯಾರು ಟೆಲಿಫೋನ್ ಮಾಡಿದರೂ ಇವೆರಡು ತಪ್ಪುತ್ತಿರಲಿಲ್ಲ. ನನಗೆ ಗೂಢ. ಎಲ್ಲರೊಡನೆಯೂ ಈ ರೀತಿ ಸಖ್ಯದಿಂದಿದ್ದ ಈ ಎರಡು ವ್ಯಕ್ತಿಗಳು ಯಾರು? ಈ ಹಾಂಜಿಯವರನ್ನೂ ಅಚ್ಛಾಜಿಯವರನ್ನೂ ನಾನೂ ಮಾತಾಡಿಸಿ ನೋಡಬಾರದೇಕೆ ಎಂದೆನಿಸಿತು. ಒಬ್ಬರಿಗೆ ಕೇಳಿದೆ "ನಿಮಗೆ ಒಂದು ಮಾತನ್ನು ಕೇಳಬಹುದೆ?" ಎಂದು. ಹಾಂಜಿ ಎಂದರು! ನನಗೆಯೆ? "ನಾನೂ ಮಾತಾಡಬಹುದೇ?" ಎಂದೆ. ಅಚ್ಛಾಜಿ ಎಂದರು! ಆಗ ಗೂಢ ಹೊರಬಿದ್ದಿತು ರಂಗಾಚಾರಿಜಿಯವರಿಗೆ!

ಬರುವಾಗ ನಾನೊಂದು ಹಿಂದೀ ಪುಸ್ತಕವನ್ನು ತಂದಿದ್ದೆ. ಅದರಲ್ಲಿ ಸರಿಯಾದ ಶಬ್ದಗಳನ್ನು ನೋಡಿಕೊಂಡು (ಎಷ್ಟೋ ಸಲ ಹೊರಟಾಗ

ತಿರುಗಿ ಬಂದು ಬಾಗಿಲ ಕೀಲಿ ತೆಗೆದು ನೋಡಿ-ಕೊಂಡದ್ದುಂಟು ) ಬಸ್ಸನ್ನು ಹತ್ತುತ್ತಿದ್ದೆ. ಬಸ್ ಕಂಡಕ್ಟರ ಸಮೀಪಿಸಿದಂತೆ ಧೈರ್ಯದಿಂದ ಮನ-ಸಿನೊಳಗೆ ಹಿಂದೀವಾಕ್ಯವನ್ನು ತಯಾರಿಸುತ್ತಿದ್ದೆ. ಆಯಿತು, ಬಂದನು ಬಸ್ ಕಂಡಕ್ಟರ. ಬಂದವನೆ "ಕಿತ್ತೆ ಜಾಣದೇವ" ಎನ್ನುತ್ತಿದ್ದ. ಎಂದರೆ? ನಾನು ಹಿಂದಿಯ ಶಬ್ದಗಳನ್ನು ಪಾಠ ಮಾಡಿದ್ದೆ, ಹಿಂದಿ "ಕಿತ್ತೆ" ಯನ್ನು ತೀಡಿರಲಿಲ್ಲ. ಅಂತೂ ಇಂತೂ ಸಂಜೆಗೆ ಮನೆಯನ್ನು ಮುಟ್ಟಿದ ಮೇಲೆ ಹಿಂದೀ ಪುಸ್ತಕವನ್ನು ನಿರ್ದಾಕ್ಷಿಣ್ಯವಾಗಿ ಕಟ್ಟಿಟ್ಟು ಬಿಟ್ಟೆ. ರಾಷ್ಟ್ರಭಾಷೆ ಬೇರೆ, ರಾಜಧಾನಿ ಭಾಷೆ ಬೇರೆ ಎಂದು ನನ್ನಷ್ಟಕ್ಕೆ ಸಮಾಧಾನವನ್ನು ತಂದುಕೊಂಡೆ.

ನಿಜವಾಗಿಯೂ ಹಾಗಿದೆಯಂತೆ. ದೇಶವು ಇಬ್ಭಾಗವಾದ ತರುವಾಯದಿಂದ ದಿಲ್ಲಿಯಲ್ಲಿ ಪಂಜಾಬಿ ಭಾಷೆಯೇ ಹೆಚ್ಚಾಗಿ ಕೇಳಬರುತ್ತದೆ. ಪಂಜಾಬದಿಂದ ( ಪಶ್ಚಿಮ ಪಂಜಾಬ ) ನಿರ್ವಾ-ಸಿತರು ಬಂದು ನೆಲಸಿದ ತರುವಾಯ ದಿಲ್ಲಿಯ ಜೀವನದಲ್ಲಿ ಮಹತ್ತ್ವದ ಅದಲು-ಬದಲುಗಳಾಗಿವೆ. ನಿರ್ವಾಸಿತರೆಂದರೆ ಸಾಮಾನ್ಯವಾಗಿ ನಿರ್ಗತಿಕರು. ದಿಲ್ಲಿಯ ಪ್ರತಿಯೊಂದು ಭಾಗದಲ್ಲಿ ಹರಕು-ಮುರುಕು ಗುಡಿಸಲೊಂದನ್ನು ಕಟ್ಟಿ-ಕೊಂಡು ಸಂಸಾರ ನಡಸಿದ ನಿರ್ವಾಸಿತರನ್ನು ನೋಡಬಹುದು. ಜೊತೆಗೆ ಹೊಸ ಹೊಸ ಭವ್ಯ ಕಟ್ಟಡಗಳನ್ನು ಕಟ್ಟಿಸುವ, ಲಿಲಾವಿನಲ್ಲಿ ಅವು-ಗಳನ್ನು ಕೊಂಡುಕೊಳ್ಳುವ ಶಕ್ತಿಯುಳ್ಳ ನಿರ್ವಾಸಿತರೂ ಇದ್ದಾರೆ. ಈ ನಿರ್ವಾಸಿತರ ವ್ಯವಸಾಯಗಳಿಂದ ದಿಲ್ಲಿಯಲ್ಲಿ ಜೀವನದ ರಸಿಕತೆಯು ಕೂಡ ಹೆಚ್ಚಿದೆ.

* * *

ದಿಲ್ಲಿಯ ನಾಗರಿಕನಿಗೆ ಬೆಲೆ ಇದೆ, ಶಬ್ದಶಃ ಆ ಮಾತು ಸತ್ಯ. ಕೇಂದ್ರ ಸರಕಾರದ ಮುಖ್ಯಸ್ಥಳವಾದುದರಿಂದ ದೊಡ್ಡ ದೊಡ್ಡ ಸಂಬಳದ ಅಧಿಕಾರಿಗಳೂ ಅಸಂಖ್ಯರಾಗಿದ್ದಾರೆ. ಬ್ರಿಟಿಶರ ಕಾಲದಿಂದಲೂ ಅಧಿಕಾರಿಗೆ ಇದ್ದ ಮೇಲಿನ ಸ್ಥಾನಮಾನಗಳು ಹಾಗೆಯೆ ಉಳಿದಂತಿವೆ. ವಾಸಸ್ಥಳ, ಕ್ಲಬ್ಬು, ಉಪಾಹಾರಗೃಹ, ಸಭೆ-ಸತ್ಕಾರ — ಎಲ್ಲದರಲ್ಲಿಯೂ ಎಲ್ಲಿ ನೋಡಿದಲ್ಲಿಯೂ ಈ ಮಾತಿನ ಸತ್ಯತೆ ಕಂಡುಬರುವದು. ಸಾಮಾಜಿಕ ಜೀವನದಲ್ಲಿ ಕೂಡ ಆರ್ಥಿಕ ಸ್ಥಾನದ ಮೇಲೆಯೇ ಜನರು ಒಬ್ಬರೊಬ್ಬರೊಡನೆ ಬೆರೆಯುವರಂತೆ. "ಸಮಾನ ಶೀಲವ್ಯಸನೇಷು ಸಖ್ಯಂ" ಎಂಬ ಸಂಸ್ಕೃತ ಗಾದೆಯ ಮಾತನ್ನು "ಸಮಾನ ಹುದ್ದೆ ಸಂಬಳೇಷು ಸಖ್ಯಂ" ಎಂದು ಬದಲಾಯಿಸಿ ದಿಲ್ಲಿಗೆ ಅನ್ವಯಿಸಬಹುದು. ಒಂದೆಡೆ ಗಂಡ ಒಂದು ಮೋಟಾರಿನಲ್ಲಿ, ಹೆಂಡತಿ ಇನ್ನೊಂದು ಮೋಟಾರಿನಲ್ಲಿ ಬೇರೆ ಬೇರೆ ಸ್ಥಳಗಳಿಗೆ ಹೋದರೆ ಇನ್ನೊಂದೆಡೆ ಗಂಡ-ಹೆಂಡತಿ-ಇಬ್ಬರು ಮಕ್ಕಳು-ಒಂದು ಕೂಸು ಇಷ್ಟೆಲ್ಲ ಒಂದೇ ಒಂದು ಬೈಸಿಕಲ್ಲಿನ ಮೇಲೆ ಹೋಗುವುದನ್ನು ನೋಡಬಹುದು. ನಿಜವಾಗಿ ಇದೊಂದು ದಿಲ್ಲಿಯ ವೈಶಿಷ್ಟ್ಯವೆಂದೇ ಹೇಳಬಹುದು. ಮುಂದಿನ ಸಲಾಕಿಯ ಮೇಲೆ ಇಬ್ಬರು ಹುಡುಗರು; ಹಿಂದೆ ಕ್ಯಾರಿಯರದ ಮೇಲೆ ಹೆಂಡತಿ, ಅವಳ ಬಗಲಲ್ಲಿ ಒಂದು ಕೂಸು ; ನಡುವೆ ಸೀಟಿನ ಮೇಲೆ ಗಂಡ ; ಒಮ್ಮೊಮ್ಮೆ ಮುಂದೆ ತೂಗ ಹಾಕಿದ ಬುಟ್ಟಿಯಲ್ಲಿ ಇನ್ನೊಂದು ಕೂಸು ಇಲ್ಲವೆ ಕಾಯಿಪಲ್ಲೆ ; ನಗರದ ಮುಖ್ಯ ಬೀದಿಯಲ್ಲಿ ಸಂಸಾರಿಗನು ಈ ರೀತಿ ಸೈಕಲ್ ಸರ್ಕಸನ್ನು ಮಾಡುವದನ್ನು ದಿಲ್ಲಿಯಲ್ಲಿ ಬೇಕಾದಷ್ಟಾಗಿ ಕಾಣಬಹುದಾಗಿದೆ.

ಮೇಲೆ ಹೇಳಿದೆನಲ್ಲವೆ ಇಲ್ಲಿಯವರ ತಾಳ್ಮೆ ಹೆಚ್ಚೆಂದು? ಯಾತಕ್ಕಾಗಿ ಇಷ್ಟೊಂದು ಕಷ್ಟವನ್ನು ಸಹಿಸುವ ಈ ಸಂಸಾರಿಗ? ಇದಕ್ಕೆ ಒಂದೇ ಉತ್ತರವಿದೆ- ಬೆಳಗಿನಿಂದ ಸಂಜೆಯವರೆಗೆ ಆರು ದಿನ ಆಫೀಸಿನಲ್ಲಿ ದುಡಿದದ್ದಕ್ಕೆ ಏಳನೆಯ ದಿನವನ್ನು ತನ್ನ ಹೆಂಡಿರು-ಮಕ್ಕಳೊಡನೆ ಕಳೆಯಬೇಕೆಂದು ಇವನು ಬುತ್ತಿಯನ್ನು ಕಟ್ಟಿಕೊಂಡು ಲಾಲ್‌ಕಿಲ್ಲೆಗೊ ಜಮುನೆಯ ದಡಕ್ಕೋ ನಡೆದಿದ್ದಾನೆ. ಇದು ರಸಿಕತೆಯ ಲಕ್ಷಣವಲ್ಲದಿದ್ದರೆ ಇನ್ನಾವುದು? ಬಸ್ಸಿಗೆ ಹಣ ತೆತ್ತು ಅಯ್ದು ಜನರನ್ನು ಕರೆದುಕೊಂಡು ಹೋಗಲು ಅವನ ಸಂಬಳ ಸಾಲುವುದಿಲ್ಲ. ಅದಕ್ಕಾಗಿ ಅವನು ಸೈಕಲ್ಲಿನ ಪೂರ್ತಿ ಲಾಭವನ್ನು ಪಡೆದುಕೊಳ್ಳುತ್ತಿದ್ದಾನೆ.

ಮುಂಬಯಿಯ ಕಡೆಯಿಂದ ಬಂದ ಜನರಿಗೆ ಒಂದು ಸಂಗತಿ ಚಮತ್ಕೃತಿಯನ್ನುಂಟುಮಾಡುವುದು. ಅದರಲ್ಲಂತೂ ಮುಂಬಯಿಯೊಳಗಿನ ಇರಾಣಿ ಚಹದಂಗಡಿಯನ್ನು ಬಲ್ಲವನಿದ್ದರೆ ಮುಗಿದೇ ಹೋಯಿತು, ದಿಗ್‌ಭ್ರಾಂತನಾಗುವನು. ಇಲ್ಲಿ ಉಪಹಾರ ಗೃಹದಲ್ಲಿ ಹೊಕ್ಕರೆ ಕನಿಷ್ಠ ಒಂದು ರೂಪಾಯಿ ತಗಲುವುದು. ಎರಡು ಕಪ್ ಚಹಕ್ಕೆ ಇದು ಬಹಳ ಎನ್ನಿಸಿದರೆ ರಸ್ತೆಗುಂಟ ಅಗ್ಗಿಷ್ಟಿಗಿಯಲ್ಲಿ ಕುದಿಸುತ್ತಿದ್ದ ಚಹವನ್ನು, ಅಲ್ಲಿಯೇ ರಸ್ತೆಯ ಮೇಲೆಯೇ, ನಿಂತು ಕುಡಿಯಬೇಕು. ಇವೆರಡರ ನಡುವಿನ ಯಾವ ವ್ಯವಸ್ಥೆಯೂ ದೊರಕದು. ಯಾಕೋ? ಹಿಂದಿನ ಕಾಲದ 'ಸಾಹೇಬಕಿ'ಯ ಅವಶೇಷವಾಗಿರಬಹುದೇ? ಇಲ್ಲವೆ ಇಲ್ಲಿ ತೀರ ಧನಿಕರು ಮತ್ತು ತೀರ ಬಡವರು ಎಂದು ಎರಡೇ ವರ್ಗಗಳಿದ್ದು ಮಧ್ಯಮ ವರ್ಗವೆ ಇಲ್ಲವೆ? ಕಣ್ಣು ಕುಕ್ಕಿಸುವ ಬೆಳಕನ್ನು ಚಲ್ಲುವ ಮೋಟಾರಕಾರ ಒಡೆಯರು, ರಾತ್ರಿಯಲ್ಲಿ ಕೂಡ ದೀಪವಿಲ್ಲದೆ ಸಾಗುವ ಸೈಕಲ್-ಸಂಸಾರಿಗರು ಈ ಅಂತರ ಬಲು ದೊಡ್ಡದಿದೆ.

* * *

ದಿಲ್ಲಿಯಲ್ಲಿ ಎಲ್ಲ ದೃಷ್ಟಿಗಳಿಂದಲೂ ದೂರದ ಅಂತರಗಳಿವೆ. ಒಂದೆಡೆ ಹಳೆಯ ದಿಲ್ಲಿಯಲ್ಲಿ ಗೋಡೆಗೆ ಗೋಡೆ ಹತ್ತಿದ ಮನೆಗಳಿವೆ, ಇನ್ನೊಂದೆಡೆ ಹೊಸದಿಲ್ಲಿಯಲ್ಲಿ ಅರ್ಧಮೈಲಿನ ಆವಾರಗಳಿದ್ದ ಬಂಗಲೆಗಳಿವೆ. ಹಳೆ ದಿಲ್ಲಿ ಕ್ರಮೇಣ ಬೆಳೆದಿದ್ದರೆ ಹೊಸದಿಲ್ಲಿ ಕೃತ್ರಿಮವಾಗಿ ರಚಿತವಾಗಿದೆ. ಒಂದೇ ತರದ ಬಂಗಲೆಗಳು, ಒಂದೇ ಅಳತೆಯ ರಸ್ತೆಗಳು, ಒಂದೇ ಮಾದರಿಯ ಕೂಟದಾರಿಗಳು ಇದೆಲ್ಲ ಹೊಸದಿಲ್ಲಿಯ ಕೃತ್ರಿಮತೆಯನ್ನು ಕಣ್ಣೊತ್ತಿ ಸಾರುತ್ತಿದೆ. ಒಂದು ಕಟ್ಟಡದ ಶಂಕುಸ್ಥಾಪನೆ ಮಾಡುವಾಗ ದಿಲ್ಲಿಯ ಕಟ್ಟಡಗಳಲ್ಲಿ ಶಿಲ್ಪದ ಸೌಂದರ್ಯವಿಲ್ಲ ಎಂದು ಪ್ರಧಾನ ಮಂತ್ರಿ

ಗಳು ಹೇಳಿದರು. ಇಲ್ಲಿಯ ಸಾಲುಸಾಲಾದ ಕಟ್ಟಡಗಳನ್ನು ನೋಡಿದವರೆಲ್ಲ ಆ ನಾತಿಗೆ ಖಂಡಿತವಾಗಿ ಚಪ್ಪಾಳೆತಟ್ಟುವರು. ಈ ಕೃತ್ರಿಮತೆ ಕೆಲವೆಡೆ ನಾಗರಿಕರ ಜೀವನದಲ್ಲಿಯೂ ಸೇರಿಕೊಂಡಿದೆಯೆ ಎಂದೂ ಅನೇಕ ಸಲ ಸಂಶಯ ಬರುವದು. ವೇಷ, ಮಾತನಾಡುವ ರೀತಿ, ತೋರಿಕೆಯ ಸೌಜನ್ಯ—ಇಂತಹಗಳನ್ನು ಹೇರಳವಾಗಿ ಕಾಣಬಹುದಾಗಿದೆ. ಒಂದಾನೊಂದು ಕಾಲದಲ್ಲಿ ವಿದೇಶೀಯ ದೊರೆಗಳು ತಮ್ಮ ದರ್ಸವನ್ನು ಉಳಿಸಿಕೊಂಡು ಹೋಗಲು ಒಂದು ಕೃತ್ರಿಮ ಪದ್ಧತಿಯನ್ನು ಬಳಕೆಯಲ್ಲಿ ತಂದಿದ್ದರು. ಪೂರ್ವಜನ್ಮದ ಪಾಪ ಬೇಗ ಬಿಡದು ಎನ್ನಬಹುದೇ ?

ಹೋಗಲಿ, ಎಷ್ಟು ಮಾತುಗಳನ್ನು ಬರೆದರೂ ದಿಲ್ಲಿಯು ದಿಲ್ಲಿಯೆ. ಸ್ವತಂತ್ರ ಹಿಂದುಸ್ಥಾನದ ರಾಜಧಾನಿ; ಇಡಿಯ ದೇಶದ ಪಾರ್ಲಿಮೆಂಟು ಅಧಿವೇಶನವನ್ನು ನಡೆಯಿಸುವ ಮಹತ್ವದ ಕೇಂದ್ರ. ದೇಶವಿದೇಶಗಳ ರಾಯಭಾರಿಗಳ ಅಧಿಷ್ಠಾನ. ರಸ್ತೆಯಲ್ಲಿ ನಡೆವಾಗ ತಪ್ಪುದಾರಿಯಿಂದ ಬಂದ ಸೈಕಲ್ ಸವಾರ ನಮ್ಮನ್ನು ನೂಕಿದರೂ ಸರಿ, ನಮಗೆ ಸಹಾಯವಾಗುವ ಬದಲು ನಮಗಿಂತಲೂ ಅಸಹಾಯರಂತೆ ಬೀದಿಯ ಬದಿಗೆ ನಿಂತು ಪೋಲೀಸನು ಆಕಳಿಸುತ್ತಿದ್ದರೂ ಸರಿ, ಸಾವಿರಗಟ್ಟಲೆ ಸಂಸಾರಿಗರಿಗೆ ಇರಲು ತಕ್ಕ ಮನೆ ದೊರೆಯದಿದ್ದರೂ ಸರಿ, ನಿಮ್ಮ ಸಂಬಳ ಎಷ್ಟೆಂದು ಕೇಳಿ ಆ ಮೇಲೆ ನಿಮ್ಮ ಹೆಸರನ್ನು ಕೇಳುವ ಸ್ವಭಾವವಿದ್ದರೂ ಸರಿಯೆ ; ದಿಲ್ಲಿ ಎಂದರೆ ದಿಲ್ಲಿ.

# ಭಾವದೊಲವು

ಭಾವಗಳಿಲ್ಲದೆ ಬೆಳ್ಳಾಗಿ
ಅಲೆಯುತ್ತಿತ್ತು ಮನ ಬರಿದಾಗಿ.

೧

ಅರಸುತ ಬಂದು ಗುಲಾಬಿಯ ಮುಂದು
ಭಾವವ ಕೊಡು ಎನಲು
'ಭಾವವನರಿಯೆ ನನ್ನನೆ ಕೊಡುವೆ'
ಎಂದಿತು ಸುಮರಾಣಿ

೨

ಮುಂದಕೆ ಪಚ್ಚೆಯ ತೆನೆಗಳ ಬೇಡಿತು
ಭಾವವ ಕೊಡಿರೆಂದು
ಭಾವಾಭಾವವ ಸೂಚಿಸಿ ನಿಂತುವು
ಆತ್ಮಾರ್ಪಣೆಗೆಂದು

೩

ಸುತ್ತ ಪಚ್ಚೆತೆನೆ ನಡುವೆ ಗುಲಾಬಿ
ಆಹಾ, ಏನ್ ಚೆಲುವು !
ಕಬರಿಗೇರಿಸುತ ಕಮಲೆಯ ಬೇಡಿತು
( ಎಂಥ ಭಾವನೊಲವು ! )

೪

'ಭಾವವು ಬೇಕೆ ?' ಎನ್ನುತ ನಕ್ಕಳು
ಚೆಲ್ಲೆಗಣ್ಣ ಚೆಲುವೆ
ಆ ನಗೆಯೊಳೆ ಸಿರಿಭಾವವು ಮೂಡಿತು
( ಮುದವ ಪೇಳಲಳವೆ ! )

೫

. . . . . . . .
. . . . . . . .

ಭಾವಾತೀತದಿ ಅಲೆಯಾಗಿ
ತೇಲಿತು ಮನ ಪಾವನವಾಗಿ !

—ಎ. ಎಸ್. ರಾಮಕೃಷ್ಣ

# ಬದುಕು




ರಾಜಗೋಪಾಲನಿಗೆ ವಿಧಿ ಏನೂ ಅನ್ಯಾಯ ಮಾಡಿರಲಿಲ್ಲ. ಸದ್ವಂಶ, ಒಳ್ಳೆಯ ಅಧಿಕಾರದಲ್ಲಿದ್ದ ತಂದೆ. ಚಿಕ್ಕಂದಿನಲ್ಲಿ ಅವನ ಭವಿಷ್ಯದ ವಿಚಾರವಾಗಿ ಯಾರಿಗೂ ಆತಂಕವಿರಲಿಲ್ಲ. ಆಂಗ್ಲರು ಹೇಳುವಂತೆ ಬೆಳ್ಳಿಯ ಚಮಚವನ್ನು ಬಾಯಲ್ಲಿ ಕಟ್ಟಿಕೊಂಡು ಹುಟ್ಟಿದ್ದನು. ತಂದೆ ಗೋವಿಂದರಾಯರು ಅರಿತವರು. ಒಬ್ಬನೇ ಮಗನೆಂದು ಹೆಚ್ಚಳ ಮಾಡದೆ ಸಾಧಾರಣ ಮಕ್ಕಳಂತೆಯೇ ಬೆಳೆಯಲು ಬಿಟ್ಟರು.

ಆದರೆ ರಾಜನ ಹಠಸ್ವಭಾವದ ಅರಿವು ಅವರಿಗೂ ಬೇಗನೆ ಉಂಟಾಯಿತು. ಅದು ಶಿಕ್ಷೆ, ಮುದ್ದುಗಳಿಂದ ತಗ್ಗುವದಿಲ್ಲವೆಂದೂ ಕ್ರಮೇಣ ಸರಿಹೋಗಬೇಕಾದುದೆಂದೂ ತಿಳಿದಿದ್ದರು. ಆದರ್ಶದಿಂದ ಸ್ವಭಾವ ಮಾರ್ಪಡಬಹುದಾದರೆ, ರಾಜನಿಗೆ ತಂದೆಗಿಂತ ಬೇರೆ ಆದರ್ಶ ಬೇಕಾಗಿರಲಿಲ್ಲ. ಗೋವಿಂದರಾಯರದು ದೊಡ್ಡ ಗುಣ, ಅವರ ವಿಶಾಲ ಮನದಲ್ಲಿ ಯಾರೂ ಕೀಳು ಮೇಲೆಂಬ ಭಾವನೆಗೆ ಅವಕಾಶವೇ ಇರಲಿಲ್ಲ. ಜಾನಕಮ್ಮನೂ ಸಿಧಾನಿ, ಆದರೆ ಒಂದೊಂದು ಸಲ, ಮಗನ ಹಠ ಅವರ ತಾಳ್ಮೆಯನ್ನು ತಪ್ಪಿಸುತ್ತಿತ್ತು: 'ಚನ್ನಾಗಿ ನಾಲ್ಕು ಏಟು ಬಿಗಿದರೆ ಸರಿಹೋಗುತ್ತಾನೆ.'

ಗೋವಿಂದರಾಯರು ವಿಷಾದದಿಂದ ನಕ್ಕು, 'ಸುಮ್ಮನೆ ಮೊಂಡುಬೀಳುತ್ತಾನೆ ಬುದ್ಧಿ ಬಂದರೆ ತಾನೇ ಸರಿಹೋಗುತ್ತಾನೆ.'

'ಬರುತ್ತೆ, ಬುದ್ಧಿ' ಎಂದುಕೊಂಡು ಜಾನಕಮ್ಮ ಸುಮ್ಮನಾಗುವರು.

ಗೋವಿಂದರಾಯರು ನಾಲ್ಕು ಸಲ ಗಡಿಯಾರ ನೋಡಿಬಂದರು. ಜಾನಕಮ್ಮ ಅಡಿಗೆಮನೆಯಲ್ಲೇ ಇದ್ದರು. ಹೊರಬಾಗಿಲು ಸದ್ದಾದ ಹಾಗೆ ಕೇಳಿಸಿ ತೆಗೆದು ನೋಡಿದರು. ಗಾಳಿಗೆ ಕದ ಅಲುಗಿತ್ತು. ಗಡಿಯಾರ ನೋಡಿ ಹಿಂದಿರುಗುತ್ತಿದ್ದ ಗಂಡನನ್ನು ನೋಡಿ, 'ನೀವು ಊಟಕ್ಕೇಳಿ ಬರ್‍ತಾನೆ' ಎಂದರು.

'ಒಂಬತ್ತು ಘಂಟೆಯಾಯಿತು ಇನ್ನೂ ಬರಲಿಲ್ಲ. ಸಿನಿಮಾಗೆ ಹೋದನೇನೋ' ಮನಸ್ಸಿಗೆ ಆಗುತ್ತಿದ್ದ ಗಾಬರಿಯನ್ನು ಮರೆಸುತ್ತಾ ಗೋವಿಂದರಾಯರು ಒಳಗೆ ಹೋದರು.

ಜಾನಕಮ್ಮ ಬೇಸರದಿಂದ ಬರ್‍ತಾ ಬರ್‍ತಾ ಹಾಳಾಗ್ತಾ ಇದ್ದಾನೆ ಎಂದುಕೊಂಡರು.

ರಾಜು ಬಾಗಿಲು ತಟ್ಟಿದನು. ಜಾನಕಮ್ಮ ಬಾಗಿಲು ತೆಗೆದು, 'ಯಾಕೋ ರಾಜು ಇಷ್ಟು ಹೊತ್ತಾಯಿತು ?' ಎಂದರು.

ಆ ಮಾತಿಗೇ ರಾಜು ಮುಖ ಬಿಗಿದುಕೊಂಡು ಹುಬ್ಬುಗಂಟು ಹಾಕಿದನು. ಮೊಟಕಾಗಿ 'ಹೊತ್ತಾಯಿತು' ಎಂದನು. ಜಾನಕಮ್ಮನೂ ಕೋಪದಿಂದಲೇ, 'ನಿನಗಾಗಿ ಊಟಕ್ಕೆ ಕಾದಿದ್ದಾರೆ. ಹೊತ್ತಾಗಿ ಊಟಮಾಡಿದರೆ ಅವರ ಮೈಗಾಗುವುದಿಲ್ಲ. ಮನೆಗೆ ಬೇಗ ಬಂದು ಸ್ವಲ್ಪ ಪಾಠಗೀಠ ಮಾಡಬಾರದೇ ? ಇಷ್ಟು ಹೊತ್ತಿನ ವರೆಗೂ ಏನು ನಿನಗೆ ರಾಜಕಾರ್ಯ ?' ಎಂದರು.

'ಕಾದಿರೆಂದು ನಾನು ಹೇಳಿದೆನೇ ?' ಎಂದು ರಾಜು ತನ್ನ ಕೊಠಡಿಯೊಳಕ್ಕೆ ಹೋದನು.

ಚೆನ್ನಾಗಿ ನಾಲ್ಕೇಟು ಬಿಗಿಯಬೇಕೆಂದು ಜಾನಕಮ್ಮನಿಗೆನಿಸಿತು. 'ಯಾವ ಪುರುಷಾರ್ಥಕ್ಕಾಗಿ ಇಂಥ ಮಕ್ಕಳು ಹುಟ್ಟಬೇಕೋ' ಎಂದುಕೊಂಡು ಒಳಗೆ ಹೋಗಿ ತಟ್ಟೆಗಳನ್ನು ಹಾಕಿದರು.

ಊಟಕ್ಕೆ ಕುಳಿತಾಗಲೂ ರಾಜು ಮೌನ. ಗೋವಿಂದರಾಯರೇ, 'ಸಿನಿಮಾಗೆ ಹೋಗಿದ್ದೆಯಾ ರಾಜು?' ಎಂದರು. ರಾಜು 'ಇಲ್ಲ' ಎಂದು ಒಂದೇ ಮಾತು ಉತ್ತರಕೊಟ್ಟು ಸುಮ್ಮನಾದನು.

ಮನಸ್ಸಿನ ವ್ಯಥೆಯನ್ನು ನುಂಗಿಕೊಳ್ಳುತ್ತಾ, ಗೋವಿಂದರಾಯರು ಊಟಮಾಡುತ್ತಿದ್ದರು. ಜಾನಕಮ್ಮನೇ ಬೇಸರದಿಂದ, 'ಇನ್ನು ಮೇಲೆ ಇಷ್ಟು ಹೊತ್ತು ಮಾಡಿಕೊಂಡು ಬರಬೇಡ. ಎಲ್ಲಿಗೆ ಹೋದೆ ಅಂತ ತಿಳಿಯದೆ ಎಷ್ಟು ಒದ್ದಾಡೋದು. ಕತ್ತಲಾಗುವ ವೇಳೆಗೆ ಮನೆ ಸೇರದಿದ್ದರೆ ನಾನು ಸುಮ್ಮನಿರುವದಿಲ್ಲ' ಎಂದರು.

ಊಟಮಾಡುತ್ತಿದ್ದ ರಾಜು ತಟ್ಟನೆ ಕೈತೊಳೆದುಕೊಂಡು ಎದ್ದುಹೋದನು. ಗೋವಿಂದರಾಯರು 'ಊಟವಾಗುವವರೆಗೆ ಸುಮ್ಮನಿರಬಾರದೇ ಜಾನೂ!' ಎಂದರು.

'ನನಗೆ ಮೈಯೆಲ್ಲಾ ಉರಿಯುತ್ತೆ. ನೀವು ಸುಮ್ಮನಿರುತ್ತೀರಿ ಎಂದು ಅವನು ಹೀಗಾಗಿದ್ದಾನೆ. ಹೊತ್ತುಮಾಡಿಕೊಂಡು ಬಂದರೆ ನಾಲ್ಕೇಟು ಬಿಗಿಯುತ್ತೀರಿ ಎಂಬ ಹೆದರಿಕೆಯಿದ್ದರೆ ಸರಿಹೋಗುತ್ತಾನೆ.'

ಆಗ ರಾಜುವಿಗಿನ್ನೂ ಹನ್ನೆರಡು ವರ್ಷ.

ಗೋವಿಂದರಾಯರು ಜಾನಕಮ್ಮನ ಈ ಮಾತುಗಳನ್ನು ಮುಂದೆ ಎಷ್ಟೋ ಬಾರಿ ನೆನೆದುಕೊಂಡು, ತಪ್ಪು ತಮ್ಮದೇನೋ ಎಂದು ನಡುಗಿದರು.

* * * *

ಜಾನಕಮ್ಮನ ಮರಣ ರಾಜುವಿನ ಮೇಲೆ ಮಹತ್ಪರಿಣಾಮವನ್ನುಉಂಟುಮಾಡಬಹುದೆಂದು ಗೋವಿಂದರಾಯರು ಭಾವಿಸಿದ್ದರು. ಎಂಟೇ ದಿನದ ಜ್ವರ ಆಕೆಯ ಆಯುಸ್ಸನ್ನು ಮುಗಿಸಿತ್ತು. ಗೋವಿಂದರಾಯರಂತೂ ತೀರ ಕುಗ್ಗಿಹೋದರು. ಹೆಂಡತಿಯ ಜೀವವನ್ನುಳಿಸಲು ತಾವು ಸಾಕಾಷ್ಟು ಪ್ರಯತ್ನ ಮಾಡಲಿಲ್ಲವೇನೋ ಎಂದು ಮನಸ್ಸು ಬಾಧಿಸುತ್ತಿತ್ತು. ಆದರೆ ರೋಗದ ಪರಿಚಯವಾಗುವ ಮೊದಲೇ ಮುಕ್ತಾಯವಾಗಿ

ಹೋಗಿತ್ತು. ಮೊದಲೆರಡು ದಿನ ಸಾಧಾರಣ ಜ್ವರವೆಂದು ಲಕ್ಷ್ಯಮಾಡಲೇ ಇಲ್ಲ. ಜಾನಕಮ್ಮನು ಮಲಗಲಿಲ್ಲ. ನಾಲ್ಕೈದು ದಿನವಾದ ಮೇಲೆ, ಆಕೆ ಜ್ಞಾನ ತಪ್ಪಿ ಬಿದ್ದಾಗ, ಡಾಕ್ಟರನನ್ನು ಕರೆಸಿದ್ದರು. ಆತನಿಗೆ ನಾಡಿ, ಹೃದಯ ಯಾವುದೂ ಧೈರ್ಯಗೊಡಲಿಲ್ಲ.

ತಾಯಿಯ ಮಂಚದ ಬಳಿ ರಾಜು ಕುಳಿತಿದ್ದನು. ಜಾನಕಮ್ಮ ಕಣ್ಣು ಬಿಟ್ಟು ನೋಡಿ, ' ರಾಜು, ' ಎಂದರು. ಕಣ್ಣು ತುಂಬಿದ್ದ ರಾಜು ಒರಿಸಿಕೊಂಡು ತಾಯಿಯ ಬಳಿಗೆ ಸರಿದನು. ಜಾನಕಮ್ಮನಿಗೆ ಸಮಾಧಾನವಾದಂತಾಗಿ, ' ರಾಜು, ಅಪ್ಪನ ಮನಸ್ಸು ನೋಯಿಸಬೇಡ. ನೀನು ಬಿಟ್ಟರೆ ಅವರನ್ನು ಕೇಳುವವರು ಯಾರಿದ್ದಾರೆ?' ಎಂದರು. ರಾಜುವಿನ ದೃಷ್ಟಿ ದಿಗಂತದಲ್ಲಿ ನೆಲೆಸಿತು. ಗೋವಿಂದರಾಯರು ಔಷಧಿ ಹಿಡಿದು ಬಂದಾಗ, ರಾಜು ಹೊರಕ್ಕೆದ್ದು ಹೋದನು.

ಜಾನಕಮ್ಮ ಹಣೆಯಲ್ಲಿ ಕುಂಕುಮವಿಟ್ಟು, ಹೂ ಮುಡಿದು ಮರಳದ ಹಾದಿಯಲ್ಲಿ ಹೊರಟು ಹೋಗಿದ್ದರು. ಕೆಲವು ದಿನ ಗೋವಿಂದರಾಯರಿಗೆ ರಾಜುವಿನ ಪರಿವೆಯೂ ಇಲ್ಲ. ಹೆಂಗಸಾದರೆ ದುಃಖವನ್ನು ತೋಡಿಕೊಂಡು ಅಳಬಹುದು. ಗಂಡಸು, ಜಾನಕಮ್ಮ ಬರಿಯ ಮಾಡಿ ಹೋದ ಹೃದಯವನ್ನು ಯಾರೆದುರು ಬಿಚ್ಚಿ, ಹರಡಿ, ಸಹಾನುಭೂತಿಯನ್ನು ಕೋರುವುದು! ಅಡುಗೆಯವನು ಎಲೆ ಹಾಕಿದಾಗ ಊಟಮಾಡುವುದು, ಮಿಕ್ಕ ಸಮಯವನ್ನು ಕೊಠಡಿಯಲ್ಲಿ ಕಳೆಯುವುದು. ಮೊದಲ ಆವೇಗ ಸ್ವಲ್ಪ ಕಡಿಮೆಯಾದ ಮೇಲೆ ತಟ್ಟನೆ ಜ್ಞಾನೋದಯವುಂಟಾಯಿತು. ಬುದ್ಧಿ ಬೆಳೆದ ತಾನೇ ಹೀಗೆ ವ್ಯಥೆಪಡುತ್ತಿದ್ದರೆ, ಎಳೆಯ ಕಂದ ರಾಜುವಿನ ಗತಿಯೇನು? ತನ್ನ ಹಕ್ಕರಷ್ಟು ದುಃಖ ಅವನದಲ್ಲವೆ? ಕರಗಿದ ಮನಸ್ಸಿನಿಂದ ' ರಾಜೂ, ' ಎಂದು ಕೂಗಿದರು. ಉತ್ತರ ಕೊಟ್ಟವನು ಆಳು, ' ಅವರಿನ್ನೂ ಮನೆಗೆ ಬಂದಿಲ್ಲ. '

' ಎಲ್ಲಿ ಹೋಗಿದ್ದಾನೆ? ' ಸ್ವಲ್ಪ ಜ್ಞಾಪಿಸಿಕೊಂಡು, ' ಸ್ಕೂಲಿದೆಯಲ್ಲವೆ?' ಎಂದು ಸುಮ್ಮನಾದರು.

ಸಂಜೆ ಆರು ಘಂಟೆಗೆ ಪುನಃ ರಾಜುವನ್ನು ಹುಡುಕಿಕೊಂಡು ಹೋದರು. ಆಗಲೂ ಅವನು ಮನೆಗೆ ಬಂದಿರಲಿಲ್ಲ. ರುಮಾಲು ಹಾಕಿಕೊಂಡು ಸ್ಕೂಲಿನ ಕಡೆ ಹೊರಟರು. ಬಾಗಿಲಲ್ಲಿ ಹೆಡ್ ಮೇಷ್ಟ್ರು ರಂಗರಾಯರು ಸಿಕ್ಕಿ ' ನಮಸ್ಕಾರ ' ಎಂದರು.

ಗೋವಿಂದರಾಯರು ' ರಾಜು ಮನೆಗೆ ಬರಲಿಲ್ಲ ನೋಡಿಕೊಂಡು ಹೋಗೋಣವೆಂದು ಬಂದೆ ' ಎಂದರು.

ರಂಗರಾಯರು, ' ಇವತ್ತು ಅವನು ಸ್ಕೂಲಿಗೆ ಬಂದ ಹಾಗಿಲ್ಲ. ಏನ್ರೀ ಶ್ರೀನಿವಾಸರಾವ್, ಇವರ ಮಗ ರಾಜು ಸ್ಕೂಲಿಗೆ ಬಂದಿದ್ದನೆ? '

ಶ್ರೀನಿವಾಸರಾಯರು, ಸ್ವಲ್ಪ ಬೇಸರದಿಂದಲೆ, ' ಎಂಟು ದಿನದಿಂದ ಅವನು ಸ್ಕೂಲಿಗೇ ಬರಲಿಲ್ಲ' ಎಂದರು.

ರಂಗರಾಯರು ಪರಿಚಯದ ಸಲುಗೆಯಿಂದ, ' ನೀವು ಸ್ವಲ್ಪ ವಿಚಾರಿಸಬೇಕು ಸ್ವಾಮಿ. ಮೆಟ್ರಿಕ್ಯುಲೇಷನ್ ಕ್ಲಾಸಿನಲ್ಲಿ ಹೀಗೆ ತಪ್ಪಿಸಿಕೊಂಡರೆ ಆಗುವುದಿಲ್ಲ. ಅವನದು ಸ್ವಲ್ಪ ಹಠದ ಸ್ವಭಾವ.'

ಗೋವಿಂದರಾಯರು, ' ಅದು ತಂದೆಯ ಪಕ್ಷಪಾತಿ ಬುದ್ಧಿಗೂ ತಿಳಿಯುತ್ತೆ ರಂಗರಾಯರೆ! ಅವನ ಕರ್ಮ ನಡೆಸಿದ ಹಾಗಾಗುತ್ತೆ. ಅವನ ತಾಯಿ ಹೋಗಿಬಿಟ್ಟಳು ' ಎಂದರು.

ರಂಗರಾಯರು, ' ತಿಳಿಯಿತು ಸ್ವಾಮಿ, ಪೇಪರಿನಲ್ಲೋದಿದೆ. ಮನೆಯ ಹತ್ತಿರವೂ ಬಂದಿದ್ದೆ. ನೀವು ಒಳಗಿದ್ದಿರಿ, ತೊಂದರೆ ಮಾಡಲು ಇಷ್ಟವಿಲ್ಲದೆ ಬಂದೆ. ರಾಜು ವಿಚಾರ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಬುದ್ಧಿ ಬಂದರೆ ಸರಿಹೋಗುತ್ತಾನೆ' ಎಂದರು.

ಗೋವಿಂದರಾಯರು ನಿಟ್ಟುಸಿರು ಬಿಟ್ಟು ಮನೆಗೆ ಬಂದರು. ರಾತ್ರಿ ಎಂಟು ಘಂಟೆಗೆ ಮನೆ ಸೇರಿದ ರಾಜುವನ್ನು ಕರೆದು ' ಸ್ಕೂಲಿಗೆ ಹೋಗುತ್ತಿಲ್ಲವೇನೋ? ' ಎಂದರು.

' ಇಲ್ಲ. '

' ಏಕೆ? ಮೆಟ್ರಿಕ್ಯುಲೇಷನ್ ಕ್ಲಾಸಿನಲ್ಲಿ ಸ್ಕೂಲಿಗೆ ತಪ್ಪಿಸಿಕೊಂಡರೆ ಪಾಸಾಗುತ್ತೀಯಾ?'

ರಾಜು ಸುಮ್ಮನೆ ನಿಂತಿದ್ದನು. ಬಿಗಿದ ಹುಬ್ಬುಗಳು ಅವನ ಮನಸ್ಸಿನ ಸ್ಥಿತಿಯನ್ನು ಸಾರುತ್ತಿದ್ದುವು.

' ನಿಮ್ಮಮ್ಮ ನೀನು ಮುಂದಕ್ಕೆ ಬರುತ್ತೀಯೆಂದು ಬಹಳ ಆಸೆ ಇಟ್ಟುಕೊಂಡಿದ್ದಳು. ಈಗ ವಿಚಾರಿಸಿಕೊಳ್ಳುವುದಕ್ಕೆ ಅವಳೂ ಇಲ್ಲ.' ರಾಜು ಎಲ್ಲೋ ನೋಡುತ್ತಿದ್ದನು. ಅವನ ಮನಸ್ಸಿಗೆ ವ್ಯಥೆಯಾಯಿತೆಂದು ಮರುಗಿ ಗೋವಿಂದರಾಯರು ತಲೆಯನ್ನು ನೇವರಿಸಿ, ' ಓದಿ ಬುದ್ಧಿವಂತನಾಗು ರಾಜು ' ಎಂದರು.

ನೇವರಿಸುತ್ತಿದ್ದ ಅವರ ಕೈಯನ್ನು ಸರಿಸಿ, ರಾಜು ಹೊರಕ್ಕೆ ಹೋದನು.

ಕೆಲವು ದಿನದ ಮೇಲೆ ಗೋವಿಂದರಾಯರು ಪುನಃ ರಂಗರಾಯರನ್ನು ವಿಚಾರಿಸಿಕೊಂಡು ಹೋದರು. ಅವರು ಅಸಡ್ಡೆಯಿಂದ, ' ಸ್ಕೂಲಿಗೇನೋ ಬರುತ್ತಿದ್ದಾನೆ, ಆದರೆ ಪಾಠಗಳಲ್ಲಿ ಏನೂ ಪ್ರಯೋಜನವಿಲ್ಲ ' ಎಂದರು.

' ಮನೆಗೆ ಬಂದು ಪಾಠ ಹೇಳಲು ಮೇಷ್ಟ್ರನ್ನು ಗೊತ್ತು ಮಾಡಲೆ? '

'ಬೇಕಾದರೆ ಮಾಡಿ ನೋಡಿ.'

ಗೋವಿಂದರಾಯರು, ಶ್ರೀನಿವಾಸರಾಯರನ್ನೇ ಕೇಳಿ ನೋಡಿದರು. ಅವರು ರಾಜುವಿನೊಡನೆ ಹೆಣಗಾಡಿ, ಗೋವಿಂದರಾಯರಿಗೆ ಖಂಡಿತವಾಗಿ ಹೇಳಿದರು. ' ಇದರಿಂದ ಪ್ರಯೋಜನವಿಲ್ಲ ಸ್ವಾಮಿ. ಅವನು ಕಲಿಯುವುದಿಲ್ಲ. ಮನಸ್ಸು ಮಾಡಿದರೆ ಬುದ್ಧಿ ಇದೆ. ಅವನಿಗಿರುವುದೊಂದೇ ರೋಗ. ಒಬ್ಬರು ಹೇಳಿದ ಹಾಗೆ ನಡೆಯಕೂಡದೆಂಬ ಹಠ. ತಾನೊಬ್ಬ ಮಹಾವಿಭೂತಿಯೆಂದುಕೊಂಡಿದ್ದಾನೆ. ನನಗೆ ಸಾಧ್ಯವಿಲ್ಲ ಸ್ವಾಮಿ. ನಿಮ್ಮ ಹತ್ತಿರ ಸುಳ್ಳು ಹೇಳಿ ದುಡ್ಡು ಹೊಡೆದ ಹಾಗಾಗುತ್ತೆ. ನನಗೆ ಇಷ್ಟವಿಲ್ಲ' ಎಂದು ನಮಸ್ಕಾರ ಹಾಕಿ ಹೊರಟುಹೋದರು.

ಆ ದಿನ ಮಾತ್ರ ಗೋವಿಂದರಾಯರಿಗೆ ತುಂಬಾ ಬೇಸರವಾಯಿತು. ರಾಜುವನ್ನು ಕರೆದು ಎಷ್ಟೋ ಉಪದೇಶ ಮಾಡಿದರು. ತಾವು ಲಕ್ಷಾಧಿಕಾರಿಯಲ್ಲವೆಂದೂ ಕುಳಿತು ಉಂಡರೆ ತಮ್ಮ ಆಸ್ತಿ ರಾಜುವಿನ ಜೀವಮಾನವೆಲ್ಲಾ ಸಾಲುವುದಿಲ್ಲವೆಂದೂ ಹೇಳಿದರು. ತಮಗಿದ್ದ ಆಶೆ ಅಭಿಲಾಷೆಗಳನ್ನು ವಿವರಿಸಿದರು.

ಎಲ್ಲದಕ್ಕೂ ಬಿಗಿದ ಹುಬ್ಬಿನ ಮೌನವೇ ರಾಜುವಿನ ಉತ್ತರವಾಯಿತು.

ಆದರೆ ಅದಾದ ಏಳೆಂಟು ದಿನ ರಾಜು ಹೊತ್ತುಹೊತ್ತಿಗೆ ಮನೆಸೇರಿ ಕೋಣೆಯಲ್ಲಿ ಬಾಗಿಲು

ಹಾಕಿ ಕುಳಿತುಕೊಳ್ಳುತ್ತಿದ್ದುದನ್ನು ಗಮನಿಸಿ ರಾಯರು ನಮ್ಮ ಉಪದೇಶ ಫಲಿಸಿತೆಂದು ಹಿಗ್ಗಿದರು. ತಾಯಿಯಿಲ್ಲದ ತಬ್ಬಲಿ, ತಾವು ಅಷ್ಟು ಕಠಿಣನಾಗಿ ಮಾತನಾಡಬಾರದಾಗಿತ್ತೆಂದುಕೊಂಡರು. ಕಚೇರಿಯಿಂದ ಹಿಂದಿರುಗುತ್ತಾ ಹಾದಿಯಲ್ಲಿ ಸಿಕ್ಕಿದ ರಂಗರಾಯರನ್ನು ಸ್ವಲ್ಪ ಉಲ್ಲಾಸದಿಂದಲೇ 'ನಮ್ಮ ಹುಡುಗ ಹೇಗಿದ್ದಾನೆ?' ಎಂದರು. ರಂಗರಾಯರು ಮುದುಕನ ಭ್ರಾಂತಿಗೆ ಬೇಸರಪಟ್ಟು, 'ಅವನು ಸ್ಕೂಲಿಗೆ ಬರುವದೇ ಇಲ್ಲ' ಎಂದರು. ಗೋವಿಂದರಾಯರ ಗಾಳಿಗೋಪುರಗಳೆಲ್ಲಾ ಕುಸಿದುಬಿದ್ದವು. ರೋಷ ಬೇಸರಗಳು ಉಕ್ಕಿ ಬಂದವು. ಹೆಚ್ಚು ಮಾತನಾಡದೆ ಮನೆಗೆ ಬಂದರು. ರಾಜು ಕೋಟು ಹಾಕಿಕೊಂಡು ಎಲ್ಲಿಗೋ ಹೊರಟಿದ್ದನು. ಅವನ ಕೋಟಿನ ಕಾಲರನ್ನು ಹಿಡಿದು ತಮ್ಮ ಕೋಣೆಗೆ ಎಳೆದುಕೊಂಡು ಹೋಗಿ, ಕೈಲಿದ್ದ ಬೆತ್ತದಿಂದ ಮುಖ ಮುಂದೆ ನೋಡದೆ ಚನ್ನಾಗಿ ಬಿಗಿದು 'ತೊಲಗಾಚೆ' ಎಂದರು.

ರಾಜುವಿನ ಬಾಯಲ್ಲಿ ಮಾತಿಲ್ಲ; ಕಣ್ಣಲ್ಲಿ ಒಂದು ತೊಟ್ಟು ನೀರಿಲ್ಲ. ತಂದೆಯನ್ನು ತಲೆಯೆತ್ತಿ ನೋಡದೆ ಹೊರಗೆ ಹೋದನು. ಕುರ್ಚಿಯ ಮೇಲೆ ಕುಸಿದು ಗೋವಿಂದರಾಯರು ಮುಖ ಮುಚ್ಚಿಕೊಂಡು ಗಳಗಳನೆ ಅತ್ತುಬಿಟ್ಟರು. 'ಈವತ್ತು ನನ್ನ ಮೇಲೆ ಏನು ಪಿಶಾಚಿ ಬಂತು! ಎಂಥಾ ಕೆಲಸ ಮಾಡಿಬಿಟ್ಟೆ' ಎಂದು ಅವರ ಜೀವ ಒದ್ದಾಡಿತು. ಎದ್ದು ಹೋಗಿ ರಾಜುವನ್ನು ರಮಿಸಬೇಕೆನ್ನಿಸಿತು. ಆದರೆ ಬಿಗಿದ ಅವನ ಹುಬ್ಬು ನೆನಪಿಗೆ ಬಂದು ತಡೆಯಿತು. ಸ್ವಲ್ಪ ಹೊತ್ತಾದ ಮೇಲೆ 'ರಾಜೂ' ಎಂದು ಕೂಗಿದರು. 'ಅವರು ಮನೆಯಲ್ಲಿಲ್ಲ' ಎಂದು ಆಳು ಉತ್ತರ ಕೊಟ್ಟನು. ಆಗ ರಾಜುವಿಗಿನ್ನು ಹದಿನಾಲ್ಕು ವರ್ಷ.

*   *   *   *

ಎಂಟು ದಿನವಾದರೂ ರಾಜು ಮನೆ ಸೇರಲಿಲ್ಲ. ಗೋವಿಂದರಾಯರು ತೀರ ಗಾಬರಿಯಾಗಿ ಪೋಲೀಸರಿಗೆ ದೂರು ಕೊಟ್ಟರು. ಕೆರೆ ಭಾವಿಗಳನ್ನು ಹುಡುಕಿಸಿದರು. ಎಲ್ಲಿಯೂ ಪತ್ತೆಯಿಲ್ಲ. ಪಶ್ಚಾತ್ತಾಪದಿಂದ ಅವರ ಹೃದಯ ಬೆಂದು ಹೋಯಿತು. ತಾಯಿಯಿಲ್ಲದ ತಬ್ಬಲಿ; ಅವನನ್ನು ಹಾಗೆ ಹೊಡೆಯಬಹುದೆ? ರಮಿಸಿ, ಅವನ ಆಸೆ ಆಕಾಂಕ್ಷೆಗಳನ್ನು ತಿಳಿಯಲು ಪ್ರಯತ್ನಿಸಬೇಡವೆ ಎಂದು ತಲ್ಲಣಿಸಿತು. ಹಾಗೆಯೇ ಆಲೋಚಿಸಲು ಬುದ್ಧಿ ಬಂದ ಮೇಲೆ ಅವನೆಂದೂ ಮನಬಿಚ್ಚಿ ಮಾತನಾಡಿದವನಲ್ಲವೆಂದು ನೆನಪಿಗೆ ಬಂತು. ಒಬ್ಬ ಅಣ್ಣತಮ್ಮನಿದ್ದಿದ್ದರೆ ಅವನು ಹೀಗಾಗುತ್ತಿರಲಿಲ್ಲವೇನೋ. ಒಂಟಿಯಾಗಿ ಬೆಳೆದುದರಿಂದ ಕಠಿಣವಾದ ಮುಸಕನ್ನೆಳೆದುಕೊಂಡನೇನೋ ಎಂದು ಮರುಗಿದರು. ನಿದ್ರಾಹಾರಗಳಿಲ್ಲದೆ ಪರಿತಪಿಸಿದರು. ಹೊರಗೆಲ್ಲಿ ಹೋದರೂ ರಾಜು ಕಣ್ಣಿಗೆ ಬೀಳುವನೇನೋ ಎಂಬ ಆಸೆ. ಒಂದು ದಿನ ಮನೆಗೆ ಬರುವ ವೇಳೆಗೆ ಜಗುಲಿಯ ಮೇಲೆ ರಾಜು ಕುಳಿತಿದ್ದನು. ಮಾಸಿದ ಬಟ್ಟೆ, ಅನ್ನ ಕಾಣದ ಮುಖ. ಗೋವಿಂದರಾಯರಿಗೆ ಸಂತೋಷ ದುಃಖಗಳು ಉಕ್ಕಿ ಬಂದು, 'ರಾಜು' ಎಂದರು. ರಾಜು ತಂದೆಯನ್ನು ನೋಡಿ ಯಾವ ಉದ್ವೇಗವನ್ನೂ ಪ್ರದರ್ಶಿಸಲಿಲ್ಲ. ತಲೆಯೆತ್ತಿ ನೋಡಲಿಲ್ಲ. ಎದ್ದು ನಿಲ್ಲಲಿಲ್ಲ. ಗೋವಿಂದರಾಯರೂ ಬೇಸರದಿಂದ, 'ಸ್ನಾನಮಾಡು, ಊಟ ಮಾಡೋಣ,' ಎಂದು ಒಳಗೆ ಹೋದರು. ಅಂದಿನಿಂದ ಜೀವನ ಯಾಂತ್ರಿಕವಾಗಿ ನಡೆಯತೊಡಗಿತು. ಅವರ ಕೆಲಸಕಾರ್ಯಗಳಲ್ಲಿ ಮಗ್ನರಾದ ಗೋವಿಂದರಾಯರು ಮಗನ ಮುಖವನ್ನು ದಿನಕ್ಕೆ ಒಂದು ಬಾರಿ, ಎರಡು ಬಾರಿ ನೋಡುತ್ತಿದ್ದರು. ಅವನ ವಿದ್ಯಾಭ್ಯಾಸದ ವಿಚಾರವಾಗಿಯಾಗಲಿ ಭವಿಷ್ಯತ್ತಿನ ವಿಚಾರವಾಗಿಯಾಗಲಿ ಅವರು ಮಾತಾಡುತ್ತಿರಲಿಲ್ಲ. ರಾಜು, ಖರ್ಚಿಗೆ ಹಣಬೇಕಾದಾಗ ತಂದೆಯನ್ನು ಕೇಳುತ್ತಿದ್ದನು. ಬೇರೆ ಯಾವ ಮಾತಿನ ಅವಶ್ಯಕತೆಯು ಅವನಿಗೆ ಕಂಡು ಬರಲಿಲ್ಲ.



ಬಣ್ಣಹಚ್ಚುವದು ಎಲ್ಲಿಗೆ ಬಂತು?

*   *   *   *

ಸದಾನಂದನ ಮನಸ್ಸಿನಲ್ಲಿ ತಾನೊಬ್ಬ ಮಹಾಪುರುಷನೆಂಬ ಅಭಿಪ್ರಾಯ. ಕೇಳುವವರು ಸಿಕ್ಕಿದರೆ, ಗುಂಡಿ ಹಿಡಿದು ನಿಲ್ಲಿಸಿ, ಘಂಟೆಗಟ್ಟಲೆ ಉಪನ್ಯಾಸ ಕೊಡುವನು. ಅವನ ತಂದೆ ಗಣ್ಯಲಾಯರಾಗಿದ್ದು ಬೇಕಾದಷ್ಟು ಆಸ್ತಿ ಸಂಪಾದಿಸಿದ್ದರು. ಸದಾನಂದನಿಗೆ ತಾನು ಓದಿ ಸಂಪಾದಿಸಬೇಕಾದ ಅವಶ್ಯಕತೆ ತೋರದೆ ಆಸ್ತಿಯನ್ನು ಕರಗಿಸುವ ಕೆಲಸವನ್ನು ವಹಿಸಿಕೊಂಡನು. ರಾಜಕೀಯದ ವಿಚಾರ, ವಿದ್ಯಾಭ್ಯಾಸಸುಧಾರಣೆಗಳು, ಸಮಾಜ ಸೇವೆ, ಅವನಿಗೆ ತಿಳಿಯದ ವಿಚಾರವೇ ಇರಲಿಲ್ಲ. ಅವನ ಸ್ನೇಹ ರಾಜುವಿಗೆ ಹೇಗಾಯಿತೆಂಬುದು ಗೋವಿಂದರಾಯರಿಗೆ ಒಂದು ದೊಡ್ಡ ಸಮಸ್ಯೆಯಾಗಿತ್ತು. 'ಅವನಿಗೂ ಕೆಲಸವಿಲ್ಲ; ಇವನಿಗೂ ಕೆಲಸವಿಲ್ಲ; ಜೋಡಿ ಸರಿಯಾಗಿದೆ,' ಎಂದುಕೊಂಡರು. ಹೊತ್ತುಗೊತ್ತಿಲ್ಲದೆ ಸದಾನಂದ ಕಾರಿನಲ್ಲಿ ಬರುವುದು; ರಾಜು ಅವನೊಡನೆ ಹೊರಡುವುದು. ಹೀಗೆ ನಡೆಯಲಾರಂಭವಾಯಿತು.

ಒಂದು ದಿನ ಗೋವಿಂದರಾಯರು ಮಗನನ್ನು ಕರೆದು 'ಸದಾನಂದನಿಗೆ ಅಪ್ಪನ ಆಸ್ತಿ ಬೇಕಾದಷ್ಟಿದೆ. ಅವನು ಖರ್ಚುಮಾಡಿದರೆ ನಡೆಯುತ್ತೆ, ನೀನು ಹಾಗೆ ಅಭ್ಯಾಸ ಮಾಡಿಕೊಂಡರೆ ಅನ್ಯಾಯವಾಗಿ ಹಾಳಾಗುತ್ತೀ' ಎಂದರು.

ರಾಜು ಉತ್ತರ ಕೊಡಲಿಲ್ಲ. ಹೊರಗದೆ

ಕಾರಿನ ಸದ್ದು ಕೇಳಿ ಹೊರಟುಹೋದನು.

* * * *

ಈಸಮಯದಲ್ಲಿ ಲಕ್ಷ್ಮೀಪತಯ್ಯ ಮಗಳ ಜಾತಕ ಹಿಡಿದು ಬಂದರು. ಲಕ್ಷ್ಮೀಪತಯ್ಯ ಗೋವಿಂದರಾಯರ ಎಳೆತನದ ಗೆಳೆಯ. ಅವರ ಆಲೋಚನೆಯನ್ನು ಕೇಳಿ ಗೋವಿಂದರಾಯರಿಗೆ ನಗೆ ಬಂತು. ಓದಿಲ್ಲ, ಬರೆಹವಿಲ್ಲ; ಮುಂದಕ್ಕೆ ತಲೆಯೆತ್ತುವನೆಂಬ ಭ್ರಾಂತಿಯಿಲ್ಲ. ಬರೀ ತನ್ನ ಆಸ್ತಿಯೆಂಬ ಮರೀಚಿಕೆಯನ್ನು ನಂಬಿ ಮಗಳನ್ನು ಭಾವಿಗೆ ನೂಕಲು ಇವನು ಹವಣಿಸಿದನಲ್ಲಾ ಎನಿಸಿತು. ಆತನಿಗೂ ಈ ವಿಚಾರಗಳನ್ನೆಲ್ಲಾ ಬಾಯಿಬಿಟ್ಟು ಹೇಳಿದರು. 'ಮಗಳು ಭಾರವೇನಯ್ಯಾ?' ಎಂದು ಕೇಳಿದರು. ಲಕ್ಷ್ಮೀಪತಯ್ಯನದು ಒಂದೇ ಹಠ. 'ಜಾತಕ ತೋರಿಸಿ ಸರಿಹೋದರೆ ಮಾಡಿ. ಮದುವೆಯಾದರೆ ಅವನು ಸರಿಹೋಗುತ್ತಾನೆ. ಅವನಿಗೇನು ಕುಂಟೆ, ಕುರಡೆ, ಬುದ್ಧಿಯಿಲ್ಲವೆ? ನಾನೇ ಧೈರ್ಯವಾಗಿ ಕೊಡುತ್ತೇನೆನ್ನುವಾಗ ನಿಮಗೇತರ ಚಿಂತೆ?' ಎಂದರು. ನಿರ್ವಾಹವಿಲ್ಲದೆ ಗೋವಿಂದರಾಯರು ಕೇಳಿ ನೋಡುತ್ತೇನೆ ಎಂದು ಹೇಳಿ ಆತನನ್ನು ಕಳುಹಿಸಿಕೊಡಬೇಕಾಯಿತು.

ಸಾಯಂಕಾಲ ಮಗನನ್ನು ಕರೆಸಿ ಕೇಳಿದಾಗ ಅವನು ನಿರೀಕ್ಷಿಸಿದ ಉತ್ತರ ಗೋವಿಂದರಾಯರಿಗೆ ಸಿಕ್ಕಲಿಲ್ಲ. ಹುಬ್ಬು ಬಿಗಿದು ಬೇಡವೆನ್ನುತ್ತಾನೆ ಎಂದುಕೊಂಡಿದ್ದರು. ರಾಜು ಸಮಾಧಾನದಿಂದ, 'ನಿಮ್ಮಿಷ್ಟ' ಎಂದನು. ಮಗನ ಉತ್ತರವನ್ನು ನಂಬಲು ಸಾಧ್ಯವಿಲ್ಲದೆ ಪುನಃ ಕೇಳಿದರು. ಪುನಃ ರಾಜು ಅದೇ ಉತ್ತರ ಕೊಟ್ಟು ಹೊರಗೆ ಹೋದನು.

ಆ ರಾತ್ರಿ ಗೋವಿಂದರಾಯರು ಬಹಳ ಹೊತ್ತು ಆಲೋಚಿಸಿದರು. ಮದುವೆಯಾಗಿ ಆ ಮಗುವಿನ ಮಂಗಳಸೂತ್ರ ಇವನನ್ನು ಸರಿಯಾದ ದಾರಿಗೆಳೆಯಬಲ್ಲುದೋ ಏನೋ! ಹಾಗೆಂದು ಬೇರೆಯವರ ಮಗುವನ್ನು ಬಾವಿಗೆ ತಳ್ಳುವುದೆ? ಇಷ್ಟು ವರ್ಷ ನೆಟ್ಟಗಾಗದ ಬುದ್ಧಿ ಇನ್ನು ಮುಂದೆ ಸರಿಹೋದೀತೆ? ಗೋವಿಂದರಾಯರು ನಡುಗಿದರು. ಆ ಮಗು ತಮ್ಮ ಮನೆಗೆ ಬಂದು ಕಣ್ಣೀರು ಸುರಿಸಿದರೆ ಆ ಪಾಪಕ್ಕೆ ಪ್ರಾಯಶ್ಚಿತ್ತವುಂಟೆ? ತಿಳಿದೂ ತಿಳಿದೂ ಈ ಕಲ್ಲುಗುಂಡನ್ನುಅದರ ಗಂಟಲಿಗೆ ಬಿಗಿದು ನೀರಿಗೆ ತಳ್ಳುವುದೆ? ಜಾನಕಿಯಿದ್ದಿದ್ದರೆ ಅವಳನ್ನು ಕೇಳಬಹುದಾಗಿತ್ತು. ಸರಿಯಾದ ಮಾರ್ಗ ತೋರಿಸುತ್ತಿದ್ದಳು. ಇದೊಂದೇ ಮಗನ ಉದ್ಧಾರಕ್ಕೆ ದಾರಿಯೋ ಏನೋ!

ಗೋವಿಂದರಾಯರು ಯಾವುದನ್ನೂ ನಿರ್ಧರಿಸಲಾರದೆ ಜಾತಕಫಲದ ಮೇಲೂ ಲಕ್ಷ್ಮೀಪತಯ್ಯನವರ ಹಠದ ಮೇಲೂ ಹೊಣೆಯೇರಿಸಿ ಸುಮ್ಮನಾದರು.

* * * *

ಮೂರನೆಯ ದಿನ ಊಟಕ್ಕೆ ಹೋಗುತ್ತಿದ್ದಾಗ ರಾಜುವಿನ ಕೋಣೆಯಿಂದ ಮಾತು ಕೇಳಿಸಿತು. ಸದಾನಂದನ ಕಾರು ಹೊರಗೆ ನಿಂತಿತ್ತು.

'ಹಾಗಾದರೆ ಇನ್ನುಮೇಲೆ ನೀನು ಸಿಕ್ಕುವುದು ಅಪರೂಪ ಅನ್ನು.'

ರಾಜು ನಗುತ್ತಾ 'ಅದೇಕೆ?' ಎಂದನು.

'ಮದುವೆಯಾದ ಮೇಲೆ ಹೆಂಡತಿಯ ಅಂಕೆಯಲ್ಲಿ ಇರುತ್ತಿ'

'ಅದೆಲ್ಲಾ ಬಿಟ್ಟುಬಿಡಪ್ಪಾ. ಮದುವೆಯಾದರೆ ಆಗುತ್ತೆ. ನನ್ನನ್ನು ಅಂಕೆಯಲ್ಲಿಡುವದಕ್ಕೆ ಬ್ರಹ್ಮನಿಗೂ ಸಾಧ್ಯವಿಲ್ಲ.'

ಗೋವಿಂದರಾಯರು ಈ ಮಾತನ್ನು ಕೇಳಿ ನಡುಗಿದರು. ಅದರ ಕಠಿಣ ಸತ್ಯದ ಅನುಭವ ಅವರಿಗೆ ಬೇಕಾದಷ್ಟು ಆಗಿತ್ತು. ಪುನಃ ರಾತ್ರಿಯ ಆಲೋಚನೆಗಳು ತಲೆಯಲ್ಲಿ ಸುಳಿದು ಹೋದವು. ಊಟವಾದ ಮೇಲೆ ರಾಜುವಿಗೆ ಹೇಳಿಕಳುಹಿಸಿ, ಅವನು ಬರುತ್ತಲೇ ಬಿರುಸಾಗಿ, 'ಒಂದು ಮಾತು ರಾಜು. ಮದುವೆ ಮಾಡಿಕೊಂಡರೆ ಹುಡುಗಿಯನ್ನು ಸುಖವಾಗಿಟ್ಟುಕೊಂಡಿರುವಹಾಗಿದ್ದರೆ ಮಾಡಿಕೋ. ಮಾಡಿಕೊಂಡು ಅವಳೂ ಕಣ್ಣೀರಲ್ಲಿ ಕೈತೊಳೆಯುವ ಹಾಗೆ ಮಾಡಿದರೆ ಆಗುವದಿಲ್ಲ. ನಿನಗಾಗಿ ಈ ಮನೆಯಲ್ಲಿ ಬೇಕಾದಷ್ಟು ಕಣ್ಣೀರು ಹರಿದಿದೆ. ಬೇರೆಯವರ ಮಗುವಿಗೆ ಆ ಅನುಭವ ಬೇಕಾಗಿಲ್ಲ. ಮದುವೆ ಒಂದು ಪ್ರಯೋಗವೆಂದು ಅವಳು ಮಾಂಗಲ್ಯ ಹರಿದು ಬಿಸಾಡುವಂತಿಲ್ಲ. ಜೀವಮಾನವೆಲ್ಲಾ ಹೆಣಗಬೇಕು. ಅವಳನ್ನು ಸುಖವಾಗಿಟ್ಟುಕೊಳ್ಳುವ ಧೈರ್ಯ ನಿನಗಿಲ್ಲದಿದ್ದರೆ ಮದುವೆ ಬೇಡ. ನಾನು ಖಂಡಿತ ಬಲವಂತ ಮಾಡುವದಿಲ್ಲ' ಎಂದರು. ಹುಬ್ಬು ಬಿಗಿದು ರಾಜು ಹೊರಗೆ ಹೋದನು.

* * * *



"ಭಾರಿ ಪ್ರಚಂಡ ಇದ್ದಾನ್ರಿ, ನಿಮ್ಮ ಮಗ!"

ಲಕ್ಷ್ಮೀಪತಯ್ಯನ ಹಠವೇ ಗೆದ್ದು ಲಲಿತೆ ರಾಜುವಿನ ಗೃಹಲಕ್ಷ್ಮಿಯಾಗಿ ಮನೆಗೆ ಬಂದಳು. ಬಂದ ಹೊಸದರಲ್ಲಿ ಲಲಿತೆ ತುಂಬ ಉಲ್ಲಾಸವಾಗಿಯೇ ಇದ್ದಳು. ರಾಜುವಿಗೂ ಮನೆಯಲ್ಲೊಂದು ಹೊಸ ಆಕರ್ಷಣೆಯಿದ್ದಂತಿತ್ತು. ಗೋವಿಂದರಾಯರು ದೇವರಿಗೆ ಸಾವಿರ ನಮಸ್ಕಾರ ಹಾಕಿದರು. ಮಗ ಹೀಗೆಯೇ ದಾರಿಗೆ ಬಂದು ಸರಿಹೋಗಬಹುದೆಂಬ ಆಶಾಕಿರಣವೂ ತಲೆದೋರಿತು.

ಊಟ ಮಾಡುವಾಗ 'ನನ್ನ ಸ್ನೇಹಿತ ರಾಘವೇಂದ್ರ ಸಿಕ್ಕಿದ್ದ. ಏನೋ ವ್ಯಾಪಾರದಲ್ಲಿ ತುಂಬ ದುಡ್ಡು ಮಾಡಿದ್ದಾನೆ. ಅವನ ಹತ್ತಿರ ಮ್ಯಾನೇಜರ್ ಕೆಲಸವೊಂದು ಖಾಲಿ ಇದೆಯಂತೆ' ಎಂದು ಮಗನಕಡೆ ನೋಡಿದರು.

ರಾಜು, 'ಏನು ಐವತ್ತು ರೂಪಾಯಿ ಕೊಡುತ್ತಾನಂತೋ' ಎಂದು ಅಲಕ್ಷ್ಯದ ಧ್ವನಿಯಲ್ಲಿ ಕೇಳಿದನು. ಗೋವಿಂದರಾಯರು ಮುಂದೆ ಮಾತನಾಡಲಿಲ್ಲ. ಮನಸ್ಸಿನಲ್ಲಿಯೇ 'ಇವನ ವಿದ್ಯೆಗೆ, ಬುದ್ಧಿಗೆ ಲಕ್ಷ ರೂಪಾಯಿ ಸಂಬಳವಾದರೂ ಸಾಲದು' ಎಂದುಕೊಂಡರು.

ಊಟವಾದಮೇಲೆ ಲಲಿತೆ 'ಮಾವನವರ ಮಾತು ಕೇಳಬಾರದೆ? ಕೆಲಸಕ್ಕೆ ಸೇರಿದರೆ ಆ ಮೇಲೆ ಸಂಬಳ ಹೆಚ್ಚುತ್ತೆ' ಎಂದಳು.

ರಾಜು, 'ನೀನೊಬ್ಬಳು ಕಡಿಮೆಯಾಗಿದ್ದೆ. ಅಪ್ಪನ ಜತೆಗೆ' ಎಂದು ಎದ್ದು ಹೊರಗೆ ಹೊರಟು ಹೋದನು. ಆ ಮೇಲೆ ಎರಡು ಮೂರು ದಿನ ರಾಜು ಲಲಿತೆಯೊಡನೆ ಸರಿಯಾಗಿ ಮಾತನಾಡಲಿಲ್ಲ. ತಪ್ಪಾಯಿತೆಂದು ಅವಳು ಅಂಗಲಾಚಿದರೂ ಮಾರುತ್ತರ ಕೊಡಲಿಲ್ಲ.

ಗೋವಿಂದರಾಯರಿಗೆ ಆ ದಿನ ತುಂಬಾ ಆಯಾಸವಾಗಿತ್ತು. ಬೆವರ ಹನಿಗಳು ರುಮಾಲಿನ ಅಂಚಿನೊಳಗಿಂದ ಇಳಿಯುತ್ತಿದ್ದವು. ಹೊರಬಾಗಿಲನ್ನು ಮುಚ್ಚಿ ಒಳಗೆ ನಡೆಯುವಾಗ ಹಾದಿಯಲ್ಲಿ ಮಲಗಿದ್ದ ಬೆಕ್ಕಿನ ಮರಿಯನ್ನು ನೋಡದೆ ಕಾಲಿಟ್ಟರು. ಅದು ಗಟ್ಟಿಯಾಗಿ ಅರಚಲು ಗಾಬರಿಯಾಗಿ ನಿಂತು ಅದನ್ನೆತ್ತಿಕೊಂಡರು. ಎಳೆಯ ಮರಿ, ಮೂಳೆ ಮುರಿಯಿತೋ ಏನೋ. ಒಂದೇ ಸವನೆ ಒರಲುತ್ತಿತ್ತು. ಒಳಕ್ಕೆತ್ತಿಕೊಂಡು ಹೋಗಿ 'ಲಲಿತಮ್ಮಾ, ಈ ಮರಿಗೆ ಸ್ವಲ್ಪ ಹಾಲಿಡು. ತಿಳಿಯದೆ ಕಾಲಿಟ್ಟುಬಿಟ್ಟೆ' ಎಂದರು. ಲಲಿತೆ ತಟ್ಟೆಯಲ್ಲಿ ಹಾಲಿಟ್ಟರೂ ಕುಡಿಯದೆ ಮರಿ ನೋವಿಗೆ ಹೊರಳಾಡುತ್ತಿತ್ತು. ಗೋವಿಂದರಾಯರಿಗೆ ವಿಪರೀತ ವ್ಯಥೆ. 'ಪೂರ್ವಜನ್ಮದಲ್ಲಿ ಏನು ಪಾಪ ಮಾಡಿದೆನೋ, ಈಗ ಅನುಭವಿಸುತ್ತಿದ್ದೇನೆ. ಇದೊಂದು ಪ್ರಾರಬ್ಧ ಕಟ್ಟಿಕೊಂಡೆನಲ್ಲಾ' ಎಂದು ಮರುಗಿದರು. ಲಲಿತೆಯ ಕಣ್ಣಲ್ಲೂ ಹನಿಯಾಡುತ್ತಿತ್ತು. ರಾಜು ಬಾಗಿಲು ತೆಗೆದುಕೊಂಡು ಬಂದವನು ಹೊರಳಾಡುತ್ತಿದ್ದ ಮರಿಯನ್ನು ನೋಡಿ ಕೈಲಿದ್ದ ಕೋಲಿನಿಂದ ಮರಿಯ ತಲೆಗೆ 'ರಪ್' ಎಂದು ಹೊಡೆದನು. ಲಲಿತೆ ಕಿಟಾರನೆ ಕಿರಚಿದಳು. ಗೋವಿಂದರಾಯರು 'ನಿನಗೇನು ಬಂತೋ' ಎಂದು ಕೂಗಿದರು. ಮರಿಯ ವೇದನೆ ನಿಂತು ತಣ್ಣಗಾಯಿತು. ಬಾಲ ಹಿಡಿದು ಬೇಲಿಯಾಚೆ ಎಸೆದು ಬಂದು ರಾಜು ಕೈ ತೊಳೆದು ಊಟಕ್ಕೆ ಕುಳಿತನು. ಗೋವಿಂದರಾಯರಿಗೆ ಮಗನ ವರ್ತನೆಯಿಂದ ಮೈ ಝುಮ್ಮೆಂದಿತು. ಪ್ರಪಂಚ ಇಂಥವರ ಸುಖಕ್ಕಾಗಿಯೇ ಇರಬಹುದು. ಯಾವುದಕ್ಕೋ ಮರುಗಿ ಒದ್ದಾಡುವ ಜೀವಕ್ಕೆ ಸುಖವಿಲ್ಲ. ಆ ದಿನ ಅವರಿಗೆ ಊಟ ಸೇರಲಿಲ್ಲ. ಲಲಿತೆಯೂ ಸರಿಯಾಗಿ ಉಣ್ಣಲಿಲ್ಲ; ರಾಜು ಮಾತ್ರ ನಿರಾತಂಕವಾಗಿ ಊಟಮಾಡಿ ಹೋಗಿ ಮಲಗಿದನು.

ಲಲಿತೆಗೆ ರಾಜುವನ್ನು ಕಂಡರೆ ಒಂದು ವಿಧವಾದ ಹೆದರಿಕೆ ತಲೆದೋರಿತ್ತು. ಅವನ ಆ ದಿನದ ವರ್ತನೆಯಿಂದ ಅಪರಿಚಿತನಂತೆ ತೋರಿದನು. ಮನಃಸ್ವಾಸ್ಥ್ಯಕ್ಕೆ ಅಡ್ಡಬಂದ ಯಾರನ್ನೂ ಯಾವುದನ್ನೂ ತುಳಿಯಲು ಅವನು ಹಿಂದೆಗೆಯುವಂತೆ ತೋರಲಿಲ್ಲ. ಕಡೆಗೆ ಅವನ ಇಷ್ಟಕ್ಕೆ ವಿರೋಧವಾಗಿ ನಡೆದರೂ ತನ್ನನ್ನೂ ! ಲಲಿತೆ ನಡುಗಿದಳು. ಸಂಜೆ ರಾಜು ಲಲಿತೆಯನ್ನು ಕರೆದು, 'ಸಾಯಂಕಾಲ ನಾನು ಆರು ಗಂಟೆಗೆ ಬರುತ್ತೇನೆ. ಸಿನಿಮಾಗೆ ಹೋಗೋಣ' ಎಂದು ಹೊರಟು ಹೋದನು. ಲಲಿತೆ ಮಾವನಿಗೆ ಫಲಾಹಾರ ಕೊಟ್ಟು ಕೆಲಸವನ್ನು ಬೇಗನೆ ಮುಗಿಸಿದಳು. 'ತಾನು ಹೆದರಬಾರದು; ಅವನಿಗೆ ಮಾತ್ರ ತನ್ನನ್ನು ಬಿಟ್ಟರೆ

ಮಾಡಿದ್ದಾರೆ? ಮನಸ್ಸನ್ನು ಒಲಿಸಿ ಮೃದುವಾಗಿ ಮಾಡಬೇಕು. ಇನ್ನು ಎಂತಹ ಚಂಡಾಲರೋ ದಾರಿಗೆ ಬರಲಿಲ್ಲವೆ? ಹುಟ್ಟುತ್ತಲೇ ತಾಯಿಯನ್ನು ಕಳೆದುಕೊಂಡ ತಬ್ಬಲಿ. ರಾಜು ಹೆಣ್ಣಿನ ಮಾರ್ದವ ಪ್ರಭಾವವಿಲ್ಲದೆ ಕಠಿಣನಾಗಿದ್ದಾನೆ. ಮಾವನವರೂ ಸಹಾನುಭೂತಿ, ಮರುಕ ತೋರಲಿಲ್ಲ' ಎಂದುಕೊಂಡು ತಲೆ ಬಾಚಿ ಹೂ ಮುಡಿದು ಹೊಸ ಸೀರೆಯುಟ್ಟುಕೊಂಡಳು. ಬೆಕ್ಕಿನ ಮರಿಯ ನೋವು ನೋಡಲಾರದೆ ರಾಜು ಕೊಂದಿರಬೇಕು. ನರಳು-ವುದಕ್ಕಿಂತ ಸಾಯುವುದೇ ಮೇಲು ಎಂದುಕೊಂಡಳು.

ಗೋವಿಂದರಾಯರು ಬೇಗನೆ ಹೊರಗೆ ತಿರು-ಗಾಡಲು ಹೊರಟುಹೋದರು. ಗಡಿಯಾರ ಆರು ಘಂಟೆ ಹೊಡೆಯಿತು. ಲಲಿತೆ ಅಲ್ಲಿ ಬಿದ್ದಿದ್ದ ವಾಸಪತ್ರಿಕೆಯನ್ನು ತಿರುವಿ ಹಾಕುತ್ತಿದ್ದಳು. ಅರ್ಧ ಘಂಟೆಯೂ ಹೊಡೆಯಲು ಬಾಗಿಲು ತೆಗೆದು ಹೊರಗೆ ಹೋದಳು. ಹೊರ ಬಾಗಿಲ ಹತ್ತರ ಒಂದು ಹಸುವನ್ನು ಮರಕ್ಕೆ ಬಿಗಿದು ರಾಜು ಹೊಡೆಯುತ್ತಿದ್ದನು. ಕದಲದಂತೆ ಮೂಗುದಾರ ಹಿಡಿದು ಕೋಲು ಮುರಿಯುವವರೆಗೂ ಹೊಡೆದನು. ಅದು 'ಅಂಬಾ' ಎಂದು ಅರಚಿದಾಗ ಮೂತಿಯ ಮೇಲೆ ಹೊಡೆದನು. ಬಾಯಲ್ಲಿ ರಕ್ತಮಿಶ್ರಿತ ನೊರೆ ಕಿತ್ತುಕೊಂಡು ಹಸು ಕೆಳಕ್ಕುರುಳಿದಾಗ ಕೋಲನ್ನು ಬಿಸುಟನು. ಲಲಿತೆ ಕಲ್ಲು ಬೊಂಬೆಯಂತೆ ನಿಂತಿದ್ದಳು. ತಲೆ-ಯಲ್ಲಿ ನೀರಿನ ಪ್ರವಾಹ ಭೋರ್ಗರೆದು ಹೋದಂತೆ ಸದ್ದಾಗುತ್ತಿತ್ತು.

ರಾಜು ಹಗ್ಗ ಬಿಚ್ಚಿ ಹಸುವನ್ನು ಆಚೆಗೆಳೆದು ಹಾಕಿ, 'ಎಷ್ಟು ಸಲ ಬಾಗಿಲು ಹಾಕಿದರೂ ಪೋಲಿ ದನಗಳನ್ನು ಬಿಡುತ್ತಾರೆ' ಎಂದುಕೊಂಡು ಒಳಕ್ಕೆ ಬಂದನು. ಲಲಿತೆಯನ್ನು ನೋಡಿ, 'ಹೋಗೋಣವೆ?' ಎಂದನು. ಲಲಿತೆಗೆ ಎದುರಿಗೊಬ್ಬ ರಾಕ್ಷಸ ನಿಂತಂತಾಯಿತು. ಒಳಗೊಂದು ಕುರ್ಚಿಯ ಮೇಲೆ ಕುಸಿದು ಕುಳಿತು 'ನಾನು ಬರುವದಿಲ್ಲ' ಎಂದಳು.

'ಏಕೆ?'

'ನನ್ನ ಕೈಲಾಗುವದಿಲ್ಲ.'

'ಹೋಗಲಿ ಬಿಡು. ಹೇಗೂ ಸದಾನಂದ ಬರುತ್ತಾನೆ,' ಎಂದುಕೊಂಡು ರಾಜು ಹೊರಟು ಹೋದನು.

ಎಷ್ಟು ಹೊತ್ತು ಹಾಗೆಯೇ ಕುಳಿತಿದ್ದಳೋ, ಲಲಿತೆಗೆ ಅರಿವಿಲ್ಲ. ಕಡೆಗೆ ಎದ್ದು ಹೊರಗೆ ಹೋಗಿ ನೋಡಲಾಗಿ ಹಸು ಮೇಲುಸಿರು ಬಿಡುತ್ತಾ ಅಲ್ಲೇ ಬಿದ್ದಿತ್ತು. ಪಾತ್ರೆಯಲ್ಲಿ ನೀರು ಹಿಡಿದು ಹೋಗಿ ಅದರ ತಲೆಗೆ ತಟ್ಟಿ, ಮೂತಿ ತೊಳೆದು ಕುಡಿಸಿ-ದಳು. ನೀರು ಕುಡಿದ ಮೇಲೆ ಹಸು ಚೇತರಿಸಿಕೊಂಡು ಮೇಲಕ್ಕೆದ್ದಿತು. 'ಬದುಕಿದೆ, ದೇವರೇ' ಎಂದುಕೊಂಡು ಮನೆಗೆ ಬಂದಳು. ರಾಜುವಿನ ಚಿತ್ರ, ಅವನ ರೋಷ, ಕಣ್ಣಿಗೆ ಕಟ್ಟಿದಂತಾಗಿ, 'ಪಾಪಿ! ಪಾಪಿ', ಎಂದು ತಲೆ ಜಜ್ಜಿಕೊಂಡಳು.

* * * *

ಲಕ್ಷ್ಮೀಪತಯ್ಯನಿಂದ ಸುದ್ದಿ ತಿಳಿದು ಗೋವಿಂದರಾಯರಿಗೆ ತುಂಬಾ ಸಂತೋಷ-ವಾಯಿತು. ಮಗ ದಾರಿಗೆ ಬಂದು ಹೆಸರು ಹೇಳುವನೆಂಬ ಆಸೆ ಎಂದೋ ಬರಿದಾಗಿತ್ತು. ಮೊಮ್ಮಗನಾದರೂ ಹುಟ್ಟಿ ಮುಂದಕ್ಕೆ ಬಂದರೆ ಆ ದುಃಖ ಕಡಿಮೆಯಾಗಬಹುದು. ತನು ಆಲೋಚನೆಗೆ ಗೋವಿಂದರಾಯರಿಗೆ ನಗು ಬಂತು. ರಾಜು ಹುಟ್ಟಿದಾಗ ಎಷ್ಟೋ ಗಾಳಿ-ಗೋಪುರಗಳನ್ನು ಕಲ್ಪಿಸಿ ಹಿಗ್ಗಿದರು. ಎಷ್ಟು ಪೆಟ್ಟು ಬಿದ್ದರೂ ಮನುಷ್ಯನ ಆಸೆಗೆ ಮಿತಿಯೇ ಇಲ್ಲವಲ್ಲ. ಮಗ ಉದ್ಧಾರ ಮಾಡಿಯಾಯಿತು. ಇನ್ನು ಮೊಮ್ಮಗ! ಬೀರುವಿನಲ್ಲಿದ್ದ ಗೀತೆಯನ್ನು ಕೈಗೆತ್ತಿಕೊಂಡರು. ರಾಜು ಬಾಗಿಲು ತೆಗೆದುಕೊಂಡು ಬಂದನು. ಆಗಿನ ಮನಸ್ಸಿನ ಸ್ಥಿತಿಯಲ್ಲಿ ಅವರಿಗೆ ರಾಜುವಿನ ಮೇಲೂ ಅಸಮಾಧಾನವಿರಲಿಲ್ಲ.

'ಏನು ರಾಜು?' ಎಂದರು

ರಾಜು, 'ಸ್ವಲ್ಪ ಹಣ ಬೇಕಾಗಿತ್ತು.'

ಗೋವಿಂದರಾಯರಿಗೆ ಬೇಸರವಾಯಿತು. ಮೀಸೆ ಹೊತ್ತ ಗಂಡಸು ನಾಚಿಕೆಯಿಲ್ಲದೆ ಹಣ ಬೇಡುವನಲ್ಲಾ, ಎನ್ನಿಸಿತು. ಗಡುಸಾಗಿಯೇ 'ಮೊನ್ನೆಯೆಲ್ಲಾ ನೂರು ರೂಪಾಯಿ ಕೊಟ್ಟಿದ್ದೀನಿ. ಪುನಃ ಏನು ಬಂತು?' ಎಂದು ಜೇಬಿನಿಂದ ಹತ್ತು ರೂಪಾಯಿ ತೆಗೆದು ಕೊಟ್ಟರು. ರಾಜು ಅಸಮಾ-ಧಾನದಿಂದ ಹೊರಗೆ ಹೋದನು.

ಎಷ್ಟು ಬೇಸರವಾದರೂ ಮನಸ್ಸಿನ ಉಲ್ಲಾಸ ಮರೆಯಾಗಲಿಲ್ಲ. ಮೊಮ್ಮಗ! ಆ ಮನೆಯಲ್ಲಿ ಎಳೆಯ ಮಗು ಓಡಾಡಿ ಯಾವ ಕಾಲವಾಯಿತು! ದೇವರು ಕರುಣಾಮಯ! ಒಂದು ಕೈಯಿಂದ ಕಿತ್ತುಕೊಂಡಿದ್ದನ್ನು ಮತ್ತೊಂದು ಕೈಯಿಂದ ನೀಡುತ್ತಾನೆ. ಸಂಜೆ ಬಂದಾಗ, 'ಲಲಿತಮ್ಮಾ' ಎಂದು ಕೂಗಿ ಒಂದು ಕಾಗದದ ಪೊಟ್ಟಣವನ್ನು ಅವಳ ಕೈಗೆ ಕೊಟ್ಟರು. ಲಲಿತೆ ಬಿಚ್ಚಿ ನೋಡಿದಳು. ಅರಸಿನ, ಕುಂಕುಮ, ಹೂ, ನಾಲ್ಕು ಬೆರಳಂಚಿನ ಅಗಲ ಸರಿಗೆಯ ನೀಲಿ ರೇಷ್ಮೆ ಸೀರೆ, ಕಣ. ಲಲಿತಮ್ಮನ ಕಣ್ಣಲ್ಲಿ ನೀರು ಮಿಂಚಿತು. ಇಂತಹ ದೇವರಂತಹ ಮನುಷ್ಯನಿಗೆ ರಾಜುವಿನಂತಹ ಮಗ. ಸೀರೆಯುಟ್ಟು ದೇವರಿಗೆ ನಮಸ್ಕರಿಸಿ, ಮಾವನಿಗೆ ನಮಸ್ಕರಿಸಿದಳು. ಗೋವಿಂದರಾಯರು ಹೃದಯಾಂತರಾಳದಿಂದ ಹರಸಿದರು.

ರಾಜು ಮನೆಗೆ ಬರುವ ವೇಳೆಗೆ ಗೋವಿಂದ-ರಾಯರು ಊಟಮಾಡಿ ಮಲಗಿದ್ದರು. ಹೆಂಡತಿಯ ಅಲಂಕಾರವನ್ನು ನೋಡಿ ರಾಜನ ಹುಬ್ಬು ಗಂಟಿ-ಕ್ಕಿತು. ತನಗೊಂದು ಹತ್ತು ರೂಪಾಯಿ ಕೊಡಲು ಇವನಿಗೆ ದರಿದ್ರ! ಸೊಸೆಗೆ ಬೇಕಾದರೆ ಸುರಿಯುತ್ತಾನೆ, ಎಂದುಕೊಂಡನು. ಕ್ರೋಧದಿಂದ ಕೂಡಿದ ಅವನ ಮುಖವನ್ನು ನೋಡಿ ಲಲಿತೆಯೂ ಹೆಚ್ಚಿಗೆ ಮಾತನಾಡಲಿಲ್ಲ.

* * * *

ರಾಜು ಮನೆ ಕಡೆ ಬಂದು ಎರಡು ಮೂರು ದಿನಗಳಾಗಿದ್ದುವು. ಲಲಿತೆಯ ಮೂಕವೇದನೆ ಗೋವಿಂದರಾಯರ ಮನಸ್ಸನ್ನು ಹಣ್ಣು ಮಾಡಿತ್ತು. ಅವಳಿಗೆ ಯಾವ ಸಮಾಧಾನವನ್ನೂ ಹೇಳುವಂತಿರಲಿಲ್ಲ. ದಿನದಂತೆ ದಿನ ಕಳೆದು ಹೋಗುತ್ತಿತ್ತು.

ಮಧ್ಯಾಹ್ನ ಮನೆಗೆ ಬರುವ ವೇಳೆಗೆ ತುಳಸೀ ಕಟ್ಟೆಯ ಮೇಲೆ ಲಲಿತೆ ಕುಳಿತಿದ್ದಳು. ಗೋವಿಂದರಾಯರು 'ಊಟವಾಯಿತೇ ಲಲಿತಮ್ಮಾ ?' ಎಂದರು. ಲಲಿತೆ ತಲೆ ತಗ್ಗಿಸಿಕೊಂಡೇ 'ಇಲ್ಲ' ಎಂದಳು. 'ನೀನು ಹೀಗೆ ಮಾಡಿದರೆ ನನ್ನ ಗತಿಯೇನು ಲಲಿತಮ್ಮ ? ಈಗ ನೀನು ಹೀಗೆ ಮೈ ಒಣಗಿಸುವುದು ಸರಿಯಲ್ಲ, ಏಳು' ಎಂದರು. ಮಾವನ ಸಹಾನುಭೂತಿಯಿಂದ, ಲಲಿತೆಯ ಕಣ್ಣೀರಿನ ಕಟ್ಟೆಯೊಡೆಯಿತು. ಕಣ್ಣೊರಸಿಕೊಂಡು ಊಟಕ್ಕೆ ಹೋದಳು. ಅವಳು ಊಟ ಪ್ರಾರಂಭಿಸುವವರೆಗೂ ಎದುರಿಗೆ ನಿಂತಿದ್ದು ಹೊರಗೆ ಬಂದಾಗ ರಾಜು ಸದಾನಂದನ ಕಾರಿನಿಂದ ಇಳಿಯುತ್ತಿರುವುದನ್ನು ನೋಡಿ ಬೇಸರದಿಂದ ಕೊಠಡಿಯೊಳಗೆ ಹೋಗಿ ಬಾಗಿಲು ಹಾಕಿಕೊಂಡರು. ಎದೆ ಉದ್ವೇಗದಿಂದ ವಿಪರೀತವಾಗಿ ಹೊಡೆದುಕೊಳ್ಳುತ್ತಿತ್ತು. ತಲೆ ತಿರುಗಿದಂತಾಯಿತು. ಇದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಂಡರೆ ತಾವು ಬಹು ದಿನ ಬದುಕುವುದಿಲ್ಲವೆಂದು ತೋರಿ ಹಾಸಿಗೆಯ ಮೇಲೆ ಮಲಗಿದರು. ಬದುಕಬೇಕು, ಪ್ರಪಂಚದಲ್ಲಿ ತನ್ನ ಕೆಲಸ ಇನ್ನೂ ಮುಗಿದಿಲ್ಲ.

ಮೊಮ್ಮಗ ಬೆಳೆದು ತನ್ನ ಕಾಲಮೇಲೆ ನಿಲ್ಲುವವರೆಗೂ ಬದುಕಬೇಕು.

ರಾಜುವನ್ನು ನೋಡಿ ಲಲಿತೆ ಅರ್ಧಊಟದಲ್ಲೇ ಕೈತೊಳೆದು ಎದ್ದಳು. ಕಣ್ಣೀರನ್ನು ಮರೆಸುತ್ತಾ ಬಾರದ ನಗುಮುಖವನ್ನು ತೋರಲು ಪ್ರಯತ್ನಿಸುತ್ತಾ 'ಎಲೆ ಹಾಕಲೇ ?' ಎಂದಳು.

ರಾಜು 'ನನ್ನ ಊಟವಾಗಿದೆ. ನಿನ್ನ ಊಟವಾಗಿದ್ದರೆ ಸ್ವಲ್ಪ ಬಾ' ಎಂದನು.

ಲಲಿತೆ ಹೆದರುತ್ತಾ ಕೊಠಡಿಗೆ ಹೋದಳು. ರಾಜು 'ಒಂದು ನೂರು ರೂಪಾಯಿ ಬೇಕಾಗಿತ್ತು' ಎಂದನು.

ಲಲಿತೆ 'ನಾಲೆಲ್ಲಿ ತರಲಿ?' ಎಂದಳು.

'ಅಪ್ಪನ್ನ ಕೇಳು.'

'ನೀವೇ ಕೇಳಬಾರದೆ ?'

'ನಾನು ಕೇಳಿದರೆ ಕೊಡುವದಿಲ್ಲ. ನೀನಾದರೆ ಮುದ್ದಿನ ಸೊಸೆ. ಏನು ಕೇಳಿದರೂ ಕೊಡುತ್ತಾನೆ.'

ಲಲಿತೆ ನಿರ್ಧಾರದ ಧ್ವನಿಯಲ್ಲಿ 'ನಾನು ಕೇಳುವುದಿಲ್ಲ' ಎಂದಳು.

ರಾಜು ನಿರ್ದಾಕ್ಷಿಣ್ಯವಾಗಿ ಅವಳ ಕತ್ತಿನಲ್ಲಿದ್ದ ಸರಕ್ಕೆ ಕೈ ಹಾಕಿದನು. ಲಲಿತೆ 'ಅಯ್ಯೋ' ಎಂದು ಕಿರಿಚಲು, ಗೋವಿಂದರಾಯರು ತಟ್ಟನೆ ಬಾಗಿಲು ತೆಗೆದುಕೊಂಡು ಬಂದರು, ಅವರನ್ನು ನೋಡಿ ರಾಜು ತಿರುಗಿ ನೋಡದೆ ಹೊರಕ್ಕೆ ಹೊರಟು ಹೋದನು.

ಗೋವಿಂದರಾಯರು ಬಿಕ್ಕುತ್ತಿದ್ದ ಸೊಸೆಯನ್ನು ಏನಾಯಿತೆಂದು ವಿಚಾರಿಸಲಿಲ್ಲ. ರಾಜು ಹೊರಟು ಹೋಗುತ್ತಲೇ ಬೀದಿ ಬಾಗಿಲು ಹಾಕಿ ಕೋಣೆಯೊಳಕ್ಕೆ ಹೊರಟುಹೋದರು. ಇನ್ನೂ ಏನೇನು ಅನಾಹುತಗಳಾಗಬೇಕೋ ! ತಾವಾಗಿ ತಲೆಯ ಮೇಲೆ ಬಂಡೆಯನ್ನೆಳೆದುಕೊಂಡಂತಾಯಿತು. ಗೋವಿಂದರಾಯರು ನಿಟ್ಟುಸಿರು ಬಿಟ್ಟರು.

ರಾತ್ರಿ ಏನು ನಡೆಯಿತೆಂದು ಗೋವಿಂದರಾಯರಿಗೆ ತಿಳಿಯಲೇ ಇಲ್ಲ. ಎಂದಿನಂತೆ ಊಟ ಮಾಡಿ ಬಾಗಿಲು ಹಾಕಿ ಮಲಗಿದ್ದರು. ಮಧ್ಯಾಹ್ನ ಹೋದ ರಾಜು ಮನೆಗೆ ಬಂದಿರಲಿಲ್ಲ. ದೀಪಹಚ್ಚಿ ಪುಸ್ತಕ ಹಿಡಿದು ಗೋವಿಂದರಾಯರು ಮಲಗಿದರು. ನಿದ್ದೆ ಯಾವಾಗ ಹಿಡಿಯಿತೋ ಅವರಿಗೆ ತಿಳಿಯದು. ಕೈಲಿದ್ದ ಪುಸ್ತಕ ಎದೆಯ ಮೇಲೆ ಜಾರಿತು. ದೀಪ ಉರಿಯುತ್ತಲೆ ಇತ್ತು. ಬಾಗಿಲು ಧಡಾರನೆ ಸದ್ದಾಗಿ ಲಲಿತೆ 'ಅಯ್ಯೋ' ಎಂದು ಚೀರಿದಂತಾಯಿತು. ಗೋವಿಂದರಾಯರು ತಟ್ಟನೆ ಏಳಲು ತಲೆ ತಿರುಗಿದಂತಾಗಿ ಎದೆ ಬಡಿದುಕೊಳ್ಳಲಾರಂಭಿಸಿತು. ನಿಧಾನವಾಗಿ ಬಾಗಿಲ ಕಡೆ ಹೊರಟರು. ಲಲಿತೆ ಬಿಕ್ಕುತ್ತ ಬಾಗಿಲ ಬಳಿ ಕುಳಿತಿದ್ದಳು. ರಾಜು ಬೀದಿಯ ಬಾಗಿಲು ಹಾಕಿಕೊಂಡು ಹೊರಗೆ ಹೋದನು. ಗೋವಿಂದರಾಯರು ನಿಟ್ಟುಸಿರುಬಿಟ್ಟು ಪುನಃ ಮಂಚದ ಮೇಲೆ ಬಿದ್ದುಕೊಂಡರು.

ರಾಜು ನೆಟ್ಟಗೆಹೋಗಿ ಸದಾನಂದನ ಕೋಣೆಯ ಬಾಗಿಲು ತಟ್ಟಿದನು. ಅವನ ವಿಚಿತ್ರ ಮುಖಭಾವವನ್ನು ನೋಡಿ ಹುಚ್ಚನನ್ನು ಕಂಡಂತೆ ಹೆದರಿ ಸದಾನಂದ ಹಿಂದಕ್ಕೆ ಸರಿದನು.

ರಾಜು 'ಸದಾನಂದ್' ಎಂದನು.

'ಏನಾಯಿತೋ ?'

'ಆ ಮನೆಯ ಋಣಾನುಬಂಧ ಕಡಿದುಕೊಂಡು ಬಂದೆ. ಅವರ ಮುಖ ನೋಡುವುದಿಲ್ಲ'

ಸದಾನಂದ ಬಾಗಿಲು ಹಾಕಿ, 'ಹುಚ್ಚನ ಹಾಗಾಡಬೇಡ ರಾಜು. ತಂದೆಯೊಡನೆ ಜಗಳ ಕಟ್ಟಿಕೊಂಡರೆ ನಿನಗೇನಿದೆ ? ಸೇಟಗೆ ಬೇರೆ ದುಡ್ಡು ಕೊಡಬೇಕು, ಎಂದನು.

ರಾಜುವಿನ ಮುಖ ಕ್ರೋಧದಿಂದ ಬಿಗಿದಿದ್ದರೂ ಸದಾನಂದನ ಮಾತನ್ನು ಇಲ್ಲವೆನ್ನುವಂತಿಲ್ಲ. ತಂದೆಯಿಂದಲೇ ಉದ್ಧಾರವಾಗಬೇಕು. ಸದಾನಂದನೇ, 'ಈಗ ಮಲಗು. ನಾನೂ ನಾಳೆ ಬಂದು ನಿಮ್ಮ ತಂದೆಯೊಡನೆ ರಾಜಿ ಮಾಡಿಸುತ್ತೇನೆ,' ಅಂದನು.

*    *    *    *

ನಾಳೆಗೆ ಕೆಲಸ ತಳ್ಳಿ ಉದ್ಧಾರವಾಗುವವರೆಷ್ಟು ಮಂದಿ ! 'ನಾಳೆ' ಎನ್ನುತ್ತಿರುವಾಗಲೇ ವಿಧಿ ನಗುತ್ತಿರುತ್ತದೆ. ಮಾರನೆಯ ದಿನ ಸದಾನಂದನೊಡನೆ ಮನೆಗೆ ಹೋಗುವಾಗ ಮನೆಯಲ್ಲಿ ಜನ ತುಂಬಿದ್ದರು. ಲಕ್ಷ್ಮೀಪತಯ್ಯ ಬಾಗಿಲಲ್ಲಿ ನಿಂತಿದ್ದವರು 'ಅಗೋ ರಾಜು ಬಂದ,' ಎಂದರು. ಗೋವಿಂದರಾಯರು ರಾತ್ರಿ ಮಂಚದ ಮೇಲೆ ಉರುಳಿದವರು ಎದ್ದಿರಲಿಲ್ಲ. ರಾಜುವಿನ ರಾಜಿಗೆ ವಿಧಿ ಸಮಯ ಕೊಟ್ಟಿರಲಿಲ್ಲ. ತಂದೆಯ ಅಂತ್ಯಕರ್ಮಗಳನ್ನು ಮುಗಿಸಿ ಬಂದ ರಾಜು ಲಲಿತೆಯನ್ನು ಮಾತನಾಡಿಸದೆ ಹೊರಟುಹೋಗಿದ್ದನು.

ಗೋವಿಂದರಾಯರು ತಮ್ಮ ಆಸ್ತಿಯನ್ನೆಲ್ಲಾ ಸೊಸೆಗೂ ಅವಳ ಮಕ್ಕಳಿಗೂ ಬಿಟ್ಟು ಹೋದರೆಂದೂ ಅದರಲ್ಲಿ ಬಿಡಿ ಕಾಸು ಮುಟ್ಟುವ ಹಕ್ಕು ರಾಜುವಿಗಿಲ್ಲವೆಂದೂ ಜನರಾಡುತ್ತಿದ್ದ ಮಾತು ರಾಜುವಿನ ಕಿವಿ ಮುಟ್ಟಿತು. ಸದಾನಂದನೇ, 'ಲಾಯರನ್ನು ವಿಚಾರಿಸಿಕೊಂಡು ಬಾ,' ಎಂದು ಕಳುಹಿದನು.

ಲಾಯರ್ ಸೋಮನಾಥರು ಯಾವ ಆಸೆಯನ್ನೂ ಉಳಿಸಲಿಲ್ಲ. ಸೊಸೆಗೆ ಪ್ರತಿ ತಿಂಗಳಿಗಾಗುವಷ್ಟು ಹಣ ಕೈಗೆ ಬರುವುದೆಂದೂ ಆಸ್ತಿಯನ್ನು ಆಕೆಯ ಮುಂದೆ ಹುಟ್ಟುವ ಮಗು ವಯಸ್ಸಿಗೆ ಬರುವವರೆಗೂ ಯಾರೂ ಮುಟ್ಟುವಹಾಗಿಲ್ಲವೆಂದೂ ಹೇಳಿದರು. ತಂದೆ ಸತ್ತಮೇಲೆ ತನ್ನ ಖರ್ಚು ನಿರಾಶಂಕವಾಗಿ ನಡೆಯಬಹುದೆಂದಿದ್ದ ರಾಜುವಿನ ಕನಸು ಮಣ್ಣುಗೂಡಿತು. ನಿಧಾನವಾಗಿ ಮನೆಯಕಡೆ ನಡೆದನು. ಬಾಗಿಲಿಗೆ ಬೀಗ ಹಾಕಿತ್ತು. ಸದಾನಂದ ತನ್ನ ಕೊಠಡಿಯ ಬಾಗಿಲಲ್ಲೇ ನಿಂತಿದ್ದನು.

'ಏನಾಯಿತು ?'

'ಎಲ್ಲಾ ಕಳೆದು ಹೋಯಿತು,' ಎಂದು ಲಾಯರು ಹೇಳಿದ ಮಾತನ್ನೆಲ್ಲಾ ತಿಳಿಸಿದನು.

'ನಿಮ್ಮ ಸ್ಥಿತಿಗತಿಗಳನ್ನು ನೋಡಿ ಹೀಗಾಗಬಹುದೆಂದುಕೊಂಡೆ,' ಎಂದು ಸದಾನಂದ ನಸುನಕ್ಕನು.

'ನಾನೇನು ಮಾಡಲಿ ?' ಅವನ ಅಸಹಾಯಕ ಪ್ರಶ್ನೆ ಕೇಳಿ ಸದಾನಂದ ಗಟ್ಟಿಯಾಗಿ ನಕ್ಕನು.

'ನಿನಗೇನು, ಬೇಡುವುದು ಅಭ್ಯಾಸವಾಗಿದೆಯಲ್ಲ. ಇಷ್ಟು ದಿನ ತಂದೆಯನ್ನು ಬೇಡುತ್ತಿದ್ದೆ. ಈಗ ಹೆಂಡತಿಯನ್ನು ಬೇಡು.'

ಕ್ರೋಧದಿಂದ ರಾಜುವಿನ ಕಣ್ಣು ಕೆಂಪಾಯಿತು. ತಟ್ಟನೆ ಅಲ್ಲಿಂದೆದ್ದು ಹೊರಟನು. ಸದಾನಂದನ ಇನ್ನಿಬ್ಬರು ಸ್ನೇಹಿತರು ಬಾಗಿಲ ಬಳಿಗೆ ಬಂದರು. ಅವರ ನಗು ಲಹರಿಲಹರಿಯಾಗಿ ಅವನನ್ನು ಹಿಂಬಾಲಿಸುತ್ತಿತ್ತು.

*    *    *    *

ರಾಜು ಗಿಡದ ಕೆಳಗೆ ಪದ್ಮಾಸನ ಹಾಕಿ ಕುಳಿತಿದ್ದನು. ಮುಖದ ಮೇಲೆ ಬೆಳೆದಿದ್ದ ಗಡ್ಡ, ಒಂದು ವಿಧವಾದ ಗಾಂಭೀರ್ಯವನ್ನು ಮೆರೆಸುತ್ತಿತ್ತು. ಸೂರ್ಯ ನಡುನೆತ್ತಿಗೆ ಬಂದಿದ್ದರೂ ಮರದ ಕೆಳಗೆ ತಂಪಾಗಿಯೇ ಇತ್ತು. ದೃಷ್ಟಿ ದಿಗಂತದಲ್ಲಿ ನೆಟ್ಟಿತ್ತು. ಐದು ವರ್ಷದ ಹುಡುಗ ಬಾಗಿಲಿಂದ ಕೂಗಿದನು 'ಅಪ್ಪಾ, ಎಲೆ ಹಾಕಿದೆ ಅಮ್ಮ ಊಟಕ್ಕೆ ಕರೀತಾಳೆ.'

---

ಹುಟ್ಟಿದಂದಿನಿಂದ ೧೮ ರ ವರೆಗೆ ಹುಡುಗಿಗೆ ಒಳ್ಳೆಯ ತಂದೆ-ತಾಯಿಗಳು ಬೇಕು. ೧೮ ರಿಂದ ೩೫ರವರೆಗೆ ಅವಳಿಗೆ ಒಳ್ಳೆಯ ರೂಪ ಬೇಕು. ೩೫ ರಿಂದ ೫೫ ರ ವರೆಗೆ ಹೆಂಗಸಿಗೆ ಒಳ್ಳೆಯ ವ್ಯಕ್ತಿತ್ವ ಬೇಕು. ೫೫ ರ ನಂತರ ಮುದುಕಿಗೆ ಒಳ್ಳೆಯ ಹಣ ಬೇಕು.

---

# ನಮ್ಮ ನ್ಯಾಯವ್ಯವಸ್ಥೆಯಲ್ಲಿ ಬದಲಾವಣೆಯಾಗಬೇಕೆ ?

**ನಮ್ಮ ಇಂದಿನ ಕೋರ್ಟು ಕಚೇರಿಗಳು ಬ್ರಿಟಿಷರು ತಮ್ಮ ಸೌಕರ್ಯಕ್ಕಾಗಿ ಇಲ್ಲಿ ತಂದು ನಟ್ಟ ಪದ್ಧತಿಯನ್ನನುಸರಿಸಿವೆ. ಇದು ನಮ್ಮ ದೇಶಕ್ಕೆ ಎಷ್ಟು ಒಗ್ಗಿದೆ ? ಒಗ್ಗಿಲ್ಲವೆಂದೇ ಲೇಖಕರ ಮತ. ನಾವು ರಶಿಯನ್ನರಿಂದ ಕಲಿಯತಕ್ಕದ್ದಿದೆಯೆಂದು ಅವರು ಹೇಳುತ್ತಾರೆ.**

ಲೇಖಕರು : ಶ್ರೀ ರಂಗರಾವ ತಲಚೇರಿಕರ, ವಕೀಲರು, ಬೆಳಗಾಂವಿ

'ಸುಳ್ಳು ಹೇಳಲಿಕ್ಕೆ ಇದು ಕೋರ್ಟು ಏನು ?' ಈ ಮಾತುಗಳು ನಾಡಿನ ಎಲ್ಲಾ ಭಾಗಗಳಲ್ಲೂ ವಿಶೇಷವಾಗಿ ನಾಲ್ಕು ಮಂದಿ ಹಳ್ಳಿಗರು ಕೂಡಿದೆಡೆ ಯಾವಾಗಲೂ ಕಿವಿಗೆ ಬೀಳುತ್ತವೆ.

ಎಲ್ಲಿ ದೇವರಾಣೆಮಾಡಿ ಸತ್ಯ ಹೇಳುತ್ತೇನೆಂದು ಶಪಥ ತಗೊಂಡ ಮೇಲೆ ಮಾತ್ರವೇ ಬಾಯಿಯಿಂದ ಮಾತು ಹೊರಡಿಸಬಹುದೊ ಅಂತಹ ನಮ್ಮ ನ್ಯಾಯಸ್ಥಾನಗಳು ಸಾರ್ವಜನಿಕರ ದೃಷ್ಟಿಯಲ್ಲಿ ಸುಳ್ಳಿನ ಕೂಪಗಳೆಂದ ಮೇಲೆ ನಮ್ಮ ನ್ಯಾಯ ವ್ಯವಸ್ಥೆಯು ದೋಷಯುಕ್ತವೆಂಬುದಕ್ಕೆ ಬೇರೆ ಸಾಕ್ಷಿ ಬೇಕೇ ?

ಯಾವದೇ ನ್ಯಾಯವ್ಯವಸ್ಥೆಯು ಯಶಸ್ವಿಯಾಗಬೇಕಾದರೆ, ಅದು ಆ ಸಮಾಜದ ಜೀವನಕ್ಕೆ ಹೊಂದಿಕೊಂಡಿರಬೇಕು. ಹೊರಗಿನಿಂದ ಹೊರಿಸಲ್ಪಟ್ಟ ನ್ಯಾಯವ್ಯವಸ್ಥೆಯು ತಾಂತ್ರಿಕ ಹಾಗೂ ತಾತ್ವಿಕ ದೃಷ್ಟಿಯಿಂದ ಎಷ್ಟೇ ಉತ್ತಮ ಅಥವಾ ಪರಿಪೂರ್ಣವಿದ್ದರೂ ಸಮಾಜ ಜೀವನದೊಡನೆ ಸಮರಸವಾಗದಿದ್ದರೆ ಅದು ಯಶಸ್ವಿಯಾಗಲಾರದು. ಸಮಾಜವು ಬೆಳೆದಂತೆ ಅದರ ಇತರ ಸಂಸ್ಥೆಗಳು ವಿಕಾಸಹೊಂದುತ್ತಾ ಬಂದಂತೆ ನ್ಯಾಯವ್ಯವಸ್ಥೆಯು ಬೆಳೆಯುತ್ತಾ ಬರುವದು. ಅಂತಹ ಸಮಾಜವಿಕಾಸದೊಂದಿಗೆ ಬೆಳೆದು ಬಂದ ನ್ಯಾಯವ್ಯವಸ್ಥೆಯು ಸಮಾಜಕ್ಕೆ ಅನುಗುಣವಾಗಿದ್ದು ನ್ಯಾಯದಾನದ ಉದ್ದೇಶವನ್ನು ಸಫಲಗೊಳಿಸುವದು.

ಆದರೆ, ನಮ್ಮ ನ್ಯಾಯವ್ಯವಸ್ಥೆಯು ಆ ರೀತಿ ಬೆಳವಣಿಗೆ ಹೊಂದಿದುದಲ್ಲ. ಅದು ಬ್ರಿಟಿಷರು ತಮ್ಮ ಆಡಳಿತ ಕಾಲದಲ್ಲಿ ನಮ್ಮ ಮೇಲೆ ಹೊರಿಸಿದಂತಹದು. ಇಂಗ್ಲಂಡಿನಲ್ಲಿ ಅದು ಯಶಸ್ವಿಯಾಗಿರಬಹುದು. ಇಂಗ್ಲಂಡಿನ ಸಮಾಜ ವ್ಯವಸ್ಥೆಯಲ್ಲಿ ವಿಕೇಂದ್ರೀಕೃತ ಹಾಗೂ ಸಂಘಟಿತ ಗ್ರಾಮದ ಆಡಳಿತೆಯ ಪದ್ಧತಿ ಇಲ್ಲ. ಆ ದೇಶದ ಜೀವನದಲ್ಲಿ ನಮ್ಮಲ್ಲಿಗಿಂತ ಹೆಚ್ಚಿನ ಶಿಸ್ತು ಮತ್ತು ವೈಯಕ್ತಿಕತೆ ಕಂಡುಬರುತ್ತದೆ. ಹಾಗೂ ಅಲ್ಲಿನ ಜನಜೀವನದಲ್ಲಿ ನಮ್ಮಲ್ಲಿನ ಜನಜೀವನಕ್ಕಿಂತ ಅಧಿಕವಾದ ವೈವಿಧ್ಯ ಇದೆಯಲ್ಲದೆ ಅದು ಬಹುತರ ಯಾಂತ್ರಿಕ ಸ್ವರೂಪದ್ದಿದೆ. ಅಂತಹ ಸಮಾಜಕ್ಕೆ ನೈಸರ್ಗಿಕವಾಗಿರುವ ಈ ನ್ಯಾಯವ್ಯವಸ್ಥೆಯು ತಾಂತ್ರಿಕ ದೃಷ್ಟಿಯಿಂದ ಉತ್ತಮವಿದ್ದರೂ ಅವರ ಸಮಾಜಜೀವನಕ್ಕಿಂತ ತೀರಾ ಬೇರೆಯಾದ ನಮ್ಮ ಸಮಾಜಕ್ಕೆ ಅನುರೂಪವಾಗಲಾರದು, ಅರ್ಥಾತ್ ಯಶಸ್ವಿಯಾಗಲಾರದು.

ಬ್ರಿಟಿಷರ ಆಳಿಕೆಯ ಮೊದಲು ನಮ್ಮ ದೇಶದಲ್ಲಿ ಗ್ರಾಮಗಳು ಆಡಳಿತದ ಹಾಗೂ ಸಂಘಟಿತ ಸಮಾಜಜೀವನದ ಕೇಂದ್ರಗಳಾಗಿದ್ದುವು. ಊರೊಳಗಿನ ದಿವಾಣೀಸ್ವರೂಪದ ದಾವೆಗಳೂ ಫೌಜದಾರಿ ಪ್ರಕರಣಗಳೂ ಗ್ರಾಮ ಪಂಚಾಯತದಲ್ಲಿಯೇ ತೀರ್ಮಾನಿಸಲ್ಪಡುತ್ತಿದ್ದವು. ಮಹತ್ವದ ಪ್ರಕರಣಗಳು ರಾಜನ ಅಥವಾ ನ್ಯಾಯಾಧೀಶರ ಕಡೆಗೆ ಹೋದರೂ ಅವರು ಸಹ ಪಂಚಾಯತದ ಸಹಾಯದಿಂದಲೇ ಅವುಗಳನ್ನು ನಿರ್ಣಯಿಸುತ್ತಿದ್ದರು. ಇದರಿಂದಾಗಿ, ನ್ಯಾಯ ದೊರಕಿಸಲು ಹಣ ವೆಚ್ಚಮಾಡಬೇಕಾಗುತ್ತಿರಲಿಲ್ಲ. ಹಾಗೂ ಊರಿನ ಎಲ್ಲ ವಿದ್ಯಮಾನಗಳನ್ನು ತಿಳಿದಿರುವ ಪಂಚರ ಮುಂದೆ ಸುಳ್ಳು ಹೇಳುವದು ಸುಲಭವಿರಲಿಲ್ಲ. ಪಂಚಾಯತದ ಕಾರ್ಯಕಲಾಪಗಳು ವಿಶೇಷವಾದ ಶಿಸ್ತು, ನಿಯಮಗಳಿಲ್ಲದೆ ಅನೌಪಚಾರಿಕವಾಗಿ ನಡೆಯುತ್ತಿದ್ದರೂ ಅವುಗಳ ಸಹಜ ಹಾಗೂ ನೈಸರ್ಗಿಕ ವಾತಾವರಣದಲ್ಲಿ ಸತ್ಯವು ಹೊರಪಟ್ಟು ಯೋಗ್ಯ ನ್ಯಾಯ ದೊರೆಯುತ್ತಿದ್ದಿತು.

ಬ್ರಿಟಿಷ ಆಳ್ವಿಕೆಯ ಅತ್ಯಂತ ಅನಿಷ್ಟ ಪರಿಣಾಮವೆಂದರೆ ನಮ್ಮ ಗ್ರಾಮಗಳ ಸಂಘಟಿತ ಆಡಳಿತ ಸಂಸ್ಥೆಗಳನ್ನು ನಷ್ಟಗೊಳಿಸಿದುದು. ಇದರ ಪರಿಣಾಮವಾಗಿ ನ್ಯಾಯ ನೀಡುವ ಗ್ರಾಮ ಪಂಚಾಯತಗಳೂ ನಷ್ಟಹೊಂದಿ ಅವುಗಳ ಸ್ಥಳದಲ್ಲಿ ಈಗಿರುವಂತಹ ಕೋರ್ಟುಗಳ ಮೂಲಕ ನ್ಯಾಯನಿರ್ಣಯ ಮಾಡುವ ಪದ್ಧತಿಯು ಅನುಲಿನಲ್ಲಿ ಬಂದಿತು.

ಈ ಪದ್ಧತಿಯು ನಮ್ಮ ಸಾಮಾಜಿಕ ಸಂಸ್ಕೃತಿಗೆ ಅನುರೂಪವಾಗಿರಲಿಲ್ಲ. ಹಾಗಾಗಿ ಅದು ಸಮಾಜ ಜೀವನದೊಡನೆ ನೈಸರ್ಗಿಕವಾಗಿ ಬೆರೆಯಲಿಲ್ಲ. ಅದರ ಬದಲಿಗೆ ಸಮಾಜದ ಬೆಳವಣಿಗೆಯನ್ನು ತಡೆಹಿಡಿಯುವ ಕೃತ್ರಿಮ ಸಾಧನವಾಗಿ ಪರಿಣಮಿಸಿತು.

* * * *

ಬ್ರಿಟಿಷರು ಮೂಲತಃ ನಮ್ಮ ನಾಡಿಗೆ ವ್ಯಾಪಾರಕ್ಕಾಗಿ ಬಂದವರು. ವ್ಯಾಪಾರೀ ಮನೋವೃತ್ತಿಯಿಂದಲೇ ಅವರು ತಮ್ಮ ರಾಜ್ಯವನ್ನು ಸ್ಥಾಪಿಸಿದರು. ಕೋರ್ಟುಗಳ ವ್ಯವಸ್ಥೆಯಲ್ಲಿಯೂ ಅವರ ವ್ಯಾಪಾರೀ ಧೋರಣ ಕಂಡುಬರುವದು. ನ್ಯಾಯ ಬೇಡುವದು ಅನ್ಯಾಯ ಹೊಂದಿದ ನಾಗರಿಕನ ಜನ್ಮಸಿದ್ಧ ಹಕ್ಕಾದರೂ ಈಗಿನ ನಮ್ಮ ನ್ಯಾಯ ವ್ಯವಸ್ಥೆಯಲ್ಲಿ ಅದು ಉಚಿತವಾಗಿ ಸಿಗಲಾರದು. ಅದಕ್ಕೂ ಅವನು ಬೆಲೆ ಕೊಡಬೇಕು. ನೂರು ರೂಪಾಯಿ ಬರಬೇಕೆಂದು ದಾವೆ ತರುವವನು ಸೇ. ೭॥ ಯಿಂದ ೧೦ ರ ತನಕ ಕೋರ್ಟ ಫೀ ತುಂಬಬೇಕು. ಹೆಜ್ಜೆಹೆಜ್ಜೆಗೂ ದಾವೆಯ ನಡುವಿನ ಕಾಲಾವಧಿಯ ಅರ್ಜಿಗಳಿಗೆ ಸ್ಟಾಂಪ ಹಚ್ಚಬೇಕು. ಇಷ್ಟು ಫೀ ತುಂಬಿ ಹುಕುಮನಾಮೆ ದೊರಕಿಸಿದರೂ ಅಷ್ಟಕ್ಕೆ ಖರ್ಚು ಮುಗಿಯುವದಿಲ್ಲ. ಹುಕುಮನಾಮೆಯ ಪ್ರಕಾರ ಬರಬೇಕಾದ ರಕಮಿಗಾಗಿ ದರಖಾಸ್ತ ( ಅಮಲಜಾರಿ ) ಕೊಡುವದಾದರೆ ಅದಕ್ಕೂ ಪ್ರತ್ಯೇಕ ಕೋರ್ಟ ಫೀ ತುಂಬಬೇಕು.

ಈ ಕೋರ್ಟಫೀಯ ಪದ್ಧತಿಯಿಂದಾಗಿ ಈಗ ನಮ್ಮ ನಾಡಿನಲ್ಲಿ ಸಿಗುವದು ನ್ಯಾಯದಾನವಲ್ಲ, ನ್ಯಾಯವಿಕ್ರಯ. ಕೋರ್ಟುಗಳು ಸರಕಾರಕ್ಕೆ ಉತ್ಪನ್ನ ಒದಗಿಸುವ ಸಂಸ್ಥೆಗಳಾಗಿವೆ.

ಹೀಗೆ ನ್ಯಾಯವು ಮಾರಾಟದ ಸ್ವತ್ತಾದ ಮೇಲೆ ಅದರ ಬೆಲೆ ಕೊಡಲು ಅಸಮರ್ಥನಾದ ಬಡ ನಾಗರಿಕನಿಗೆ ಅದು ಸಿಗುವದು ಹೇಗೆ ?

ನ್ಯಾಯವ್ಯವಸ್ಥೆಯಲ್ಲಿ ಈ ವಿಕ್ರಯದ ಸ್ವರೂಪವು ಬದಲಾಗದೆ ನ್ಯಾಯದಾನವು ಎಂದೂ ಆ ಹೆಸರಿಗೆ ಪಾತ್ರವಾಗಲಾರದು. ಸಂಪೂರ್ಣವಾಗಿ ಕೋರ್ಟಫೀಯನ್ನು ಕಳೆದು ಕೊಳ್ಳುವದು ಸರಕಾರಕ್ಕೆ ಅಸಾಧ್ಯವೆನಿಸಿದರೆ ಅದನ್ನು ದಾವೆಯಲ್ಲಿ ಬೇಡಿಕೊಂಡ ವಿಷಯದಲ್ಲಿ ಅನುಕೂಲ ನಿರ್ಣಯ ಪಡೆದು ಅನ್ಯಾಯದ ನಿವಾರಣೆಯಾದ ಬಳಿಕ ಮಾತ್ರವೇ ಅದನ್ನು ವಸೂಲ ಮಾಡಬೇಕು. ಕೋರ್ಟ ಫೀ ಕೊಡದೆ ದಾವೆ ಮಾಡಬಹುದಾದರೆ, ದಾವೆಗಳ ಸಂಖ್ಯೆಯು ಮಿತಿಮೀರುವದೆಂಬ ಮಾತಿನಲ್ಲಿ ಏನೂ ಹುರಳಿಲ್ಲ. ಕೋರ್ಟುಗಳು ನಿಜವಾದ ನ್ಯಾಯಮಂದಿರ

ಗಳಾದರೆ, ಕಾರಣವಿಲ್ಲದೆ ಯಾವೊಬ್ಬನೂ ದಾವೆ ಹೂಡಲು ಹಿಂಜರಿಯುವನು. ಒಂದು ವೇಳೆ ಅಂತಹ ಸಂಭವ ಉಂಟೆಂದಾದರೆ ನಿಷ್ಕಾರಣವಾಗಿ ದಾವೆ ಹೂಡುವವನನ್ನು ದಂಡಿಸುವ ಅಧಿಕಾರ ನ್ಯಾಯಾಲಯಗಳಿಗೆ ಕೊಟ್ಟರೆ, ಆ ಭೀತಿಯು ನಿವೃತ್ತಿಯಾಗುವದು.

ಈಗಿನ ವ್ಯವಸ್ಥೆಯಲ್ಲಿ ನ್ಯಾಯಪ್ರಾಪ್ತಿಯು ಬಡವರ ಕೈಗೆ ನಿಲುಕದ ವಸ್ತುವಾಗಲು ಇನ್ನೊಂದು ಕಾರಣವೆಂದರೆ ಕೋರ್ಟುಗಳ ಸಂಖ್ಯೆ ಹಾಗೂ ಅವು ಇರುವ ಸ್ಥಳಗಳು. ಅಧಿಕ ಸಂಖ್ಯೆಯಲ್ಲಿ ಕೋರ್ಟುಗಳನ್ನಿಟ್ಟರೆ ವೆಚ್ಚ ಹೆಚ್ಚುವದರಿಂದ, ಅವುಗಳಿಂದ ಸಿಗುವ ಲಾಭವು ಕಡಿಮೆಯಾಗುವದು. ವ್ಯಾಪಾರೀ ಧೋರಣವನ್ನನುಸರಿಸಿ ಬ್ರಿಟಿಷರು ಕೋರ್ಟುಗಳನ್ನು ಮುಖ್ಯ ಶಹರಗಳಲ್ಲಿ ಮಾತ್ರವೇ ಸ್ಥಾಪಿಸಿದರು. ಇದರಿಂದಾಗಿ ದಾವೆ ಅಥವಾ ಫಿರ್ಯಾದಿ ಮಾಡಿದವನೂ ವಿರುದ್ಧ ಪಕ್ಷದವರೂ ಕೋರ್ಟು ಇರುವ ಊರಿಗೆ ಬಂದುಹೋಗುವ ವೆಚ್ಚವು ಸಾಮಾನ್ಯ ನಾಗರಿಕನ ಶಕ್ತಿಗೆ ಮೀರಿದುದಾಯಿತು, ಸಾಕ್ಷಿಗಾರರನ್ನು ಕರೆತರುವ ವೆಚ್ಚವನ್ನೂ ಇದಕ್ಕೆ ಸೇರಿಸಿದರೆ ವಾದಿ, ಪ್ರತಿವಾದಿಗಳು ಹೊರಬೇಕಾದ ಭಾರವೆಷ್ಟೆಂಬುದು ಕಲ್ಪನೆಯನ್ನೂ ಮೀರಬಹುದು.

ಅನ್ಯಾಯ ಹೊಂದಿದವನನ್ನು ನ್ಯಾಯದಾನದ ಬೇಡಿಕೆಯಿಂದ ಹಿಮ್ಮೆಟ್ಟಿಸುವ ಇನ್ನೊಂದು ಬಲವಾದ ಕಾರಣವೆಂದರೆ ನ್ಯಾಯದ ವಿಳಂಬ. ನ್ಯಾಯದಾನದಲ್ಲಿ ವಿಳಂಬವಾಗುವದೆಂದರೆ ಈವತ್ತು ಹಸಿವೆಯಿಂದ ಪೀಡಿತನಾಗಿ ಅನ್ನ ಬೇಡುವವನಿಗೆ ಒಂದು ವಾರದ ನಂತರ ಅನ್ನ ನೀಡಿದಂತೆ. ಆ ಕಾಲದಲ್ಲಿ ನೀಡಿದ ಅನ್ನವನ್ನು ಜೀರ್ಣಿಸುವ ಶಕ್ತಿಯನ್ನೂ ಅವನು ಕಳೆದುಕೊಳ್ಳುವನು.

ಇಂತಹ ವಿಳಂಬಕ್ಕೆ ಕಾರಣಗಳೆಂದರೆ (೧) ಕೋರ್ಟುಗಳ ಅಲ್ಪಸಂಖ್ಯೆ (೨) ವ್ಯವಹರಣೆಗಳ ಚೌಕಶಿಯ ಸಂಬಂಧದ ಕಾಯದೆಯ ವಿಳಂಬ ಕಾರಕ ಸ್ವರೂಪ ಹಾಗೂ ಅದರಲ್ಲಿ ನಮೂದಿಸಿರುವ ಹಲವು ಕಾಲಾವಧಿಗಳು (Stages) (೩) ಚೌಕಶಿಯನ್ನು ಮುಂದೂಡಲು ಇರುವ ಹಲವು ಸಾಧನಗಳು. (೪) ಒಂದಕ್ಕಿಂತ ಹೆಚ್ಚು ಅಪೀಲುಗಳ ಸಂಧಿ ಹಾಗೂ ಅಪೀಲು ಕೋರ್ಟಿನ ನಿರ್ಣಯ ಹೊರಬರಲು ಹತ್ತುವ ದೀರ್ಘ ಕಾಲದ ಅವಧಿ.

ಈ ಎಲ್ಲಾ ಕಾರಣಗಳಿಂದಾಗಿ ದಾವೆ ಹೂಡಿದ ದಿನದಿಂದ ಕೊನೆಯ ನಿರ್ಣಯ ಬರುವ ವರೆಗೆ ಆರೇಳು ವರ್ಷ ಹಿಡಿಯುವದು ಅಪರೂಪದ ಸಂಗತಿಯಲ್ಲ. ಆ ಕೊನೆಯ ನಿರ್ಣಯ ಬರುವದರೊಳಗೆ ವಾದಿ ಪ್ರತಿವಾದಿಯರಿಬ್ಬರೂ ಸೋತು ಸುಣ್ಣವಾಗುತ್ತಾರೆ.

ಮೈಸೂರಕಡೆ, ‘ ನಿನ್ನ ಮನೆಯ ಮೇಲೆ ಸಿವಿಲ ವ್ಯಾಜ್ಯ ಬಿದ್ದುಹೋಗಲಿ ’ ಎಂದು ಶಾಪಕೊಡುತ್ತಾರಂತೆ. ಸಿವಿಲ್ ವ್ಯಾಜ್ಯಕ್ಕಿಂತ ಹೆಚ್ಚಿನ ಅನಿಷ್ಟಕಾರಕ ಸಂಗತಿಯು ಬೇರೊಂದಿಲ್ಲ ಎಂಬುದು ಇದರ ಹಿಂದಿರುವ ನೈಜಕಲ್ಪನೆ. ಇದರ ಯಥಾರ್ಥತೆಯನ್ನು ಯಾರೂ ಅಲ್ಲಗಳೆಯಲಾರರು.

‡ ‡ ‡

ಇಂದಿನ ನಮ್ಮ ನ್ಯಾಯವ್ಯವಸ್ಥೆಯಲ್ಲಿನ ಎಲ್ಲಕ್ಕಿಂತಲೂ ಮಹತ್ವದ ದೋಷವೆಂದರೆ ನಮ್ಮ ಕೋರ್ಟುಗಳಲ್ಲಿನ ಕೃತಕ ವಾತಾವರಣ. ನ್ಯಾಯದಾನಪದ್ಧತಿಯು ಯಶಸ್ವಿಯೆನಿಸಬೇಕಾದರೆ, ಯೋಗ್ಯ ನ್ಯಾಯ ಸಿಗುವದಷ್ಟೇ ಅಲ್ಲ, ನ್ಯಾಯವು ಸಿಗುತ್ತದೆಂಬುದು ಕೋರ್ಟಿನ ಕಾರ್ಯಕಲಾಪಗಳನ್ನು ನೋಡುವವರಿಗೆ ಮುಂದಟ್ಟಾಗಬೇಕು. ಈಗಿನ ನಮ್ಮ ನ್ಯಾಯವ್ಯವಸ್ಥೆಯಲ್ಲಿ ಅದು ಸಾಧ್ಯವೇ ಇಲ್ಲ. ಇದರ ಕಾರಣಗಳೆಂದರೆ,

೧) ಸಾಮಾನ್ಯ ಜನರಿಗೆ ತಿಳಿಯದ ವಿದೇಶೀ ಭಾಷೆಯಲ್ಲಿ ಕೋರ್ಟು ವ್ಯವಹಾರಗಳನ್ನು ನಡೆಸುವದು.

೨) ಕಾಯದೆಗಳ ಕ್ಲಿಷ್ಟತೆ.

ನಾಗರಿಕರಿಗಾಗಿ ಕಾಯದೆಗಳು, ಅಲ್ಲದೆ ಕಾಯದೆಗಳಿಗಾಗಿ ನಾಗರಿಕರಲ್ಲ ಎಂಬುದನ್ನು ಎಲ್ಲರೂ ಒಪ್ಪಬೇಕು. ಹೀಗಿರುವಾಗ, ಕಾಯದೆಗಳು ಸಾಮಾನ್ಯ ವಿದ್ಯಾವಂತರಿಗೂ ತಿಳಿಯದಷ್ಟು ಕ್ಲಿಷ್ಟ ಹಾಗೂ ತೊಡಕಿನವಿರಬೇಕೇ ? ನಮ್ಮಲ್ಲಿನ ಕಾಯದೆಗಳ ಕ್ಲಿಷ್ಟತೆ ಎಷ್ಟೆಂದರೆ, ಅವುಗಳ ಅರ್ಥ ಮಾಡಿಕೊಳ್ಳಲು ಹೈಕೋರ್ಟ ನ್ಯಾಯಾಧೀಶರೇ

ತಲೆ ಕರಡು ಮಾಡಿಕೊಳ್ಳಬೇಕಾಗುತ್ತದೆ. ಅಂದ ಬಳಿಕ ಇತರರ ಪಾಡೇನು?

ನಾಗರಿಕತೆ ಬೆಳೆದಂತೆ ಸಮಾಜ ಚಟುವಟಿಕೆಗಳ ವೈವಿಧ್ಯವೂ ಹೆಚ್ಚುವದರಿಂದ ಕಾಯದೆಗಳ ಸಂಖ್ಯೆಯು ಏರುತ್ತಾ ಬರುವದು ಸಹಜವಿರಬಹುದು. ಆದರೆ ಅವು ಕ್ಲಿಷ್ಟವಿರಬೇಕಾಗಿಲ್ಲ. ಕಾಯದೆಗಳು ಸರಳವೂ ಸುಲಭವಾಗಿ ಅರ್ಥಬೋಧವಾಗುವಂಥವೂ ಇದ್ದರೆ ಕಾಯದೆಯು ಹಾಕಿಕೊಟ್ಟ ದಾರಿಯಲ್ಲಿ ನಡೆಯುವದು ಸುಲಭವಾಗುವದು. ಕೋರ್ಟುಗಳ ಕೃತಕ ವಾತಾವರಣದಲ್ಲಿ ತುಸುವಾದರೂ ಸಹಜತೆಯ ಬೆಳಕಿನ ಕಿರಣ ಮೂಡುವದು.

ಸತ್ಯವೇ ನ್ಯಾಯದ ಅಡಿಗಲ್ಲು. ಆದರೆ, ಈಗಿನ ನ್ಯಾಯವ್ಯವಸ್ಥೆಯ ಕೋರ್ಟುಗಳು ಸತ್ಯವನ್ನು ಕಂಡುಹಿಡಿಯುವದರಲ್ಲಿ ಯಶಸ್ವಿಯಾಗಿವೆಯೆಂದು ಯಾರೂ ಹೇಳಬರುವಂತಿಲ್ಲ. ಇದರ ಮುಖ್ಯ ಕಾರಣವೆಂದರೆ ಕೋರ್ಟುಗಳಲ್ಲಿನ ಕೃತಕ ವಾತಾವರಣ. ಮೊದಲಿನ ಗ್ರಾಮಪಂಚಾಯತದ ಸದಸ್ಯರು ಸಮೀಪದವರೇ ಇದ್ದು ಊರಿನ ಪರಿಸ್ಥಿತಿಯನ್ನು ಅರಿತವರಾದುದರಿಂದ, ಪಕ್ಷಕಾರರಿಗೆ ಅಂತಹ ಸಂಸ್ಥೆಗಳ ವಿಷಯದಲ್ಲಿ ಆತ್ಮೀಯತೆ ಇರುತ್ತಿತ್ತು. ಹಾಗೂ ತಮ್ಮ ನಿವೇದನವನ್ನು ನಿರ್ಭೀತಿಯಿಂದ ಮಾಡುತ್ತಿದ್ದರು. ಚೌಕಶಿಯು ಹೆಚ್ಚಿನ ವಿಧಿ, ನಿಯಮಗಳಿಲ್ಲದೆ ಅನೌಪಚಾರಿಕ ರೀತಿಯಿಂದ ನಡೆಯುತ್ತಿದ್ದುದರಿಂದಲೂ ಊರಿನವರ ಮುಂದೆ ಸುಳ್ಳು ಹೇಳಲು ಮಂದಿ ಹಿಂಜರಿಯುತ್ತಿದ್ದುದರಿಂದಲೂ ಸತ್ಯದ ಶೋಧವು ಸುಲಭವಾಗಿತ್ತು.

ಆದರೆ, ಕೋರ್ಟುಗಳ ಕೃತಕ ವಾತಾವರಣದಲ್ಲಿ ಸತ್ಯವನ್ನು ಕಂಡು ಹಿಡಿಯುವ ಅಂತಹ ನೈಸರ್ಗಿಕ ಸಹಜಸಾಧನಗಳಿಲ್ಲ. ಚೌಕಶಿಗಳು ಕಾಯದೆಯ ನಿಯಮಗಳಿಗನುಸರಿಸಿ ಒಂದು ಯಾಂತ್ರಿಕ ರೀತಿಯಲ್ಲಿ ನಡೆಯುತ್ತವೆ. ಈ ಕಾಯದೆ, ನಿಯಮಗಳ ನಿಬಿಡ ಕಾನನದಲ್ಲಿ ಸತ್ಯ ಸೂರ್ಯನ ಕಿರಣಗಳ ಪ್ರವೇಶವೇ ಹಲವು ಸಾರೆ ಅಸಾಧ್ಯವಾಗುತ್ತದೆ.

ಸತ್ಯವನ್ನು ಕಂಡುಹಿಡಿಯಲು ಕೋರ್ಟುಗಳಿಗೆ ಇರುವ ಸಾಧನಗಳೆಂದರೆ ಸಾಕ್ಷಿಗಾರರು ಹೇಳಿದ ಸಂಗತಿಗಳ ಸಂಭವನೀಯತೆ ಹಾಗೂ ಅವರ ಅಡ್ಡ ಸವಾಲಿನಲ್ಲಿ ಹೊರಪಡುವ ವಿಷಯಗಳು. ತಾತ್ವಿಕ ದೃಷ್ಟಿಯಿಂದ ನೋಡಿದರೆ, ಅಡ್ಡ ಸವಾಲು ಸುಳ್ಳನ್ನು ಹೊರಗೆಡುವ ಉತ್ತಮ ಸಾಧನವಾದರೂ ಪ್ರತ್ಯಕ್ಷ ಅನುಭವವು ಬೇರೆಯೇ ಇದೆ.

ಸಾಮಾನ್ಯ ಮನುಷ್ಯನಿಗೆ ವಿಶೇಷವಾಗಿ ಹಳ್ಳಿಗನಿಗೆ ಕೋರ್ಟುಗಳ ವಿಷಯದಲ್ಲಿ ಆತ್ಮೀಯತೆ ಹುಟ್ಟುವದಿಲ್ಲ. ಮೊದಲು ಬರುವಾಗ ಒಂದು ರೀತಿಯ ಅಂಜಿಕೆಯೇ ಇರುತ್ತದೆ. ಸಾಕ್ಷಿ ವಿಚಾರಣೆಯ ಸೂತ್ರಗಳ ಚೌಕಟ್ಟಿನ ಬೇಲಿಯಲ್ಲಿ ಅವನು ಮುಗ್ಗರಿಸಿ ಬೀಳುತ್ತಾನೆ. ಒಂದು ದೃಷ್ಟಾಂತವನ್ನು ಕೊಡುವದಾದರೆ, ನಮ್ಮ ಹಳ್ಳಿಗರಲ್ಲಿ ಕೇಳಿದ ಪ್ರಶ್ನೆಗಳಿಗೆ ನೇರ ಹಾಗೂ ಸಂಕ್ಷಿಪ್ತವಾದ ಉತ್ತರ ಕೊಡುವ ಸ್ವಭಾವವಿಲ್ಲ. ಅಲ್ಲದೆ, ಅವರ ಬಾಯಿಯಿಂದ ಮಾತುಗಳು ನಿಧಾನವಾಗಿ ಚಕ್ಕಡಿಯ ವೇಗದಲ್ಲಿ ಹೊರಬೀಳುತ್ತವೆ. ಕೋರ್ಟಿಗೆ ಬೇಕಾದ ರೈಲಿನ ವೇಗದಲ್ಲಲ್ಲ. ಇನ್ನೊಂದು ಸಂಗತಿ ಏನಂದರೆ ಪ್ರತಿಯೊಬ್ಬನೂ ನಡೆದ ಸಂಗತಿಗಳನ್ನು ಹೇಳುವಾಗ ಒಂದು ವಿಶಿಷ್ಟ ರೀತಿಯಲ್ಲಿ ಹೇಳುತ್ತಾನೆ. ಎಲ್ಲರೂ ಹೇಳುವ ರೀತಿಯು ಒಂದೇ ಇರುವದಿಲ್ಲ. ಇದನ್ನು ಸಹಾನುಭೂತಿಯಿಂದ ತಿಳಿದುಕೊಂಡು ಅವನ ರೀತಿಯಲ್ಲಿಯೇ ಹೇಳಲಿಕ್ಕೆ ಬಿಟ್ಟರೆ ಸತ್ಯದ ಶೋಧಕ್ಕೆ ಸಹಾಯವಾಗುವದು.

ಆದರೆ, ನಮ್ಮ ಕೋರ್ಟಿನಲ್ಲಿ ಅದಕ್ಕೆ ಅವಕಾಶವಿಲ್ಲ. ತಾಂತ್ರಿಕ ಸ್ವರೂಪದ ಅವುಗಳ ಮುಂದಿನ ಚೌಕಶಿಗಳಲ್ಲಿ ಕೇಳಿದ ಪ್ರಶ್ನೆಗಳಿಗೆ ನೇರ ಉತ್ತರ ಕೊಡಬೇಕೆಂಬುದು ಒಂದೇ ನಿಯಮ. ಎಲ್ಲಾ ಸಾಕ್ಷಿಗಾರರನ್ನೂ ಅಂತಹ ನಿಯಮಗಳ ಚೌಕಟ್ಟಿನಲ್ಲಿ ಹಾಕುವದರಿಂದ, ಹಲವು ಸಾರೆ ಸತ್ಯ ಹೇಳುವವನೂ ಸುಳ್ಳುಗಾರನೆಂಬ ಮುದ್ರೆ ಒತ್ತಲ್ಪಟ್ಟು ಸಾಕ್ಷಿಗೂಡಿನಿಂದ ಹೊರಬೀಳುತ್ತಾನೆ. ಆದರೆ, ಅದೇ ಪರಿಸ್ಥಿತಿಯಲ್ಲಿ, ಕೋರ್ಟುಗಳ ಅನುಭವವಿದ್ದ 'ಕೋರ್ಟಕೀಟ'ಗಳು ಪ್ರಶ್ನೆಗಳಿಗೆ ನೇರ ಉತ್ತರ ಕೇಳಿದೊಡನೆ ಕೊಟ್ಟು ಹಸಿ ಹಸಿ ಸುಳ್ಳು ಹೇಳಿದರೆ ನಿಜ ಹೇಳುತ್ತಾರೆಂಬ ಅಭಿಪ್ರಾಯವನ್ನು ಹುಟ್ಟಿಸಲು ಸಮರ್ಥರಾಗುತ್ತಾರೆ.

ಅಡ್ಡ ಸವಾಲು ಮಾಡುವ ವಕೀಲರ ಚಾತುರ್ಯದಿಂದ ಅಥವಾ ಮೂರ್ಖತನದಿಂದ ಸತ್ಯವು ಸುಳ್ಳಾಗಿ ತೋರುವ ಹಾಗೂ ಸುಳ್ಳು ಸತ್ಯವೆಂದು ಸ್ವೀಕರಿಸಲ್ಪಡುವ ದೃಷ್ಟಾಂತಗಳು ನಿತ್ಯದ ಅನುಭವವಾಗಿವೆ.

‡ ‡ ‡

ಈಗಿನ ನ್ಯಾಯವ್ಯವಸ್ಥೆಯಲ್ಲಿ ಮೇಲೆ ಹೇಳಿದಂತೆ ಕೋರ್ಟುಗಳಿಗೆ ಸತ್ಯವನ್ನು ಕಂಡುಹಿಡಿಯುವ ನೈಸರ್ಗಿಕ ಅನುಕೂಲ ಇಲ್ಲದಿದ್ದುದರಿಂದ, ಅವರ ನಿರ್ಣಯವು ತಮ್ಮ ಮುಂದೆ ಬರುವ ಪುರಾವೆಯ ಮೇಲೆಯೇ ಅವಲಂಬಿಸಿರಬೇಕಾಗುತ್ತದೆ. ಒಂದು ಸಂಗತಿಯು ಸತ್ಯವೆಂದು ನ್ಯಾಯಾಧೀಶನಿಗೆ ಖಾತ್ರಿಯಾದರೂ ಆ ಕುರಿತು ಪುರಾವೆ ಇಲ್ಲದಿದ್ದರೆ ಅವನು ಅದನ್ನು ಕಾಯದೆಯ ಪ್ರಕಾರ ಸ್ವೀಕರಿಸಲಾರನು. ಈ ನಿಯಮದಿಂದ, ಸತ್ಯವು ಕೂಡಾ ಪುರಾವೆಯ ದಾಸ್ಯಕ್ಕೆ ಬಲಿಬೀಳಬೇಕಾಗುತ್ತದೆ. ಈ ಪುರಾವೆಯ ದಾಸ್ಯವೇ ಸುಳ್ಳು ಸಾಕ್ಷಿಗಳ ಬೆಳವಣಿಗೆಗೆ ಕಾರಣವೆನ್ನಬಹುದು. ಭಾರತದಲ್ಲಿ ಸುಳ್ಳು ಸಾಕ್ಷಿಗಾರರ ಪರಂಪರೆಯು ಅವ್ಯಾಹತವಾಗಿ ಬೆಳೆದಿರುತ್ತದೆಂದು ಗೃಹಮಂತ್ರಿ ಡಾ. ಕಟಜು ಸಾಹೇಬರೂ ಇತರರೂ ಅಭಿಪ್ರಾಯಪಟ್ಟಿದ್ದಾರೆ. ನಮ್ಮ ಜನರು ಸ್ವಾಭಾವಿಕವಾಗಿಯೇ ಸುಳ್ಳುಗಾರರಿರುವದೇ ಇದಕ್ಕೆ ಕಾರಣವೆಂದು ಅನಿಸಬಹುದು. ಆದರೆ, ವಸ್ತುಸ್ಥಿತಿಯು ಹಾಗಿಲ್ಲ. ಭಾರತೀಯರು ಸುಳ್ಳಿನ ಜನಾಂಗವೆಂದು ಯಾರೂ ಅನ್ನಲಾರರು.

ಸುಳ್ಳು ಸಾಕ್ಷಿಗಳ ಬೆಳವಣಿಗೆಗೆ ನಮ್ಮ ಕೋರ್ಟುಗಳ ಕೃತಕ ವಾತಾವರಣ ಹಾಗೂ ಪುರಾವೆಯ ದಾಸ್ಯವೇ ಕಾರಣವಲ್ಲದೆ ನಮ್ಮ ಜನರ ಸುಳ್ಳಿನ ಪ್ರವೃತ್ತಿಯು ಎಂದಿಗೂ ಅಲ್ಲ.

ಒಟ್ಟಿನ ಮೇಲೆ, ಈ ಮೊದಲು ನಿವೇದಿಸಿದ ಯಾವತ್ತೂ ಕಾರಣಗಳಿಂದಾಗಿ ನಮ್ಮ ಕೋರ್ಟುಗಳು ನ್ಯಾಯದಾನ ಮಾಡುವ ಪವಿತ್ರ ಸಂಸ್ಥೆಗಳೆನಿಸುವ ಬದಲಿಗೆ ಪಕ್ಷಕಾರರ ಶಕ್ತಿ, ಸಾಮರ್ಥ್ಯಗಳನ್ನು ಒರೆಗೆ ಹಚ್ಚುವ ದ್ಯೂತದ ಕಟ್ಟೆಗಳಾಗಿ ಪರಿಣಮಿಸಿವೆ.

‡ ‡ ‡

ನ್ಯಾಯ ವ್ಯವಸ್ಥೆಯಲ್ಲಿ ಸುಧಾರಣೆ ಸಾಧ್ಯವೇ? ಗ್ರಾಮಪಂಚಾಯತಗಳನ್ನು ಪುನರುಜ್ಜೀವಿಸಿ ಅವುಗಳಿಗೆ ನ್ಯಾಯದಾನದ ಅಧಿಕಾರವನ್ನು ಕೊಡುವದು ಯಶಸ್ವಿಯಾದೀತೇ? ಇವು ನಾಡಿನ ಹಿರಿಯರ ಮುಂದಿರುವ ಪ್ರಶ್ನೆಗಳು.

ಭಾರತದಲ್ಲಿ ಬ್ರಿಟಿಶ ರಾಜ್ಯ ಸ್ಥಾಪನೆಯಾಗುವವರೆಗೆ ನಮ್ಮ ಗ್ರಾಮಗಳಲ್ಲಿ ಜನಜೀವನವು ಸಂಘಟಿತವಾಗಿತ್ತು. ಗ್ರಾಮಪಂಚಾಯತಗಳು ಅಧಿಕಾರಯುಕ್ತ ಸಜೀವ ಸಂಸ್ಥೆಗಳಾಗಿದ್ದುವು. ವಿವಾದಗಳ ತೀರ್ಮಾನದಲ್ಲಿ ಗ್ರಾಮ ಪಂಚಾಯತಗಳು ತೋರಿಸಿದ ಚಾಣಾಕ್ಷತೆ, ನಿಷ್ಪಕ್ಷಪಾತ ಹಾಗೂ

ನಿರ್ಣಯಗಳ ಯೋಗ್ಯತೆಯನ್ನು ಆ ಕಾಲದ ಬ್ರಿಟಿಷ್ ಅಧಿಕಾರಿಗಳು ಕೂಡ ಪ್ರಶಂಸಿಸಿದ್ದಾರೆ. ಆದರೆ, ಬ್ರಿಟಿಷ್ ನ್ಯಾಯವ್ಯವಸ್ಥೆಯ ವಾತಾವರಣದಲ್ಲಿ ಬೆಳೆದ ಹಾಗೂ ನಮ್ಮ ಸಂಸ್ಕೃತಿ ಮತ್ತು ಸಂಸ್ಥೆಗಳನ್ನು ತಿಳಿದುಕೊಳ್ಳಲು ಅಸಮರ್ಥರಾದ ಕೆಲವು ಅಧಿಕಾರಿಗಳ ಆಗ್ರಹದಿಂದ ಸರಕಾರವು ಗ್ರಾಮ ಪಂಚಾಯತಗಳನ್ನು ರದ್ದುಗೊಳಿಸಿ ಬ್ರಿಟಿಷ್ ರೀತಿಯ ನ್ಯಾಯಪದ್ಧತಿಯನ್ನು ಜಾರಿಯಲ್ಲಿ ತಂದಿತು.

ಗ್ರಾಮಪಂಚಾಯತಗಳು ಹೋದ ಬಳಿಕ, ಗ್ರಾಮಸಂಘಟನೆಯ ಕೇಂದ್ರವೇ ಇಲ್ಲದಂತಾಯಿತು. ಇದರಿಂದಾಗಿ, ಏಕೀಭಾವವು ನಷ್ಟವಾಗಿ ಗ್ರಾಮಗಳ ಸಾಮುದಾಯಿಕ ಜೀವನವು ಸಂಪೂರ್ಣ ಹಾಳಾಯಿತು. ಹಳ್ಳಿಗಳಲ್ಲಿ ಪಕ್ಷಗಳು, ಬಣಗಳು ಹುಟ್ಟಲು ಇದೇ ಕಾರಣ. ಈಗ, ಹಳ್ಳಿಗಳಲ್ಲಿ ಪಕ್ಷ, ಬಣಗಳ ಅಸ್ತಿತ್ವವಷ್ಟೇ ಇಲ್ಲ ; ಹೊಣೆಗಾರಿಕೆಯ ಕಲ್ಪನೆಯು ಕೂಡ ನಷ್ಟವಾಗಿದೆ. ಹೊಣೆಗಾರಿಕೆಯನ್ನರಿತ ಪ್ರಾಮಾಣಿಕ ಜನರು ಸಿಗುವದೇ ದುರ್ಲಭವಾಗಿದೆ. ನೂರಾಐವತ್ತು ವರ್ಷಗಳ ಬ್ರಿಟಿಶ ಆಳಿಕೆಯಿಂದ ಉಂಟಾದ ಈ ಪರಿಸ್ಥಿತಿಯನ್ನು ಸುಧಾರಿಸಲು ಹಲವು ವರ್ಷಗಳ ಪ್ರಯತ್ನ ಹಾಗೂ ಶಿಕ್ಷಣ ಬೇಕಾಗುವದು. ಹಾಗಾಗಿ ಈಗ ಇರುವ ಪರಿಸ್ಥಿತಿಯಲ್ಲಿ ನ್ಯಾಯದಾನದ ಅಧಿಕಾರವನ್ನು ಗ್ರಾಮಪಂಚಾಯತಗಳಿಗೆ ಕೊಡುವದು ಸರಿಯಾಗಲಾರದು, ಅದರಿಂದ ಅನರ್ಥವೇ ಆದೀತು ಎಂಬ ಭೀತಿಯು ಎಲ್ಲ ಕಡೆಗಳಲ್ಲಿ ವ್ಯಕ್ತಗೊಳಿಸಲ್ಪಡುತ್ತದೆ. ಅಂತಹ ಭೀತಿಯು ನಿರಾಧಾರವೆನ್ನಲಾಗುವದಿಲ್ಲ.

ಮೊದಲಿನ ರೀತಿಯ ಗ್ರಾಮಪಂಚಾಯತಗಳ ಪುನರುಜ್ಜೀವನವು ಒಮ್ಮಿಗೆಲೆ ಮೇಲಿನ ಕಾರಣಗಳಿಂದಾಗಿ ಅಸಾಧ್ಯವೆನಿಸಿದರೂ ಆ ತತ್ವವನ್ನನುಸರಿಸಿ ನ್ಯಾಯವ್ಯವಸ್ಥೆಯ ಸುಧಾರಣೆ ಸಾಧ್ಯವಿದೆ.

ಈ ವಿಷಯದಲ್ಲಿ ರಶ್ಯಾ ದೇಶದಲ್ಲಿ ಬೊಲ್ಶೆವಿಕ್ ಕ್ರಾಂತಿಯ ನಂತರ ಸ್ಥಾಪಿಸಲ್ಪಟ್ಟ "ಜನತಾ ನ್ಯಾಯಾಲಯ''ಗಳು ನಮಗೆ ಮಾರ್ಗದರ್ಶಕಗಳಾಗಬಹುದು. ಝಾರರ ಕಾಲದಲ್ಲಿ ರಶ್ಯಾ ದೇಶದಲ್ಲಿನ ನ್ಯಾಯವ್ಯವಸ್ಥೆಯು ನಮ್ಮ ಈಗಿನ ನ್ಯಾಯವ್ಯವಸ್ಥೆಯಂತೆಯೇ ಇತ್ತು. ಬೊಲ್ಶೆವಿಕ್ ಕ್ರಾಂತಿಯ ನಂತರ ಅಧಿಕಾರಕ್ಕೆ ಬಂದ ಕಮ್ಯುನಿಸ್ಟ ಸರಕಾರವು ಆ ಪದ್ಧತಿಯನ್ನು ರದ್ದುಗೊಳಿಸಿ "ಜನತಾ ನ್ಯಾಯಾಲಯ''ಗಳನ್ನು ಸ್ಥಾಪಿಸಿತು.

ಅಲ್ಲಿ ಆರು ಸಾವಿರ ಜನ ಸಂಖ್ಯೆಗೆ ಒಂದು ಜನತಾನ್ಯಾಯಾಲಯವಿದೆ. ಪ್ರತಿಯೊಂದು ನ್ಯಾಯಾಲಯದಲ್ಲಿ ಮೂವರು ಸದಸ್ಯರಿರುತ್ತಾರೆ. ಇಬ್ಬರನ್ನು ಅದರ ಅಧಿಕಾರ ಕ್ಷೇತ್ರದೊಳಗಿನ ಜನತೆ ತನ್ನೊಳಗಿನಿಂದ ಆರಿಸುತ್ತದೆ. ಮೂರನೆಯವನು ಸರಕಾರದಿಂದ ನೇಮಿಸಲ್ಪಟ್ಟ ಕಾಯದೆ ತಜ್ಞನಿರುತ್ತಾನೆ.

ದಿವಾಣಿ ಹಾಗೂ ಫೌಜದಾರಿ, ಎಲ್ಲಾ ಸ್ವರೂಪದ ವ್ಯವಹರಣೆಗಳನ್ನು ಈ ಜನತಾ ನ್ಯಾಯಾಲಯದವರು ಚೌಕಶಿ ಮಾಡುತ್ತಾರೆ. ಘೋರ ಸ್ವರೂಪದ ಪ್ರಕರಣಗಳು ಮಾತ್ರವೇ ಮೇಲಿನ ಕೋರ್ಟುಗಳಿಗೆ ಕಳಿಸಲ್ಪಡುತ್ತವೆ. ಅವುಗಳ ಸಂಬಂಧದಲ್ಲೂ ಪ್ರಾರಂಭದ ಚೌಕಶಿಯು ಈ ಜನತಾ ಕೋರ್ಟುಗಳಲ್ಲೇ ನಡೆಯುತ್ತದೆ.

ಈ ಜನತಾ ಕೋರ್ಟುಗಳಲ್ಲಿ ಚೌಕಶಿಯು ವಿಶೇಷ ವಿಧಿ, ನಿಯಮಗಳಿಂದ ಕುಂಠಿತವಾಗುವದಿಲ್ಲ. ಚೌಕಶಿಯ ನಿಯಮಗಳು ಸುಲಭವೂ ಸ್ವಲ್ಪವೂ ಇದ್ದು ಚೌಕಶಿಯು ಅನೌಪಚಾರಿಕ ರೀತಿಯಿಂದ ನಡೆಯುತ್ತದೆ. ಸತ್ಯ, ನ್ಯಾಯಗಳು, ನಮ್ಮ ಕೋರ್ಟುಗಳಲ್ಲಿ ಹಲವು ಸಾರೆ ಸಂಭವಿಸುವಂತೆ, ನಿಯಮಗಳಿಗೆ ಬಲಿಯಾಗುವದಿಲ್ಲ.

ಅನೌಪಚಾರಿಕ ರೀತಿಯ ಒಂದೆರಡು ಉದಾಹರಣೆಗಳನ್ನು ಕೊಡುವದಾದರೆ, ಒಬ್ಬ ಸಾಕ್ಷಿಗಾರನ ಜಬಾನಿ ತಕ್ಕೊಳ್ಳುವಾಗ, ಅವನು ಹೇಳುವದರ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ಅವನ ಜಬಾನಿಯಲ್ಲಿ ಉಲ್ಲೇಖಿಸಿದವರನ್ನು ಕರೆದು ಕೇಳಲು ಅವಕಾಶವಿದೆ. ಇಬ್ಬರನ್ನೂ ಎದುರೆದುರು ಮಾಡುವದರಿಂದ ಅವರ ಪರಸ್ಪರ ಚರ್ಚೆಯಲ್ಲಿ ಸತ್ಯವು ಸಹಜವಾಗಿ ಹೊರಬೀಳುತ್ತದೆ.

ಖಟ್ಲೆಗಳ ಚೌಕಶಿಯಲ್ಲಿ ಆರೋಪಿತನಿಗೆ ನಡುವೆಯೇ ಬಾಯಿಹಾಕಿ ಏನಾದರೂ ವಿವರಣೆಯನ್ನು ಕೊಡುವ ಪರವಾನಿಗೆ ಇದೆ. ಇದರಿಂದ, ಚೌಕ

ಶಿಯು ಎಷ್ಟೋ ಸುಗಮವಾಗುತ್ತದೆ. ಹಾಗೂ ಖರಾನೆಯನ್ನು ಕಡಿಮೆ ಮಾಡಲು ಸಾಧ್ಯವಾಗುತ್ತದೆ. ಆದರೆ, ನಮ್ಮಲ್ಲಿ ಆರೋಪಿತನ ಹೇಳಿಕೆಯನ್ನು ಕೊನೆಯ ವರೆಗೆ ತಕ್ಕೊಳ್ಳುವದಿಲ್ಲ. ನಡುವೆ ಅವನು ಏನಾದರೂ ಹೇಳಲು ಹೊರಟರೆ, ಅಸಭ್ಯವರ್ತನೆಯ ಬಗ್ಗೆ ಅವನನ್ನು ಎಚ್ಚರಿಸೋಣಾಗುವದು.

ನಮ್ಮ ಕೋರ್ಟುಗಳ ವಿಷಯದಲ್ಲಿ ಸಾಧಾರಣ ಮನುಷ್ಯನಿಗೆ ಆತ್ಮೀಯತೆ ಹುಟ್ಟುವದಿಲ್ಲ, ಯಾಕಂದರೆ ಅಲ್ಲಿನ ಶಿಸ್ತು, ನಿಯಮ, ಕಾಯದೆ ಎಲ್ಲವೂ ಅವನಿಗೆ ಬಗೆಹರಿಯದಂಥವು. ದಾವೆಯನ್ನು ಹೇಗೆ ಕೋರ್ಟ ಮುಂದೆ ತರಬೇಕೆಂಬುದರ ಬಗ್ಗೆ ಅವನಿಗೆ ಕೋರ್ಟನಿಂದ ಯಾವದೇ ಸಹಾಯ ಸಿಗುವಹಾಗಿಲ್ಲ. ಹೆಜ್ಜೆಹೆಜ್ಜೆಗೂ ವಕೀಲರ ಸಹಾಯವಿಲ್ಲದೆ ಅವನು ಏನನ್ನು ಮಾಡಲೂ ಅಸಮರ್ಥನು.

ಆದರೆ, ರಶ್ಯದ ಜನತಾ ಕೋರ್ಟುಗಳಲ್ಲಿ ಆ ಪರಿಸ್ಥಿತಿ ಇಲ್ಲ. ಚೌಕಶಿಯು ಅನೌಪಚಾರಿಕವಾಗಿ ಹಾಗೂ ವಿವಾದ ಹುಟ್ಟಿದ ಅಥವಾ ಅಪರಾಧ ನಡೆದ ಸ್ಥಳದ ಸಮೀಪವೇ ನಡೆಯುವದರಿಂದ, ನ್ಯಾಯಾಲಯದ ಕಾರ್ಯಕಲಾಪಗಳ ವಿಷಯದಲ್ಲಿ ಆತ್ಮೀಯತೆ ಹುಟ್ಟುತ್ತದೆ. ಅದೂ ಅಲ್ಲದೆ, ನ್ಯಾಯಾಧೀಶರ ಪೈಕಿ ಇಬ್ಬರು ಸ್ಥಳಿಕರೇ ಇದ್ದುದರಿಂದ ಸರಿಯಾದ ನಿರ್ಣಯಕ್ಕೆ ಬರುವದರಲ್ಲಿ ಜನತೆಯ ಸಹಕಾರವೂ ಸಿಗುತ್ತದೆ. ಇದರಿಂದ ಯೋಗ್ಯ ನಿರ್ಣಯಕ್ಕೆ ಬರಲು ಅನುಕೂಲವಾಗುವದಲ್ಲದೆ, ವಿಳಂಬವೂ ಹತ್ತುವದಿಲ್ಲ.

‡ ‡ ‡

ನಮ್ಮ ನ್ಯಾಯವ್ಯವಸ್ಥೆಯಲ್ಲಿನ ಇನ್ನೊಂದು ದೋಷವೆಂದರೆ ನಮ್ಮಲ್ಲಿನ ಅಪರಾಧಗಳ ಶಾಸನ ಪದ್ಧತಿ. ನಮ್ಮಲ್ಲಿ ಅಪರಾಧಗಳ ಸ್ವರೂಪವನ್ನು ಮಾತ್ರವೇ ನೋಡಿ ಶಾಸನ ಮಾಡುವ ರೂಢಿ.

ಆದರೆ ಅಪರಾಧ ಒಂದೇ ಆದರೂ ಅದರ ಹಿಂದಿನ ಪ್ರೇರಣೆಗಳು ಹಲವು ವಿಧವಿರಬಹುದು. ಕೆಲವರು ಅಪರಾಧ ಮಾಡುವ ಉದ್ದೇಶದಿಂದಲೇ ಸ್ವಾರ್ಥಪ್ರೇರಿತರಾಗಿ ಅಂತಹ ಕೃತ್ಯಗಳನ್ನು ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಅಪರಾಧೀ ಮನೋವೃತ್ತಿ ಇಲ್ಲದವನು ಕೂಡ ಪರಿಸ್ಥಿತಿಯ ಒತ್ತಡದಿಂದ ಅಂತಹ ಕೃತ್ಯ ಮಾಡುತ್ತಾನೆ. ಉದಾಹರಣೆಗಾಗಿ ಉಪವಾಸವಿರುವ ಹೆಂಡತಿ ಮಕ್ಕಳಿಗೆ ಅನ್ನ ಕೊಡುವದಕ್ಕಾಗಿ ನಿರುದ್ಯೋಗಿ ಮನುಷ್ಯನು ಕಳವು ಮಾಡಲು ಉದ್ಯುಕ್ತನಾಗಬಹುದು.

ಇತ್ತೀಚೆಗಿನ ಮಾನಸಶಾಸ್ತ್ರಜ್ಞರ ಶೋಧದಂತೆ ಕೆಲವರಿಗೆ ಅಪರಾಧ ಮಾಡುವ ಒಂದು ಮನೋರೋಗವೇ ಇರುತ್ತದೆ.

ಈ ಮೂರೂ ತರಗತಿಯ ಅಪರಾಧಿಗಳಿಗೆ ಅಪರಾಧದ ಸ್ವರೂಪವನ್ನಷ್ಟೇ ನೋಡಿ ಒಂದೇ ಶಿಕ್ಷೆಯನ್ನು ಕೊಡುವದು ಸರಿಯಾಗಲಾರದು. ಅದರಿಂದ ಆ ವ್ಯಕ್ತಿಗಳಿಗೆ ಅನ್ಯಾಯವಾಗುವದಷ್ಟೇ ಅಲ್ಲ, ಅಪರಾಧಗಳು ಕಡಿಮೆಯಾಗುವದಿಲ್ಲ. ಮೇಲೆ ಹೇಳಿದ ಮೂರು ವರ್ಗದ ಅಪರಾಧಿಗಳಲ್ಲಿ ಮೊದಲನೆಯವನನ್ನು ಶಾಸನಕ್ಕೆ ಗುರಿ ಮಾಡಬೇಕು. ಎರಡನೆಯವನಿಗೆ ಹೊಟ್ಟೆಯ ಉದ್ಯೋಗ ಒದಗಿಸಿಕೊಡಬೇಕು. ಮೂರನೆಯವನನ್ನು ಚಿಕಿತ್ಸಾಲಯಕ್ಕೆ ಕಳಿಸಬೇಕು.

ರಶ್ಯದಲ್ಲಿ ಅಪರಾಧಿಯನ್ನು ಶಿಕ್ಷಿಸುವ ಮೊದಲು ಅವನ ಹಿಂದಿನ ಜೀವನ, ಹಾಗೂ ಅಪರಾಧ ಮಾಡುವ ಕಾಲದಲ್ಲಿನ ಅವನ ಮಾನಸಿಕ ಹಾಗೂ ಆರ್ಥಿಕ ಪರಿಸ್ಥಿತಿ ಇವುಗಳ ಕುರಿತು ವಿವರವಾದ ವರದಿಯನ್ನು ತರಿಸಿಕೊಂಡು ಅದನ್ನು ಪರಿಶೀಲಿಸಿಯೇ ಅವನಿಗೆ ಯಾವ ಶಾಸನ ಮಾಡಬೇಕೆಂದು ನಿರ್ಣಯಿಸುತ್ತಾರೆ.

ನಮ್ಮಲ್ಲಿ ಅಂತಹ ಯಾವದೇ ವ್ಯವಸ್ಥೆ ಇಲ್ಲದೆ ಬರೇ ಯಾಂತ್ರಿಕವಾಗಿ ಜೈಲಿಗೆ ಕಳಿಸುವದೊಂದೇ ಶಾಸನಪದ್ಧತಿ ಇದೆ. ಅದನ್ನುಳಿದು ಬೇರೆ ಶಾಸನವೆಂದರೆ ದ್ರವ್ಯದಂಡ. ನಮ್ಮ ಈಗಿನ ಜೈಲುಗಳಲ್ಲಿ ಅಪರಾಧಿಯ ನೈತಿಕ ಸುಧಾರಣೆಯಂತೂ ಆಗುವದೇ ಇಲ್ಲ. ಜೈಲುವಾಸದ ಅಂಜಿಕೆಯೂ ಹುಟ್ಟುವದಿಲ್ಲ. ಇದರಿಂದ, ಅಪರಾಧಗಳಿಗೆ ಶಾಸನ ಮಾಡುವ ಮೂಲ ಉದ್ದೇಶವೇ ಮೂಲೆಪಾಲಾಗಿದೆ.

ಅಪರಾಧಗಳು ಕಡಿಮೆಯಾಗಬೇಕಾದರೆ, ಮೇಲೆ ಹೇಳಿದ ರೀತಿಯಲ್ಲಿ ಅಪರಾಧಿಗಳನ್ನು ವರ್ಗೀಕರಿಸಿ ನಿಜವಾಗಿ ಶಿಕ್ಷೆಗೆ ಪಾತ್ರರಾದವರಿಗೆ ಅವರಿಗೂ ಇತರರಿಗೂ ಭೀತಿ ಹುಟ್ಟುವ ಶಿಕ್ಷೆಯನ್ನು ಕೊಡಬೇಕು. ಶಿಕ್ಷೆಯ ದೃಷ್ಟಿಯಿಂದ ಈಗಿನ ಜೈಲುಗಳು ಯಶಸ್ವಿಯಾಗಿಲ್ಲ.

ಶಿಕ್ಷೆಯು ಪರಿಣಾಮಕಾರಿಯಾಗಬೇಕಾದರೆ ಅದು ಅಸಹನೀಯವಿರಬೇಕು ಹಾಗೂ ಅದರ ಕಾಲಾವಧಿಯು ದೀರ್ಘವಿರಬಾರದು. ದೀರ್ಘಕಾಲದ ಶಿಕ್ಷೆಯು ಅತಿ ಘೋರ ಅಪರಾಧಗಳಿಗೆ ಅವಶ್ಯವಿದ್ದರೂ ಅಪರಾಧಿಗಳ ವಿಷಯದಲ್ಲಿ ಅದು ಪರಿಣಾಮಕಾರಿಯಾಗುವದಿಲ್ಲ. ಯಾಕಂದರೆ, ದೀರ್ಘಕಾಲದ ಶಿಕ್ಷೆಯಲ್ಲಿ ಸಹನಾಶಕ್ತಿ ಬೆಳೆದು ತಾವು ಶಿಕ್ಷೆಯನ್ನನುಭವಿಸುತ್ತೇವೆಂಬುದನ್ನು ಅವರು ಸಾಧಾರಣವಾಗಿ ಮರೆಯುತ್ತಾರೆ.

ಈ ಎಲ್ಲ ದೃಷ್ಟಿಗಳಿಂದ, ನಮ್ಮ ಶಾಸನ ಪದ್ಧತಿಯಲ್ಲಿ ಸುಧಾರಣೆ ಅವಶ್ಯವಿದೆ. ರಸಿಯದ ಕಮ್ಯೂನಿಸ್ಟ ತತ್ವವು ನಮಗೆ ಮಾನ್ಯವಿಲ್ಲದಿದ್ದರೂ ಅಲ್ಲಿನ ನ್ಯಾಯವ್ಯವಸ್ಥೆಯನ್ನು ನಮ್ಮ ಪರಿಸ್ಥಿತಿಗೆ ಅನುರೂಪವಾದ ಬದಲಾವಣೆಗಳಿಂದ ನಮ್ಮ ನಾಡಿನಲ್ಲಿ ಆಚರಣೆಯಲ್ಲಿ ತರುವದು ಸೂಕ್ತವಾದೀತು.

ಅಲ್ಲಿನ ಜನತಾ ಕೋರ್ಟುಗಳಲ್ಲಿ ನಮ್ಮ ಹಿಂದಿನ ಗ್ರಾಮಪಂಚಾಯತಗಳ ಉತ್ತಮ ಲಕ್ಷಣಗಳನ್ನು ಕಾಣಬಹುದು. ಹಾಗೂ ಒಬ್ಬ ಸದಸ್ಯನು ಸರಕಾರದಿಂದ ನೇಮಿಸಲ್ಪಟ್ಟವನೂ ಕಾಯದೆತಜ್ಞನೂ ಇರುವದರಿಂದ, ಇತರ ಸದಸ್ಯರ ಕಾಯದೆಯ ಅಜ್ಞಾನ ಅಥವಾ ಯಾವದೇ ಪಕ್ಷಕಾರನ ಕಡೆಗಿರಬಹುದಾದ ಪಕ್ಷಪಾತದಿಂದ ಸಂಭವಿಸಬಹುದಾದ ಅನ್ಯಾಯವನ್ನು ಅವನು ತಡೆಗಟ್ಟಲು ಅವಕಾಶವಿದೆ.

ಇಂತಹ ಕೋರ್ಟುಗಳಿಂದ ಸರಕಾರದ ಉತ್ಪನ್ನ ಕಡಿಮೆಯಾಗಬಹುದು, ವಕೀಲರ ಚಾತುರ್ಯ ಪ್ರದರ್ಶನಕ್ಕೆ ಸಿಗುವ ಅವಕಾಶ ಕುಂಠಿತವಾಗಬಹುದು, ಸಾಕ್ಷಿಯೇ ಉಪಜೀವನವಾಗಿರುವವರ ಉದ್ಯೋಗ ನಷ್ಟವಾಗಬಹುದು. ಆದರೆ, ನಾಗರಿಕನ ಜನ್ಮಸಿದ್ಧ ಹಕ್ಕಾಗಿರುವ ನ್ಯಾಯದಾನವು ಈಗಿನಂತೆ ವಿಕ್ರಯದ ಸ್ವತ್ತಾಗಿರುವ ಬದಲು ನಿಜವಾದ ನ್ಯಾಯದಾನವಾಗುವದು.

# ಮಧ್ಯಮ ವರ್ಗದಲ್ಲಿ ಪ್ರಣಯ ಸಂಬಂಧದ ಸಮಸ್ಯೆ

**ಆಧುನಿಕ ನಾಗರಿಕತೆಯು ಪ್ರವಾಹವು ಸಂಪ್ರದಾಯದೊಡನೆ ತಾಕಲಾಡುವಾಗ ಮಧ್ಯಮ ವರ್ಗದಲ್ಲಿ ತಲೆಯೆತ್ತುವ ಸಮಸ್ಯೆಗಳಲ್ಲಿ ಪ್ರೇಮಸಂಬಂಧದ್ದೂ ಒಂದು. ಇತರ ವರ್ಗಗಳಲ್ಲಿ ಇಂಥ ಪ್ರಸಂಗಗಳ ಆಘಾತವನ್ನು 'ಹೀರಿಕೊಂಡು' ಮುಂದುವರಿಯಲು ತಕ್ಕ ಸ್ಥಿತಿಸ್ಥಾಪಕ ನಿಯಮಗಳಿವೆ. ಆದರೆ ಭಗ್ನಪ್ರಣಯವು ಮಧ್ಯಮ ವರ್ಗದಲ್ಲಿ ಶಾಶ್ವತ ಯಾತನೆಯಾಗುವದುಂಟು. ಇದಕ್ಕೆ ಪರಿಹಾರ ಕಲ್ಪಿಸುವುದು ಸಮಾಜದ ಕೆಲಸ. . . . . .**

ಲೇಖಕರು : ಶ್ರೀ ಶ್ರೀನಿವಾಸ ಹಾವನೂರ, ಎಂ. ಎ.

ಇಂದಿನ ಸಾಮಾಜಿಕ ಕಾದಂಬರಿಗಳಲ್ಲಿ ಕಂಡುಬರುವ ಮುಖ್ಯ ವಸ್ತುವೆಂದರೆ ಗಂಡು ಹೆಣ್ಣಿನ ಪ್ರೇಮವಾಗಿದೆ. ಬೇಕಿದ್ದರೆ ಕನ್ನಡದಲ್ಲಿ ಈಚೆಗೆ ಪ್ರಕಟವಾಗುತಲಿರುವ ಕೈಹೊತ್ತಗೆಯ ಯಾವದೇ ಸಾಮಾಜಿಕ ಕಾದಂಬರಿಯನ್ನು ಕೈಗೆತ್ತಿಕೊಂಡರೆ, (ತೀರ ಕೆಲವನ್ನು ಬಿಟ್ಟು) ಪ್ರೇಮಸಂಬಂಧವೇ ಅದರ ವಸ್ತುವಾಗಿರುತ್ತದೆ. ಅದು ಸ್ವಾಗತಾರ್ಹವೋ ತ್ಯಾಜ್ಯವೋ ಎಂಬ ಮಾತಿರಲಿ, ಇಂಥ ವಸ್ತುವಿನ ಆಯ್ಕೆಗಿರುವ ಕಾರಣಗಳು ಎರಡು. ಒಂದು ದೀರ್ಘಕಾಲಿಕ ಮತ್ತು ತಾತ್ವಿಕ ಕಾರಣವೇನೆಂದರೆ, ಗಂಡು ಹೆಣ್ಣಿನ ಆಕರ್ಷಣೆ ಪ್ರಕೃತಿಯಷ್ಟೇ ಹಳೆಯದಾಗಿದ್ದು, ಅದರಷ್ಟೇ ಸಹಜಸಿದ್ಧವಾಗಿದೆ. ಇತರ ಯಾವದೇ ಸಮಸ್ಯೆ ಅಥವಾ ವಸ್ತುಗಿಂತ ಇದು ಬಲು ಬೇಗ ಓದುಗನ ಮನಸ್ಸನ್ನು ಸೆರೆಹಿಡಿಯುತ್ತದೆ. ಎರಡನೆಯದಾಗಿ,- ಇದು ತತ್ ಕ್ಷಣದ ಕಾರಣ- ಶಾಲೆ ಕಾಲೇಜುಗಳಲ್ಲಿಯ ಸಂಪರ್ಕದಿಂದಲೋ ಇನ್ನಾವುದೇ ಪರಿಸ್ಥಿತಿಯಿಂದಲೋ ಹುಡುಗ ಹುಡುಗಿಯರು ಪ್ರೇಮ ಮಾಡುವುದು ಹೆಚ್ಚೆಚ್ಚಾಗಿ ಕಂಡು ಬರುತ್ತಲಿದೆ. ಅದೊಂದು ಸಾಂಸರ್ಗಿಕವಾಗಿ ಸಮಾಜದಲ್ಲಿ ಹರಡಿಕೊಳ್ಳುವ ಅಂಶವಾಗುತ್ತ ನಡೆದಿದೆ.

ಪ್ರೇಮವು ವಿಶ್ವಶಕ್ತಿಗಳಲ್ಲೊಂದು ಎಂದು ಹೇಳುವುದುಂಟು. ಅದು ಅನಾದಿ ಕಾಲದಿಂದ ಇದೆ, ಮತ್ತು ಅನಂತವಾಗಿದೆ. ಅಷ್ಟೊಂದು ದೊಡ್ಡ ಭೂಮಿಕೆಯಲ್ಲಿ ಪ್ರೇಮವಿವೇಚನೆ ಇಲ್ಲಿ ಪ್ರಸಕ್ತವಾದುದಲ್ಲ. ಆದರೆ ವಯಸ್ಸಿಗೆ ಬಂದ ಗಂಡು, ಹೆಣ್ಣು ಒಂದನ್ನೊಂದು ಮೋಹಿಸುವ ಸ್ವರೂಪದ ಪ್ರೇಮವೇ ಈ ಲೇಖದ ವಸ್ತುವಾಗಿದೆ.

ಶಾಸ್ತ್ರೀಯವಾಗಿ ಇಂದು ಪ್ರೇಮವೆಂದರೇನೆಂಬುದನ್ನು ನೋಡುವದಾದರೆ, ಯಾವ ಒಂದು ಉಲ್ಲಾಸದಲ್ಲಿ ಲೈಂಗಿಕ ಕಾಮನೆ ಮೂಲವಾಗಿದ್ದು, ಅನ್ಯ ವ್ಯಕ್ತಿಯು ವ್ಯಕ್ತಿತ್ವದಲ್ಲಿ ತನ್ನ ಭಾವನೆ ಹಾಗೂ ಮನಸ್ಸನ್ನು ತಾದಾತ್ಮ್ಯಗೊಳಿಸಲಾಗುವುದೋ ಅದೇ ಪ್ರೇಮವೆಂದು ಹೇಳಬೇಕಾಗುತ್ತದೆ. ಪ್ರೇಮದ ತಳದಲ್ಲಿ ಕಾಮ ಸೂಕ್ಷ್ಮಶರೀರಿಯಾಗಿಯಾದರೂ ಇದ್ದೇ ತೀರಬೇಕು. ಮನಸ್ಸು ಮತ್ತು ಹೃದಯಗಳು ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ತಾದಾತ್ಮಕ್ಕಾಗಿ ಹರಿದಷ್ಟು ಪ್ರೇಮಕ್ಕೆ ಆಧ್ಯಾತ್ಮಿಕ ಸ್ವರೂಪ ಬರುತ್ತದೆ. ಈ ಆಧ್ಯಾತ್ಮಿಕತೆಯ ಮೇಲೆ, ಪ್ರೇಮದ ಉಚ್ಚ, ನೀಚತೆಗಳನ್ನು ಹೇಳಬಹುದು. ಆದರೆ, ಇಂಥ ಉದಾತ್ತ ಮತ್ತು ಉಚ್ಚ ಮಟ್ಟದ ಪ್ರೇಮ ಮಾಡುವವರು ಎಷ್ಟು ಮಂದಿ ಹೊರಡುತ್ತಾರೆ, ಹತ್ತು ಸಾವಿರಕ್ಕೊಬ್ಬರಾದರೆ ಹೆಚ್ಚು. ಇದರಿಂದ ಹೊರಪಡುವ ಮಾತೆಂದರೆ ಜನಸಾಮಾನ್ಯದಲ್ಲಿ ಕಂಡುಬರುವ ಪ್ರೇಮವು 'ಸಕಾಮ ಪ್ರೇಮ'ವಾಗಿರುತ್ತದೆ. ದೈಹಿಕ ಸಂಬಂಧದ ಆಕರ್ಷಣೆ ಇಲ್ಲದೆಯೇ ಪ್ರೇಮವೆಂಬುದಿಲ್ಲ. ಇಂಥವರಲ್ಲಿ ಆಧ್ಯಾತ್ಮಿಕ ಅಂಶ ಇರುವದಿಲ್ಲ ಅಥವಾ ತೀರ ಕಡಿಮೆ ಇರುತ್ತದೆ ಎಂದೇನೂ ನಮ್ಮ ಹಟವಲ್ಲ. ಆದರೆ ಈ ಆಧ್ಯಾತ್ಮಿಕ ಅಂಶ ಹುಟ್ಟಿ ಬಂದಿರುವುದೂ ದೈಹಿಕ ಸಂಬಂಧದ ಆಕರ್ಷಣೆಯ ಸತ್ವದಿಂದಲೇ.

ಹೀಗೆ ಸಾಮಾಜಿಕವಾಗಿ ಪ್ರೇಮಕ್ಕೆ 'ಸಕಾಮ ಪ್ರೇಮ' ವೆಂಬ ಅರ್ಥವಿದೆ. ಇಂಥ ಪ್ರೇಮದ ಕಾರಣ ಪರಿಣಾಮಗಳೇ ಈ ಲೇಖನಕ್ಕೆ ಸಾಮಗ್ರಿಯಾಗಿವೆ. ಈ ಬಗೆಯ ಪ್ರೇಮ ದಂಪತಿಗಳಲ್ಲಿರುವುದು ಸಹಜ. ಅದರಲ್ಲಿ ಅವರು ಸತಿಪತಿಗಳೆಂಬ ಮಾತು ಹೆಚ್ಚು ಬಲವತ್ತರವಾದುದರಿಂದ ಅಂಥ ಪ್ರೇಮವನ್ನು ಇಲ್ಲಿ ಗಮನಿಸುವುದು ಬೇಡ. ಇವೆಲ್ಲ ದಾಂಪತ್ಯವರ್ತುಲದಲ್ಲಿರುವಾಗ ಅತೃಪ್ತಗೊಂಡ ಗಂಡು ಅಥವಾ ಹೆಣ್ಣು ಬೇರೊಂದೆಡೆಗೆ ತನ್ನ ಪ್ರೇಮವನ್ನು ಚಾಚಬಹುದು. ಅಂಥವುಗಳ ಸಂಖ್ಯೆ ಕಡಿಮೆಯಾದುದರಿಂದ ಅವನ್ನೂ ಸದ್ಯಃ ಬಿಡೋಣ. ವಿವಾಹಪೂರ್ವದಲ್ಲಿ ಈ ಪ್ರೇಮವು ಗಂಡು ಹೆಣ್ಣಿನಲ್ಲಿ ಹೊಗುವ ಬಗೆಯನ್ನು ಇಲ್ಲಿ ಪ್ರಸ್ತುತಗೊಳಿಸಿಕೊಳ್ಳಲಾಗಿದೆ. ಇದು ವಿಶೇಷತಃ ಕಂಡು ಬರುವುದು ಸು-ಶಿಕ್ಷಿತ ಮಧ್ಯಮ ವರ್ಗದ ಕುಟುಂಬಗಳಲ್ಲಿ. ಶಾಲೆ ಕಾಲೇಜುಗಳ ಶಿಕ್ಷಣದಂತೆ ಆ ವರ್ಗದವರ ಜೀವನದಲ್ಲಿ ಇದೂ ಒಂದು ನಡೆಯಬೇಕಾದ ಸಂಗತಿಯೇ ಎನ್ನುವಷ್ಟು ವಿಪುಲವಾಗಿ ವಿವಾಹಪೂರ್ವದ ಪ್ರೇಮ ಇಂದಿನ ಯುವತಿ ಮತ್ತು ಯುವಕರಲ್ಲಿ ಕಂಡುಬರುತ್ತಲಿದೆ. ಸಹಶಿಕ್ಷಣವಿರುವ ಮಾಧ್ಯಮಿಕ ಶಾಲೆಗಳಲ್ಲಿ ಅರ್ಧದಷ್ಟು ಹುಡುಗಿಯರು ಮಾನಸಿಕ ಮಟ್ಟದಿಂದ ಹಿಡಿದು ದೈಹಿಕ ಮಟ್ಟದ ವರೆಗೆ ಪ್ರೇಮಬಂಧಿತರಾದವರು ಹೊರಡಬಹುದು. ಅದರಂತೆ ಕಾಲೇಜಿನಲ್ಲಿ ಇಂಥ ಪ್ರೇಮಿನಿಯರು ೨/೩ ದಷ್ಟು ದೊರೆತಾರು.

ವಿವಾಹಪೂರ್ವದಲ್ಲಿ ಗಂಡು ಹೆಣ್ಣು ಹೀಗೆ ಪ್ರೇಮಿಸಿ ಸುಸೂತ್ರ ಮದುವೆ ಮಾಡಿಕೊಳ್ಳುತಿದ್ದರೆ ಪ್ರಶ್ನೆಯೇ ಇರುತ್ತಿರಲಿಲ್ಲ. ಹೆಚ್ಚಿನ ಪ್ರೇಮ ಸಂಬಂಧಗಳು ವಿವಾಹದಲ್ಲಿ ಪರ್ಯವಸಾನವಾಗುವುದೇ ಇಲ್ಲ. ಯೌವನ ವಯಸ್ಸಿನಲ್ಲಿ ಪ್ರೇಮ ಕೂಡುವದು ತಪ್ಪಿದ್ದಲ್ಲ ! ಹೀಗಾಗಿ ಇದೊಂದು ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ. ಪ್ರೇಮ ಭಂಗದಿಂದ ಯುವಕನಿಗೆ ವಿಶೇಷ ತೊಂದರೆಯಿಲ್ಲ. ಏಕೆಂದರೆ ಆ ಗಲಾಟೆಯಿಂದ, ಅವನೊಬ್ಬ ವರನಿದ್ದಾನೆ ಎಂಬ ಮಾತು ಬೇರೆ ಕನ್ಯಾಪಿತೃಗಳ ಗಮನಕ್ಕೆ ಬಹಿರಂಗವಾಗಿಬಿಡುತ್ತದೆ !

ಹುಡುಗಿಗೆ ಮಾತ್ರ ಹಾಗಲ್ಲ. ಪ್ರೇಮ ಸಂಬಂಧ ಕಡಿದು ಬಿತ್ತೆಂದರೆ ಆ ಕಾರಣದಿಂದ ಅವಳ ಮದುವೆ ಮುಂದೆ ಹೋಗುತ್ತದೆ. ಆಕೆ ಪ್ರೇಮ ಭಂಗದಿಂದ ಸ್ವಂತಕ್ಕೂ ಅಪಾಯಕ್ಕೊಳಗಾಗುತ್ತಾಳೆ. ತಂದೆ ತಾಯಿಗಳಿಗೂ ಗಂಭೀರ ಸಮಸೆಯಾಗಿ ಉಳಿಯುತ್ತಾಳೆ. ವಿವಾಹ ಪೂರ್ವದಲ್ಲಿ ಪ್ರೇಮ ಮಾಡಿ ಮುರುಗಡೆಯಾದಾಗ ಆತ್ಮಹತ್ಯೆ ಮಾಡಿಕೊಂಡವರಿದ್ದಾರೆ, ಸ್ತ್ರೀ ಸಹಜವಾದ ಮನೋವ್ಯಾಕುಲಕ್ಕೊಳಗಾದವರಿದ್ದಾರೆ, ದೈಹಿಕ ಸಂಬಂಧವನ್ನೂ ಬೆಳೆಸಿಕೊಂಡು ಗರ್ಭಿಣಿಯಾದಾಗ ಮಾನಮರ್ಯಾದೆಗೆ ಹೆದರಿ ಆತ್ಮಹತ್ಯೆ ಮಾಡಿಕೊಂಡವರಿದ್ದಾರೆ, ಬೇರೊಂದೆಡೆಗೆ ಲಗ್ನವಾಗಿ ಹಳೆಯ ಪ್ರೇಮ ಸಂಬಂಧ ಬೆಳಕಿಗೆ ಬಂದು, ನಿತ್ಯ ಸಂಸಾರದಲ್ಲಿ ಒದ್ದಾಡಿದವರಿದ್ದಾರೆ. ಪ್ರೇಮಿಸಿದ ತಪ್ಪಿಗೆ ಬಡವ ಹಾಗೂ ಸ್ವಾರ್ಥಸಾಧಕನನ್ನು ಮದುವೆಯಾಗಿ ವೇದನೆಯನ್ನು ಸಹಿಸಿಕೊಂಡವರಿದ್ದಾರೆ. ಯುವಕನ ಕಡೆಯ ಜನ ಸಮ್ಮತಿಯನ್ನು ಕೊಡದೆ ಅವನ ಭವಿಷ್ಯವನ್ನೇ ಹಾಳುಮಾಡಲು ನಿಂತಾಗ ನಾನೇಕೆ ಅಡ್ಡಬರಲಿ ಎಂಬ ಉದಾತ್ತ ಹಾಗೂ ತ್ಯಾಗಭಾವದಿಂದ ಪ್ರೇರಿತರಾಗಿ ತಾವಾಗಿ

ಮುರುಗಡೆ ಮಾಡಿಕೊಂಡವರಿದ್ದಾರೆ. ಇಂತಹ ಇನ್ನೂ ಅನೇಕ ಅನಿಷ್ಟ ಫಲಶ್ರುತಿಗಳನ್ನು ಹೇಳಬಹುದು.

ಸಮಾಜದಲ್ಲಿಯ ಅವಹೇಳನೆಯು ಅವಳ ಪಾಲಿಗಲ್ಲದೆ, ಅವಳ ಹಿರಿಯರಿಗೂ ಬರುತ್ತದೆ. ಜೊತೆಗೆ ಮನೆ ಹಿಡಿದು ಕೂತ, ಮದುವೆಯ ಪರೀಕ್ಷೆಯಲ್ಲಿ ಕಾಯಂ 'ಡಿಬಾರ್' ಆದ ಮಗಳು ಅವರಿಗೆ ತಲೆಶೂಲಿಯಾಗಿ ಉಳಿಯುತ್ತಾಳೆ. ಯೋಗ್ಯ ವಯಸ್ಸಿಗೆ ಯೋಗ್ಯ ಖಟಪಿಟಪಟ್ಟು ತಾವು ಮದುವೆ ಮಾಡದೆ ಅವಳಿಗೆ ಶಿಕ್ಷಣ ಕೊಡುತ್ತ, ಇಲ್ಲವೆ, ಮನೆಗೆಲಸಕ್ಕೆ ಉಪಯೋಗಿಸುತ್ತ ಅಲಕ್ಷ್ಯ ಮಾಡಿ ತಪ್ಪುಗಾರರಾಗಿರುತ್ತೇವೆ ಎಂಬ ಕಲ್ಪನೆ ಅವರಿಗೆ ಬರುವದಿಲ್ಲ.

* * *

ಹೀಗಾಗಿ ಬಟ್ಟೇ ಹಿರಿಯರಲ್ಲಿ ಪ್ರೇಮ ಸಂಬಂಧವೆಂದರೆ ತಾತ್ಸಾರವಿದೆ. ಅಲ್ಲದೆ, ಪ್ರೇಮ ಮಾಡಿ ಮದುವೆಯಾದವರ ದಾಂಪತ್ಯ ಇತರರ ದಾಂಪತ್ಯಕ್ಕಿಂತ ಏನೂ ಭಿನ್ನವಾಗಿ ಕಾಣುವುದಿಲ್ಲ, ಅದಕ್ಕೆ ಬದಲಾಗಿ ಜಗಳಗಳೇ ಹೆಚ್ಚಾಗಿ ಕಂಡು ಬಂದು, ಸಾಮರಸ್ಯವಿಲ್ಲವೆನಿಸಬಹುದು. ಜೊತೆಗೆ ಪ್ರೇಮಸಂಬಂಧ ಬೆಳಸಿಕೊಂಡವರು ಪರಿಸ್ಥಿತಿಗೆ ಎದುರಾಗಿ ನಿಂತು, ಗಟ್ಟಿಗತನವನ್ನು ತೋರದಿರುವುದರಿಂದಲೂ ಹಿರಿಯರಲ್ಲಿ ಪ್ರೇಮಸಂಬಂಧದ ಬಗ್ಗೆ ತಾತ್ಸಾರವಿರುತ್ತದೆ. ಇದು ನಮ್ಮ ಸುಶಿಕ್ಷಿತ ಮಧ್ಯಮ ವರ್ಗದಲ್ಲಿ ಕಂಡುಬರುವ ಸತ್ಯ ಮತ್ತು ಸಾಮಾನ್ಯ ಸ್ಥಿತಿ. ಹಾಗೂ ಪ್ರೇಮಸಂಬಂಧದ ಪ್ರತಿಕ್ರಿಯೆ ಇಂಥದು: ಈ ಸುಳಿಯಲ್ಲಿ ಸಿಕ್ಕು ಹೆಚ್ಚಾಗಿ ಒದ್ದಾಡುವವಳೆಂದರೆ ಕುಮಾರಿಕೆ. ಹೀಗೆ ಆಗುವ ಕಾರಣವನ್ನು ಮತ್ತು ಇದಕ್ಕೆ ಆಕೆ ಸ್ವಯಂ ಎಷ್ಟರ ಮಟ್ಟಿಗೆ ಕಾರಣಳು ಎಂಬುದನ್ನು ನೋಡುವ.

ಸಾಮಾನ್ಯ ಯುವಕನು ಬಲುಬೇಗ ಇಂಥ ಪ್ರೇಮಸಂಬಂಧವನ್ನು ಮಾಡುವ ಮನಸ್ಸಿದ್ಧತೆಯನ್ನು ಹೊಂದಿರುತ್ತಾನೆ. ಸಾಮಾನ್ಯ ಹುಡಿಗೆ ತಾನಾಗಿ ಅದರಲ್ಲಿ ಬೀಳುವುದೆಂಬುದಿಲ್ಲ; ಅದಕ್ಕೆ ಉದ್ದೀಪನ ಬೇಕು. ಮತ್ತು ಪ್ರೇಮ ಸಂಬಂಧದಲ್ಲಿ, ಪ್ರೇಮದ ಉಪಭೋಗವಾಯಿತೆಂದಾಗಲಿ, ಇನ್ನೊಂದೆಡೆಗೆ ಹರಿಸಲು ಸಾಧ್ಯವಿದೆಯೆಂದು ಕಂಡುಬಂದರಾಗಲಿ, ಅಷ್ಟೇ ಬೇಗ ಯುವಕನ ಪ್ರೇಮದ ಭರ ಇಳಿಯುವದು ಸಾಧ್ಯವಿದೆ. ಹುಡುಗಿಗೆ ಮಾತ್ರ ಹಾಗೆ ಸಾಧ್ಯವಿಲ್ಲ. ಇದೇ ಕಾರಣದಿಂದ ಪ್ರೇಮಸಂಬಂಧವು ಹುಡುಗಿಯ ಜೀವನದ ಮೇಲೆ ಹೆಚ್ಚಿನ ಅನಿಷ್ಟ ಪರಿಣಾಮ ಮಾಡಬಲ್ಲುದು. ಯುವಕರಿಗೆ ಅಷ್ಟರಮಟ್ಟಿಗೆ ಅಲ್ಲ.

ಪ್ರೇಮಭಾವನೆ ಉತ್ಪನ್ನವಾಗುವದಕ್ಕೆ ನೈಸರ್ಗಿಕವಾಗಿರುವ ಆಕರ್ಷಣೆಯೇ ಮೂಲ ಕಾರಣ. ಸ್ತ್ರೀಯ ಮನಸ್ಸು ಬಹು ಬೇಗ ಹದಗೊಂಡು ಪ್ರೇಮಭಾವನೆಯ ಬೀಜಾರೋಪಣೆಗೆ ಸಿದ್ಧವಾಗಿರುತ್ತದೆ. ಗಂಡಸು ಮೊದಲು ಮುಂದುವರಿಯುವವನಾದರೂ ಮಿಕ್ಕುದೆಲ್ಲ ತಾನೇ ನೋಡಿಕೊಳ್ಳುವೆನೆನ್ನುವಷ್ಟು ಅವಳ ಮನಸ್ಸಿನ ತಯಾರಿ ಇರುತ್ತದೆ.

ಪ್ರಕೃತಿಜನ್ಯವಾದ ಈ ಆಕರ್ಷಣೆಗೆ ಅನುಕೂಲವಾಗುವಂತೆ, ನೆರೆ-ಹೊರೆ ಶಾಲೆಕಾಲೇಜು ಇವುಗಳ ವಾತಾವರಣವಿರುತ್ತದೆಂದು ಒಟ್ಟಿನಲ್ಲಿ ಹೇಳಬೇಕು. ಒಂದೇ ಕಡೆಗೆ ಇರುವದರಿಂದ, ಒಬ್ಬರೊಬ್ಬರು ಸಂಧಿಸುವುದರಿಂದ ಪ್ರೇಮದ ಕಿಡಿ ಉತ್ಪನ್ನವಾಗುತ್ತದೆ. ಅಂಥ ಕಾರಣದಿಂದ ತನಗಿಂತ ಅಯೋಗ್ಯನೂ ಹೆಣ್ಣಿನ ಕಣ್ಣಿಗೆ ಪ್ರೇಮಪಾತ್ರನಾಗಬಹುದು. ಬರಿಯೆ ವಾಸನೆಯಿಂದ ಸಹಿತ ಮೋಹಗೊಳ್ಳುವ ಸಂಭವ ಹೇಗೆ ಇರುವದೆಂದು ವ್ಯಾನ್ ಡೆವೆಲ್ಡ ಎಂಬ ಮನಶ್ಶಾಸ್ತ್ರಜ್ಞ ಒಂದೆಡೆ ವಿವರಿಸಿದ್ದಾನೆ. ಹೀಗೆ ಹೆಣ್ಣು ಆಕರ್ಷಿತವಾಗುವದಕ್ಕೆ ಯುವಕನ ಪೂರ್ಣಸೌಂದರ್ಯದ ಪರಿಣಾಮ ಬೇಕಾಗುವುದಿಲ್ಲ. ಗುಂಗುರು ಕೂದಲು, ಹಿಕ್ಕಿಕೊಳ್ಳುವ ರೀತಿ, ಹೊಳೆಯುವ ದೊಡ್ಡ ಕಣ್ಣುಗಳು, ಮಂದಸ್ಮಿತವುಳ್ಳ ಮುಖ, ಗುಳಿಬೀಳುವ ಕೆನ್ನೆ, ಅಚ್ಚ ಬಿಳಿಯ ವರ್ಣದ ಪೋಷಾಕು, ಅಷ್ಟೇಕೆ ನಡೆದಾಡುವ ರೀತಿ ಸಹಿತ ಪ್ರೇಮಬೀಜದ ನಿರ್ಮಾಣಕ್ಕೆ ನಿಮಿತ್ತವಾಗುತ್ತವೆ. ಇವುಗಳಲ್ಲಿ ಯಾವದೊಂದರ ನಿಮಿತ್ತ ಉಂಟಾದ ಪ್ರೇಮ ಬಲಿತಂತೆ, ಉಳಿದ ಅವಗುಣಗಳನ್ನು ಕ್ರಮೇಣ ಕಡೆಗಣಿಸತೊಡಗುತ್ತದೆ.





ಸಂಪೂರ್ಣ ನಗ್ನತೆಗಿಂತ ಅರ್ಧಮರ್ಧ ನಗ್ನತೆ ಹೆಚ್ಚು ಮಾದಕವೆಂದು ಹೇಳುವದಿದೆಯಷ್ಟೆ. ಹಾಗೆಯೇ ಇಂದಿನ ನಮ್ಮ ಸಮಾಜದಲ್ಲಿ ಗಂಡು ಹೆಣ್ಣಿನ ಸಂಪರ್ಕಕ್ಕೆ ಪೂರ್ಣ ಸಾತಂತ್ರ್ಯವೂ ಇಲ್ಲ, ಪೂರ್ಣ ನಿರ್ಬಂಧವೂ ಇಲ್ಲದೆ ಅರ್ಧಮರ್ಧ ಸ್ಥಿತಿ ಇರುವುದರಿಂದ, ನಮ್ಮಲ್ಲಿ ಪಾಶ್ಚಾತ್ಯ ದೇಶಗಳಿಗಿಂತ ಪ್ರೇಮವರ್ಧನೆ ಬಲು ಬೇಗ ಆಗುತ್ತದೆ. ಮತ್ತು ಅಂಥವರ ಸಂಖ್ಯೆಯೂ ಹೆಚ್ಚಿಗೆ ಇರಬಹುದು. ಮೇಲಿನ ಒಂದು ಸಣ್ಣ ನಿಮಿತ್ತವೇ ಆಗಲಿ, ವಿಶಿಷ್ಟ ಹಿನ್ನೆಲೆಯ ಮೂಲಕ ಉಂಟಾದ ಪ್ರೇಮವೇ ಆಗಲಿ, ಒಮ್ಮೆ ಮೂಡಿತೆಂದರೆ ಅದನ್ನು ಬೆಳೆಸುವ ಕೆಲಸವೆಲ್ಲ ಕಲ್ಪನೆಗಳಿಂದ ನೆರವೇರುತ್ತದೆ.

* * *

ಈ ವಿವರಣೆಯಿಂದ ಒಂದು ಮಾತು ಸ್ಪಷ್ಟವಾಗಿರಬೇಕು. ಪ್ರೇಮ ಕೂಡುವದೆಂದರೆ ಅದೊಂದು ಆಕಸ್ಮಿಕ ಘಟನೆ (Accident) ಎಂಬುದಾಗಿ ಅದಕ್ಕೆ ಸಮರ್ಪಕವಾದ ಕಾರಣ ಕಾರ್ಯ ಸಂಬಂಧ ದೊರೆಯುವುದು ಸಾಧ್ಯವೇ ಇಲ್ಲ.

ಪ್ರೇಮಸಂಬಂಧದಲ್ಲಿ ಏನಾದರೂ ಭೇದಗಳಿವೆಯೋ ಎಂಬುದನ್ನು ನೋಡುವಾ. ಹೆಚ್ಚಿನ ಪ್ರೇಮ ಸಂಬಂಧಗಳು ಮೇಲೆ ಹೇಳಿದ ಕಾರಣದ ಮೂಲಕ, ಮೊದಲನೋಟವಾಗಿದೆ. ಮಿಕ್ಕವುಗಳು ಬಳಕೆ ಎಂದರೆ ಒಡನಾಟದಿಂದ ಹುಟ್ಟಿದವುಗಳಿರುತ್ತವೆ. ಮೂರನೆಯದೊಂದು ಬಗೆ ಇದೆ. ಅಂಥಲ್ಲಿ ಹುಡುಗಿ ಎಷ್ಟೊಂದು ನಿಷ್ಕ್ರಿಯ (Passive) ಆಗಿರುತ್ತಾಳೆಂದರೆ, ಮೊದಲು ಮುಂದರೆಯುವ ಯುವಕನಿಗೆ, ವಿರೋಧವಾದ

ದಷ್ಟು ಸುಮ್ಮನುಳಿದು ಅನಂತರ ಆವನನ್ನೇ ಪ್ರೀತಿಸುವುದೂ ಉಂಟು.

ಕುಮಾರಿಕೆ ಋತುಮತಿಯಾಗುವುದು ಸಾಮಾನ್ಯತಃ ತನ್ನ ೧೨ನೆಯ ವಯಸ್ಸಿನಲ್ಲಿ. ಆಗ, ಮತ್ತು ಮುಂದಿನ ೩-೪ ವರ್ಷಗಳಿಗಾದರೂ ಗಂಡಿನೊಡನೆಯ ಬಳಕೆಗೆ ಒಗ್ಗುವಷ್ಟು ಮಾನಸಿಕ ಬೆಳವಣಿಗೆ ಆಗಿರುವುದೇ ಇಲ್ಲ. ದೈಹಿಕ ಬೆಳವಣಿಗೆ ಆಗಿರುತ್ತದೆ. ಅಲ್ಲದೆ ಅವಳು ಸ್ವಭಾವದಿಂದ ಭಾವನಾಶೀಲೆ ಮತ್ತು ಮುಗ್ಧಮನಸ್ಸಿನವಳು. ತತ್ಪರಿಣಾಮವಾಗಿ ಅಂಥ ವಯಸ್ಸಿನಲ್ಲಿ ತಾನು ತೊಡಕಿಕೊಂಡಿರುವುದು ಪ್ರೇಮದಲ್ಲಿ, ತನ್ನ ಜೊತೆಗಾರನ ಯೋಗ್ಯತೆ ಇಂಥದು, ಅದರ ಮುಂದಿನ ಪರಿಣಾಮಗಳಿಂತು ಎಂಬ ಅರಿವು ಎಷ್ಟೋ ಹುಡುಗಿಯರಿಗೆ ಇರುವುದಿಲ್ಲ. ಕೃತಿಗಿಂತ ರಮ್ಯ ವಿಚಾರಗಳಿಗೆ ಹೆಚ್ಚು ಪ್ರಾಧಾನ್ಯವುಂಟಾಗುವ ಪ್ರೇಮದ ಮಾತುಗಳಿಂದ ಅವಳ ದೃಷ್ಟಿಯಲ್ಲಿ ವ್ಯಾವಹಾರಿಕತೆ ಉಳಿಯುವದು ಬಲು ಕಷ್ಟದ ಮಾತು. ಮತ್ತು ಮೇಲೆ ಹೇಳಿದ ವಿರೋಧಮಾಡದಂತಹ ಮನಃಸ್ಥಿತಿಯ ಮೂಲಕ ಸಮ್ಮತಿಯನ್ನು ಕೊಡುವುದರಿಂದಲೂ ಹುಡುಗೆಯು ಪ್ರೇಮಪಾಶದಲ್ಲಿ ಸಿಗುತ್ತಾಳೆ. ಸಿಕ್ಕ ಎಷ್ಟೋ ಕಾಲದ ಮೇಲೆ ಅವಳಿಗೆ ತಿಳಿವುಂಟಾಗುತ್ತದೆ. ಆ ಪ್ರಸಂಗದಲ್ಲಿ ಗಂಡಸು ಹಿಂದೆ ಸರಿದಿದ್ದರೂ ಆಕೆಗೆ ಮಾತ್ರ ಅದರಿಂದ ವಿಮುಕ್ತಳಾಗಿ ಮೇಲೆ ಬರಲಿಕ್ಕೆ ಸಾಧ್ಯವಾಗುವದಿಲ್ಲ.

ಇದಕ್ಕೆ ಕಾರಣವಿಷ್ಟೇ: ಸ್ತ್ರೀ ಒಮ್ಮೆ ಒಬ್ಬನಿಗೆ ಮನಸ್ಸನ್ನು ಒಪ್ಪಿಸಿಬಿಟ್ಟ ಮೇಲೆ ಎಂತಹ ಸಾಮಾನ್ಯ ಸ್ತ್ರೀಯೇ ಇರಲಿ, ಅದನ್ನು ಮರಳಿ ಪಡೆಯುಲು ಆಕೆಗೆ ಬಹಳ ಕಠಿಣ ಹೋಗುತ್ತದೆ. ಮೊದಲ ಸಂಬಂಧದ ಆಕರ್ಷಣೆಯದು. ಅಂಥ ಪ್ರಸಂಗದಲ್ಲಿ ಪ್ರೇಮದ ಸಂಗಡ ಆಕೆ ತನ್ನ ಜೀವವನ್ನೂ ಅರ್ಪಣಮಾಡಿಯಾಳು, ಇಲ್ಲವೆ ಮುಂದಣ ಜೀವನವನ್ನು ನಿಸ್ಸಾರ ಮಾಡಿಕೊಳ್ಳಬಹುದು. ಪ್ರೇಮಪಾಶವೆನ್ನುವ ಮಾತು ಅವಳಿಗೆ ಬಹಳ ಒಪ್ಪುತ್ತದೆ. ಅದರಲ್ಲಿಯೂ ಮೊದಲ ನೋಟದ ಪ್ರೇಮವು ಆಕೆಗೆ ಹೆಚ್ಚು ಘಾತಕವಾದುದು.

ಹೆಂಗಸು ಪ್ರೇಮ ಮಾಡುವ ರೀತಿಯೇ ಬೇರೆ. ಗಂಡಸಿನದೇ ಬೇರೆ. ನಿಜ ಪ್ರೇಮದಲ್ಲಿದ್ದ ಹೆಣ್ಣು ಯಾವ ತ್ಯಾಗಕ್ಕೂ ಸಿದ್ಧಳಾಗುತ್ತಾಳೆ. ಯಾವ ಧೈರ್ಯವನ್ನೂ ಮಾಡುತ್ತಾಳೆ. ಇಷ್ಟೊಂದು ಶಕ್ತಿ ಮತ್ತು ತತ್ಪರತೆ ಗಂಡಸಿನ ಪ್ರೇಮದಲ್ಲಿರುವುದಿಲ್ಲ. ಹೆಂಗಸಿಗಾದರೂ ತನ್ನನ್ನು ಎಲ್ಲ ರೀತಿಯಲ್ಲಿ ಅರ್ಪಿಸುವಲ್ಲಿಯೇ ಪ್ರೇಮದ ಸಾರ್ಥಕತೆ ಇರುತ್ತದೆ. ಅದಕ್ಕಾಗಿಯೇ "Love is the history of a woman's life. It is an episode in a man's" (ಪ್ರೇಮವು ಸ್ತ್ರೀಗೆ ಜೀವನದ ಇತಿವೃತ್ತವೇ ಆಗಿರುತ್ತದೆ. ಗಂಡಸಿಗೆ ಅದು ಜೀವನದ ಒಂದು ಘಟನೆ ಮಾತ್ರ) ಎಂದು ಮೆಡಮ್ ಡಿಸ್ಟೀಲ್ ಎಂಬಾಕೆ ಹೇಳಿದ್ದಿದೆ.

ಇದರಿಂದ ಯುವಕನು ಯಾವಾಗಲೂ ವಂಚನೆಯ ದೃಷ್ಟಿಯನ್ನೇ ಇಟ್ಟುಕೊಂಡು ಪ್ರೇಮ ಮಾಡುತ್ತಾನೆಂದಲ್ಲ. ಆದರೆ ಇಬ್ಬರಲ್ಲಿಯ ಪ್ರೇಮ





ಒರೆಗಲ್ಲಿಗೆ ನಿಂತಾಗ, ಹೆಚ್ಚಿನ ಯುವಕರು ಜಾರಿಕೊಳ್ಳುತ್ತಾರೆ. ಅವರಲ್ಲಿ ಪ್ರೇಮೋದಯವಾಗುವುದೂ ಬೇಗ. ಅಸ್ತವಾಗುವ ಪ್ರಸಂಗ ಬಂದರೆ ಅದಕ್ಕೂ ತಡ ಹಿಡಿಯಲಿಕ್ಕಿಲ್ಲ. ಕುಮಾರಿಕೆಗ ಅದರ ತದ್ವಿರುದ್ಧ. ಅವಳು ಮನಸ್ಸನ್ನು ಅಣಿಗೊಳಿಸುವುದಕ್ಕೆ ತುಸು ತಡ ಹಿಡಿದೀತು. ಅಂಥ ಪ್ರಾರಂಭದೆಸೆಯಲ್ಲಿಯೇ ಮುರಗಡೆಯ ಪ್ರಸಂಗ ಬಂದರೆ ಯಾವ ತ್ರಾಸವೂ ಇಲ್ಲದೆ ಆಯತ ವೇಳೆಗೆ ಪ್ರೇಮಿಸಿದ ಪುರುಷನನ್ನು ಒಲ್ಲೆ ಎನ್ನಬಹುದು. ಆದರೆ ಒಮ್ಮೆ ತಾನು ಮನಸ್ಸಿನ ಅರ್ಪಣೆ ಮಾಡಿದಳೆಂದರೆ ಅದರಲ್ಲಿ ಹಿಂದು ಮುಂದು ಎಂಬುದಿಲ್ಲ ಅವಳ ಮಾನಸಿಕ ಪ್ರೇಮವು ಏಕಮುಖವಾದುದು ಆಳವಾದುದು ಮತ್ತು ಅವಳ ಬಾಳಿನ ಸರ್ವಸ್ವವಾದುದಾಗಿದೆ.

‡ ‡ ‡

ಇದಕ್ಕೆ ಪರಿಹಾರವನ್ನು ಹೇಳುವ ಉದ್ದೇಶ ನನ್ನದಲ್ಲ. ಯೋಗ್ಯ ವಯಸ್ಸಿಗೆ ಮಗಳ ಮದುವೆಯ ಸಿದ್ಧತೆ ಮಾಡಿದಲ್ಲಿ, ಅದರಂತೆ ಪ್ರೇಮದಲ್ಲಿ ಮಗಳು ಬಿದ್ದಿದ್ದಾಳೆ ಎಂದು ತಿಳಿದೊಡನೆ ಅದು ಬೆಳೆಯುವ ಮೊದಲೇ ಆ ವಿವಾಹವನ್ನು ಕೈಗೂಡಿಸಲಿಕ್ಕೆ ಪ್ರಯತ್ನಪಟ್ಟರೆ ಕುಮಾರಿಕೆಯ ಜೀವನದ ಕೆಲವು ದುರ್ದೈವೀ ಘಟನೆಗಳು ಕಡಿಮೆಯಾಗಬಹುದು. ಮಗಳು ಆರಿಸಿದ ಯುವಕನು ತೀರ ಅಪಾತ್ರನಿದ್ದರೆ, ಅದು ಬೆಳೆಯುವದಕ್ಕೆ ಮುಂಚೆಯೇ ಗಮನಕೊಟ್ಟು ಚಿವುಟಹಾಕುವುದು ಅವಶ್ಯವಾಗಬಹುದು. ಆದರೆ ಇವೆಲ್ಲ ಪ್ರತಿಬಂಧಕೋಪಾಯಗಳಿದ್ದಂತೆ. ಸ್ವತಃ ಕುಮಾರಿಕೆಯೇ, ತನಗೆ ಮದುವೆಯೇ ಜೀವನಸರ್ವಸ್ವ ಎಂಬುದನ್ನು ಅರಿತುಕೊಂಡು, ಯಶಸ್ವಿ ದಾಂಪತ್ಯ ದೊರೆಯುವಂತೆ ಎಚ್ಚರವಹಿಸಬಹುದು. ಪ್ರೇಮದಲ್ಲಿ ತೊಡಗುವ ಮುನ್ನ ಬರಿ ಭಾವನೆಗೆ ಬಲಿಬೀಳದೆ ತೀರ ಸ್ವಲ್ಪ ಮಟ್ಟಿಗಾದರೂ ಅವಳಲ್ಲಿ ವ್ಯಾವಹಾರಿಕತೆ ಮೂಡಿದರೆ ಅವಳ ಜೀವನ ಹಾಳು ದಾರಿ ಹಿಡಿಯಲಿಕ್ಕಿಲ್ಲ. ಶಿಕ್ಷಣ ಹೊಂದುತ್ತಿರುವ ಕುಮಾರಿಕೆಗೆ ಇದೀಗ ತನ್ನತನದ ಅರಿವಾಗತೊಡಗಿದೆ. ವಿಚಾರ ಸ್ವಾತಂತ್ರ್ಯ ಹಣಕಿಹಾಕಹತ್ತಿದೆ. ಅದರ ಉಪಯೋಗ ಮಾಡಿಕೊಳ್ಳುವ ಜಾಣತನದ ಪ್ರಜ್ಞೆ ಅವಳಲ್ಲಿ ಮೂಡಬೇಕು.

ತಡವಾದ ಮದುವೆ ಮತ್ತು ಅನನುಭವಿಕ ವಯಸ್ಸಿನ ಹುಡುಗ ಹುಡುಗಿಯರಲ್ಲಿ ಹೆಚ್ಚಿನ ಹೊಕ್ಕುಬಳಕೆಯು ನಮ್ಮ ಕುಮಾರಿಕೆಯರ 'ಪ್ರೇಮಯಾತನೆ'ಯ ಮುಖ್ಯ ಕಾರಣಗಳೆಂದು ನೋಡಿದೆವು. ಆದರೆ ಪ್ರೇಮವಿವಾಹವು ಅಯೋಗ್ಯವೆಂದು ಹೇಳಲು ಬರುವುದಿಲ್ಲ. ಅದು ಯುಗಧರ್ಮವನ್ನು ಕಡೆಗಣಿಸುವ ಮಾತು. ಸ್ತ್ರೀಯರಿಗೆ ಉಚ್ಚ ವಿದ್ಯಾಭ್ಯಾಸ ಕೊಡುವ ಹೆಜ್ಜೆಯನ್ನು ಇಂದು ಹಿಂತೆಗೆದುಕೊಳ್ಳುವುದು ಸಾಧ್ಯವಾಗದು ಮತ್ತು ಇಂಥ ಪ್ರೇಮಸಂಬಂಧಗಳಿಗೆ ಸಮಾಜವು ಮನಸ್ಸಿರಲಿ ಬಿಡಲಿ ಸಿದ್ಧವಾಗಲೇ ಬೇಕಾದೀತು.

ಪ್ರೇಮವನ್ನು ಯಾತನೆಯಾಗಿ ಮಾಡುವ ಮುಖ್ಯ ವಿಷಯವೆಂದರೆ ಅದು ವಿವಾಹದಲ್ಲಿ ಪರಿಣಮಿಸಲು ಸಾಧ್ಯವಾಗದಿರುವುದು. ನಮ್ಮ ಇಂದಿನ ಸಮಾಜವ್ಯವಸ್ಥೆಯು ಸಂಧಿಕಾಲದಲ್ಲಿದೆ. ಹಳೆಯದು ಹೊಸದನ್ನು ನಿರಾತಂಕವಾಗಿ ಬೆಳೆಯಗೊಟ್ಟು ಆ ಮೇಲೆ ಅದರ ಫಲಗಳನ್ನು ಮಾತ್ರ ಒಲ್ಲೆನೆನ್ನುತ್ತಿದೆ. ಜಾತಿಭೇದಗಳು ಒಂದೆಡೆ, ಒಂದೇ ಜಾತಿಯಲ್ಲಿಯೂ ವರ್ಗಭೇದ, ಇನ್ನೊಂದು ಕಡೆ, ವರದಕ್ಷಿಣೆಯ ಮೋಹ ಮತ್ತೊಂದೆಡೆ-ಹೀಗೆ ಅನೇಕ ಕಾರಣಗಳು ಪ್ರೇಮಸಂಬಂಧವನ್ನು ವಿವಾಹದಲ್ಲಿ ಕೊನೆಗೊಳಿಸಲು ಆತಂಕವಾಗುತ್ತವೆ. ಇಡೀ ಸಮಾಜವನ್ನೂ ಕುಟುಂಬವನ್ನೂ ಎದುರು ಹಾಕಿಕೊಂಡಾದರೂ ತಮ್ಮ ಸಂಬಂಧವನ್ನು ವಿವಾಹದಿಂದ ದೃಢೀಕರಿಸೇ ತೀರುವೆನೆಂಬ ಎದೆಗಾರ ಹುಡುಗ ಹುಡುಗಿಯರು ವಿರಳ. ಎದೆಗಾರಿಕೆಯಿದ್ದಲ್ಲಿಯೂ ಅದು ಏಕಪಕ್ಷೀಯವಾಗಿರುವುದೇ ಹೆಚ್ಚು. ಹೀಗಾಗಿ ಬಿಟ್ಟಿಗೆ ಹಚ್ಚಿದಾಗ ಮುರುಗಡೆಯಾಗಿಬಿಡುತ್ತದೆ.

ಮಧ್ಯಮ ವರ್ಗವು ಆಧುನಿಕ ನಾಗರಿಕತೆಯ ಮಾರ್ಗವನ್ನೊಪ್ಪಿ ತನ್ನ ಮಕ್ಕಳನ್ನು ಸ್ವತಂತ್ರ ವಾತಾವರಣದಲ್ಲಿ ಬೆಳೆಯಲು ಬಿಟ್ಟಿದೆ. ಆದರೆ ಇಂಥ ವಾತಾವರಣದಲ್ಲಿ ಒದಗಬಹುದಾದ ಪರಿಸ್ಥಿತಿಯನ್ನೆದುರಿಸಲು ಅದು ತನ್ನ ಮನೋಭೂಮಿಕೆಯಲ್ಲಿ ಬದಲಾವಣೆ ಮಾಡಿಕೊಂಡಿಲ್ಲ. ತಾವೇ ವೇದಿಕೆಯಲ್ಲಿ ವ್ಯಕ್ತಗೊಳಿಸಿದ ಕ್ರಾಂತಿಕಾರಿ ಜಾತ್ಯತೀತ ವಿಚಾರಗಳನ್ನು ತಮ್ಮ ಮಗನೋ ಮಗಳೋ ಆಚರಣೆಗೆ ತಂದಾಗ ಗಾಬರಿಯಾಗಿ ಅವರನ್ನು ಹತ್ತಿಕ್ಕಲು ಸಿದ್ಧರಾದ ತಂದೆತಾಯಿಗಳಿದ್ದಾರೆ. ಇಂಥ ಪ್ರಸಂಗಗಳಲ್ಲಿ ಅವರಿಗೆ ತಮ್ಮ ಮಕ್ಕಳ ಸುಖ ಸಂತೋಷಕ್ಕಿಂತಲೂ ತಮ್ಮ ಜಾತಿ, ವರ್ಗ ಅಥವಾ ವೈಯಕ್ತಿಕ ಅಭಿಮಾನವೇ ಹೆಚ್ಚೆನಿಸುತ್ತದೆ. ಅವರು ತಾವು ಮುಂದಿಟ್ಟ ಹೆಜ್ಜೆಯ ಫಲಗಳನ್ನೂ ಸಂತೋಷದಿಂದ ಸ್ವೀಕರಿಸಲು ಸಿದ್ಧರಾದ ಹೊರತು, ಮೊದಲೇ ಅನಿಶ್ಚಿತ ಸ್ವರೂಪದ್ದಾದ ಪ್ರೇಮಸಂಬಂಧವು ಇನ್ನಷ್ಟು ಯಾತನೆಗೆ ಕಾರಣವಾಗುವುದು ತಪ್ಪದು. ಪ್ರೇಮವಿವಾಹಗಳಿಗೆ ಯಶಸ್ವಿಯಾಗಲು ಸಮಾಜವು ಒಂದು ಅವಕಾಶ ಕೊಡಬೇಕು. ಇದರಿಂದ ಮೊದಲನೇ ಪೀಳಿಗೆಯಲ್ಲಿ ದಾಂಪತ್ಯ ಸೌಖ್ಯ ಕಡಿಮೆಯಾದರೂ ಅಂಥ ಅನುಭವ ಪಡೆದ ಮಾತೆಯರ ಮಕ್ಕಳಲ್ಲಿ ಅಪಾತ್ರಪ್ರೇಮಸಂಬಂಧದ ಪ್ರಕರಣಗಳು ಕಡಿಮೆಯಾಗಿ ಹೊಸ ಪರಿಸ್ಥಿತಿಗೆ ಅವರು ಹೆಚ್ಚು ಸಹಜವಾಗಿ ಹೊಂದಿಕೊಳ್ಳಬಹುದು.

[ಲೇಖಕರ ಪ್ರಕಟವಾಗಲಿರುವ 'ಅವಿವಾಹಿತೆ: ಒಂದು ಸಾಮಾಜಿಕ ಸಮಸ್ಯೆ' ಎಂಬ ಪುಸ್ತಕದ ಒಂದು ಭಾಗವಿದು. -ಸಂ.]

ಜ್ಯೋತಿಷಿ ಶ್ರೀ. ಕೃಷ್ಣಶಾಸ್ತ್ರಿ ಭಿಡೆ
ಭವಿಷ್ಯಕಥನ ಕಾರ್ಯಾಲಯ, ಕಾರ್ಲೇಕರ ಬಿಲ್ಡಿಂಗ,
ಖಡೇಬಜಾರ - ಬೆಳಗಾಂವಿ

# ವರ್ಷ ಭವಿಷ್ಯ

**ಶಾಲಿವಾಹನ ಶಕೆ ೧೮೭೬ ಕಾರ್ತಿಕ ಶುದ್ಧ ಪ್ರತಿಪದೆ ಬುಧವಾರದಿಂದ
ಶಕೆ ೧೮೭೭ ಆಶ್ವಿನ ಬಹುಳ ೩೦ ಸೋಮವಾರ
ಅಂದರೆ**

## ೧೯೫೪ ಅಕ್ಟೋಬರ ೨೭ ರಿಂದ
## ೧೯೫೫ ನವ್ಹೆಂಬರ ೧೪ ರ ವರೆಗೆ

**( ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗೆ )**

**ಸೂಚನೆ:—** ಪ್ರತಿ ಜನ್ಮರಾಶಿಯವರಿಗೆ ಪ್ರತಿ ಗ್ರಹದ ವಿಚಾರವನ್ನು ಸಾಕಲ್ಯೇನ ಮಾಡಿ ಆಯಾ ಗ್ರಹಗಳ ಒಳ್ಳೆ ಕೆಟ್ಟ ಪರಿಣಾಮ ಎಷ್ಟರಮಟ್ಟಿಗೆ ಆಯಾ ರಾಶಿಯವರ ಮೇಲೆ ಆಗುವದೆಂಬುದನ್ನು ಈ ಭವಿಷ್ಯದಿಂದ ಬಹಳ ಮಟ್ಟಿಗೆ ತಿಳಿಯಬಹುದು.

ವಾಸ್ತವವಾಗಿ ಆಯಾ ವ್ಯಕ್ತಿಗಳ ಭವಿಷ್ಯವನ್ನು ಅವರವರ ಜನ್ಮಕುಂಡಲಿಯ ಮೇಲೆ ಹೇಳಿದ್ದಾದರೆ ಅದು ಸಂಪೂರ್ಣವಾಗಿ ಕೂಡಿಬರುವದೆಂಬುದು ಸುಸ್ಪಷ್ಟವಿದೆ.

ಆದರೂ ಈ ವರ್ಷಭವಿಷ್ಯವು ಪ್ರತಿಯೊಬ್ಬ ಮನುಷ್ಯನಿಗೆ ಈ ವರ್ಷ ಸುಖದುಃಖಗಳ ವಾತಾವರಣದಲ್ಲಿ ಅವನು ಎಷ್ಟರ ಮಟ್ಟಿಗೆ ಇರಬೇಕಾಗುವದೆಂಬದನ್ನು ಸ್ಪಷ್ಟವಾಗಿ ತಿಳಿಸಿಕೊಡುವದರಲ್ಲಿ ಸಂದೇಹವಿಲ್ಲ.

ಪ್ರತಿಯೊಬ್ಬನು ಈ ಭವಿಷ್ಯವನ್ನು ತನ್ನ ಜನ್ಮರಾಶಿಗನುಸಾರವಾಗಿ ಜನ್ಮಲಗ್ನವನ್ನು ನೋಡಿಯೂ ತಿಳಿದುಕೊಂಡು ಇವೆರಡರ ಫಲಗಳನ್ನು ಲಕ್ಷದಲ್ಲಿ ಇಟ್ಟುಕೊಂಡು ನಡೆದದ್ದಾದರೆ ಕಟು ಅರ್ಥಾತ್ ಅಶುಭ ಫಲಗಳಿಗಾಗಿ ಜಾಗ್ರತವಿರಲು ಬರುವದು, ಮತ್ತು ಶುಭ ಫಲಕ್ಕಾಗಿ ಹೆಚ್ಚು ಪ್ರಯತ್ನ ಮಾಡಲಿಕ್ಕೆ ಬರುವದು. ಈ ವರ್ಷದ ಭವಿಷ್ಯಪಥವನ್ನು ಶಕ್ಯವಿದ್ದಷ್ಟು ಸುಖಕರ ಮಾಡಿಕೊಂಡು ಆತ್ಮೋನ್ನತಿಯನ್ನು ಸಾಧಿಸಲು ಅವಕಾಶ ಸಿಕ್ಕುವದೆಂಬದನ್ನು ಪೂರ್ಣ ಮನವರಿಕೆ ಮಾಡಿ ನೋಡಿಕೊಳ್ಳಬೇಕು.

ಸ್ತ್ರೀಯರಿಗೆ ಬಹುಶಃ ಪುರುಷರಂತೆಯೇ ಫಲ ಸಿಕ್ಕುವವು. ಆದರೂ ದೈಹಿಕ ತಾರತಮ್ಯವನ್ನು ಲಕ್ಷದಲ್ಲಿ ಇಟ್ಟುಕೊಳ್ಳಬೇಕಾಗುವದು.

---

## ಮೇಷ

---

ಒಟ್ಟಾರೆ ಈ ವರ್ಷ ನಿಮಗೆ ಅಗಸ್ಟ ೧೮ ರ ವರೆಗೆ ಶಾರೀರಿಕ ಸುಖಕ್ಕೆ, ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ಮತ್ತು ಸಪ್ಟಂಬರ ೨೧ ರಿಂದ ಮುಂದೆ ಪ್ರಾಪಂಚಿಕ ಸುಖಕ್ಕೆ ಅನುಕೂಲವಿದ್ದು ಉಳಿದ ಎಲ್ಲ ಕಾಲ ಬಹುಶಃ ದ್ರವ್ಯ ಲಾಭಕ್ಕೆ ೧೬ ಆಣೆ ಅಲ್ಲದಿದ್ದರೂ ೧೨ ಆಣೆ ಉತ್ತಮವೇ ಇದೆ ಎಂಬುದರಲ್ಲಿ ಸಂಶಯವಿಲ್ಲ.

ಈ ರಾಶಿಯ ಜನರ ಆರೋಗ್ಯವು ಅಗಸ್ಟ ೧೮ ರ ವರೆಗೆ ಒಳ್ಳೆಯ ತರತರಿತ ಇರುವದು. ತಿನ್ನುಣ್ಣುವದರಲ್ಲಿ ಮತ್ತು ಅಡ್ಡಾಡುವದರಲ್ಲಿ ಎಷ್ಟೇ ಹೆಚ್ಚು ಕಡಿಮೆ ಆದರೂ ಅದರಿಂದ ಆರೋಗ್ಯದಲ್ಲಿ ಯಾವದೇ ಬಗೆಯ ಹೆಚ್ಚು ಕಡಿಮೆ ಆಗಲಾರದು. ಆದರೆ ಮೇಲೆ ಹೇಳಿದ ಅವಧಿಯನಂತರ ಬರುವ ೮ ನೇ ರಾಹುವಿನಿಂದ ದೊಡ್ಡ ಕಾರಣವಿಲ್ಲದಿದ್ದರೂ ಆರೋಗ್ಯ ಕೆಡುವದು. ಅದರಲ್ಲಿಯೂ ಅಗಸ್ಟ ೧೮ ರಿಂದ ಸಪ್ಟಂಬರ ೨೦ ರ ವರೆಗೆ ಬಹಳ ಜಪ್ಪಿಸ
ಲ್ಲಿಕ್ಕೆಬೇಕು. ಅನೇಕರಿಗೆ ಹೊಟ್ಟೆನೋವಿನಿಂದ ಇಲ್ಲವೆ ಭೂತಬಾಧೆಯಿಂದ ತೊಂದರೆಯಾಗುವದು. ಉಳಿದ ಕೆಲವು ಜನರಿಗೆ ಮನಸ್ಸಿನಲ್ಲಿಯ ಒಂದು ಕಾರ್ಯ ಸಾಧ್ಯವಾಗದೆ ಇದ್ದದ್ದರಿಂದ ಹುಚ್ಚು ಹಿಡಿಯುವ ಸರತಿ ಬರುವದು.

ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ಮಾತ್ರ ಈ ವರ್ಷ ಬಹಳ ಅನುಕೂಲವಿದೆ. ಮನಸ್ಸಿನಲ್ಲಿಯ ಬಹುತರ ವಿಷಯುಗಳು ನಿಮ್ಮ ಇಚ್ಛೆಯಂತೆ ಸಾಧಿಸುವವು. ಅಗಸ್ಟ ೧೮ ರಿಂದ ಮುಂದೆ ಅಲ್ಪ ಸ್ವಲ್ಪ ಗೃಹಕಲಹ ಏಳುವದು. ಅಲ್ಪ ಸ್ವಲ್ಪ ಕಾರಣಕ್ಕಾಗಿ ಒಬ್ಬರು ಮತ್ತೊಬ್ಬರ ಮೇಲೆ ಹರಿಹಾಯುವರು. ಅಣ್ಣತಮ್ಮಂದಿರು ಕೂಡಿ ಇದ್ದರೆ ಅವರು ಬೇರೆಯಾಗುವ ಮಾತು ನಡಿಸುವರು. ಹಿತಶತ್ರುಗಳು ಈ ಉರಿಯಲ್ಲಿ ಎಣ್ಣೆಯನ್ನು ಸುರುವಿ ಅದನ್ನು ಹೊತ್ತಿಸುವ ದುಷ್ಟ ಪ್ರಯತ್ನ ಮಾಡುವರು. ಆದರೂ ನಿಮ್ಮ ಜಾಣತನದಿಂದ ಬಹುಶಃ ಬೇರೆಯಾಗುವ ಪರಿಸ್ಥಿತಿ ಉಂಟಾಗಲಾರದು. ೪ನೇ ಗುರುವಿನ ಕಾಲ ಬಹಳ ದಗದಗಿಯದಾದರೂ ದುರ್ಘಟ ವಿಷಯಗಳೂ ಕೊನೆಗೆ ಸಾಧ್ಯವಾಗುವವು. ಮತ್ತು ಸಪ್ಟಂಬರ ೨೦ ರಿಂದ ಮುಂದೆ ೪ ನೇ ಗುರು ಹೋಗಿ ೫ ನೇ ಗುರು ಬರುವದರಿಂದ ದುರ್ಲಭವೆನಿಸಿದ ವಿಷಯಗಳು ಹಾ ಹಾ ಎನ್ನುವದರೊಳಗೆ ಸಾಧ್ಯವಾಗುವವು. ಈ ಪಂಚಮ ಗುರುವಿನಿಂದ ಭಾಗ್ಯ ಬೆಳೆದು ವಾಹನಾದಿ ಉತ್ತಮ ಸುಖ ಸಿಗುವದು. ಪ್ರಾಪಂಚಿಕ ಸುಖಕ್ಕೆ ಹೊಸ ಭರತಿಯಾಗುವದು. ಮತ್ತು ಕಾಲಕಾಲಕ್ಕೆ ಪ್ರಿಯ ಮತ್ತು ಪೂಜ್ಯ ಜನರ ಸಹವಾಸ ಸಂಭವಿಸುವದು.

ಸ್ತ್ರೀ ಸುಖಕ್ಕೆ ಈ ವರ್ಷ ಕೆಲ ದಿವಸ ಬಹಳ ಅನುಕೂಲವಿದ್ದರೆ, ಇನ್ನು ಕೆಲವು ದಿವಸ ಅಷ್ಟೇ ತೊಂದರೆಯಿರುವದು. ಆದರೆ ಉಭಯತರಲ್ಲಿ ಪ್ರೇಮ ಮತ್ತು ಮತ್ಯೈಕ್ಯ ಕಾಯಂ ಉಳಿಯುವದು. ಏನಾದರೂ ತ್ರಾಸವಾದರೆ ಅದು ಹೆಂಡತಿಯ ಪ್ರಕೃತಿಯ ಆರೋಗ್ಯಕ್ಕಾಗಿ ಆಗುವದು, ಮತ್ತು ಅದು ಜನೆವರಿ ಪೂರ್ಣ ಮತ್ತು ಎಪ್ರಿಲ ೧೮ ರಿಂದ ಮೇ ೧೩, ಸಪ್ಟಂಬರ ೧೨ ರಿಂದ ಅಕ್ಟೋಬರ ೫ ಮತ್ತು ಅಕ್ಟೋಬರ ೩೧ ರ ನಂತರ ಆಗುವ ಸಂಭವ ಹೆಚ್ಚಿಗಿದೆ. ಒಂದೇ ಸವನೆ ಮಳಮಳ ಎನಿಸುವದು, ವಾಂತಿಯಾಗುವದು, ಗಂಟಲದಲ್ಲಿ ಉರಿಯುವದು, ಟಾನ್ಸಿಲಗಳಾಗುವದು, ಪಿತ್ತಜ್ವರ ಮತ್ತು ಕೆಟ್ಟ ಕೆಟ್ಟ ಕನಸುಗಳು ಬೀಳುವ ಮೊದಲಾದ ತೊಂದರೆಯಾಗುವವು. ಎಪ್ರಿಲ ೧೦ ರಿಂದ ಅಗಷ್ಟ ೧೮ ರವರೆಗೆ ಅವಳ ಬಂಧುಗಳಲ್ಲಿ ಒಬ್ಬನಿಂದ ಬಹಳ ತ್ರಾಸವಾಗುವ ಯೋಗವಿದೆ. ಒಂದು ವೇಳೆ ನಿಮ್ಮ ಮದುವೆಯಾಗಿರದಿದ್ದರೆ ಮತ್ತು ಮಾಡಿಕೊಳ್ಳುವ ತಯಾರಿ ಇದ್ದರೆ ಅದು ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಬಹುಶಃ ಸಾಧ್ಯವಾಗುವದು. ಒಂದು ವೇಳೆ ಈ ಅವಧಿಯಲ್ಲಿ ಆಗದಿದ್ದರೆ ಸಪ್ಟಂಬರ ೨೦ ರ ನಂತರವಂತೂ ಆಗೇ ತೀರುವದು. ವಧೂವರರು ಪರಸ್ಪರ ಒಪ್ಪಿಗೆಯುವರೇ

ಇರುವರು. ಆದರೆ ಲೋಕದೃಷ್ಟಿಯಿಂದ ಅವರು ಅಷ್ಟೊಂದು ಚಂದ ಕಾಣರು. ಬುದ್ಧಿ ಮತ್ತು ಕರ್ತವ್ಯದಲ್ಲಿ ಬಹಳ ಅನುಕೂಲವೆನಿಸುವದು.

ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಫೆಬ್ರುವರಿ ೨೨ರ ವರೆಗೆ ಮುಂದೆ ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಬಹಳ ಪ್ರಬಲಯೋಗವಿದೆ. ಅದು ಕೂಡಿ ಬರುವದಿಷ್ಟೇ ಅಲ್ಲ, ಲಗ್ನವಾಗಿಯೇ ತೀರುವದು. ಸೊಸೆ ಇಲ್ಲವೆ ಅಳಿಯ ಬಹಳ ಹುಷಾರ ದೊರೆಯುವರು. ಸಪ್ಟಂಬರ ೨೦ರ ನಂತರ ನಿಮ್ಮ ಮಕ್ಕಳ ಪ್ರಗತಿಯಾಗುವ ಘಟನೆಗಳಾಗುವವು. ಮತ್ತು ಅವರೆಲ್ಲರಿಂದ ಯಥೋಚಿತ ಸುಖ ಸಿಗುವದು. ಅವರ ಆರೋಗ್ಯ ಚೆನ್ನಾಗಿ ಉಳಿಯುವದು. ಆದರೆ ಡಿಸೆಂಬರ ೩೦ ರಿಂದ ಫೇಬ್ರುವರಿ ೧೫ ಮತ್ತು ಜುಲೈ ೧ ರಿಂದ ಅಗಷ್ಟ ೧೮ ಈ ನಡುವಿನ ಅವಧಿಯಲ್ಲಿ ಅಲ್ಪ ಸ್ವಲ್ಪ ಕ್ಲೇಶ ಸಂಭವಿಸುವದು. ಮನೆಯಲ್ಲಿಯ ನೌಕರ ಚಾಕರರು, ಆಶ್ರಿತರು ಒಳ್ಳೆ ರೀತಿಯಿಂದ ವರ್ತಿಸುವರು. ಆದರೆ ಜುಲೈ ೧ ರಿಂದ ಅಗಷ್ಟ ೧೮ ರವರೆಗೆ ಒಬ್ಬಿಲ್ಲ ಒಬ್ಬರು ಶಾರೀರಕ ವ್ಯಂಗದಿಂದ ಕೆಲಸಕ್ಕೆ ಬಾರದವರಾಗುವರು. ಇಲ್ಲವೆ ನಿಮಗೆ ಮೋಸ ಮಾಡುವರು. ಒಟ್ಟಿಗೆ ಆಪ್ತರಿಂದ ಫೆಬ್ರುವರಿ ೨೨ರ ವರೆಗೆ ಮತ್ತು ಮುಂದೆ ಎಪ್ರಿಲ ೧೦ ರಿಂದ ಸಪ್ಟಂಬರ ೨೦ರ ನಡುವಿನ ಅವಧಿಯಲ್ಲಿ ಸ್ವಲ್ಪಿಲ್ಲ ಸ್ವಲ್ಪು ತೊಂದರೆಯಾಗುವದು. ಅವರಿಂದ ಆರ್ಥಿಕ ತೊಂದರೆ ಬಹಳ ಸಂಭವಿಸದಿದ್ದರೂ ಮಾನಸಿಕ ಉದ್ವೇಗವೇ ಹೆಚ್ಚಾಗುವದು.

ಧಂದೆ ಕೂಲಿಯವರಿಗೆ ಈ ವರ್ಷ ಬಹಳ ಉತ್ಕರ್ಷದ್ದಿರುವದು. ಏಕಂದರೆ ಕರ್ಮೇಶ ಮತ್ತು ಲಾಭೇಶನಾದ ಶನಿಯು ಇಡೀ ವರ್ಷ ಮತ್ತು ಭಾಗ್ಯೇಶನಾದ ಗುರುವು ಫೇಬ್ರುವರಿ ೨೨ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ತಮ್ಮ ತಮ್ಮ ಉಚ್ಚರಾಶಿಗಳಲ್ಲಿರುವರು. ಯಾವದೇ ಧಂದೆ ಮಾಡಿದರೂ ಅದು ಬಹಳ ಚೆನ್ನಾಗಿ ನಡೆಯುವದು, ಮತ್ತು ಅಂದಾಜಿಗಿಂತ ಹೆಚ್ಚು ಲಾಭವಾಗುವದು. ಅದರಂತೆ ವರ್ಷಾರಂಭದಲ್ಲಿ ರಾಶಿಯ ಸ್ವಾಮಿಯಾದ ಮಂಗಳನು ಉಚ್ಚ ಇರುವದರಿಂದ ಎಂಥ ಕಠಿಣ ಕೆಲಸವನ್ನೂ ಯಶಸ್ವಿಯಾಗಿಸುವ ಧೈರ್ಯ ಬರುವದು. ನೌಕರಿಯವರಿಗೆ ಸಂಭವ ಇಲ್ಲದಿದ್ದರೂ ಒಳ್ಳೇ ಗ್ರೇಡು ಸಿಗುವದು. ನವಂಬರ ೨೦ರ ವರೆಗೆ ನಂತರ ಫೆಬ್ರುವರಿ ೧೫ ರಿಂದ ಮಾರ್ಚ ೩೦, ಮೇ ೧೫ ರಿಂದ ಜುಲೈ ೧ ಮತ್ತು ಅಕ್ಟೋಬರ ೪ ರ ನಂತರದ ಅವಧಿಯಲ್ಲಿ ಈ ಯೋಗ ಪ್ರಬಲವಿರುವದು. ಕಠಿಣವೆನಿಸಿದ ಕೆಲಸಗಳು ಅನಾಯಾಸದಿಂದ ಸಾಧ್ಯವಾಗುವವು. ಆಶ್ರಯದಾತರ ಇಲ್ಲವೆ ವರಿಷ್ಠರ ಮರ್ಜಿ ಯಾವಾಗಲೂ ನಿಮ್ಮ ಮೇಲೆ ಇರುವದು. ನೌಕರಿಯಲ್ಲಿ ಬದಲಿಯಾಗುವದಿದ್ದರೆ ಅದು ಜನೆವರಿ ೧ ರ ವರೆಗೆ, ಇಲ್ಲದಿದ್ದರೆ ಫೆಬ್ರುವರಿ ೧ ರಿಂದ ೨೬, ಮೇ ೧೩ ರಿಂದ ಜೂನ ೬, ಜುಲೈ ೨೬ ರಿಂಗ ಅಗಷ್ಟ ೧೮ ಮತ್ತು ಅಕ್ಟೋಬರ ೪ ರ ನಂತರ ಸಾಧ್ಯವಾಗುವದು. ಕೈಕೆಳಗಿನ ಜನರು ಮಾತ್ರ ಅಗಷ್ಟ ೧೮ರ ನಂತರ ಬಗೆ ಬಗೆಯ ತಪ್ಪು ಮಾಡಿ ನಿಮಗೆ ಬಹಳ ತೊಂದರೆ ಕೊಡುವರು. ಸ್ವತಂತ್ರ ಧಂದೆ ಮಾಡುವವರ ಉದ್ಯೋಗ ಬಹಳ ಹಬ್ಬುವದು. ಸಾಮಾಜಿಕ ಪ್ರತಿಷ್ಠೆ ಇಮ್ಮಡಿಸುವದು. ದೊಡ್ಡವರ ಭೆಟ್ಟಿ ಅಕಸ್ಮಾತ್ತಾಗಿ ಸಂಭವಿಸುವದು. ಮತ್ತು ಪುರುಷಾರ್ಥಕ್ಕೆ ಅನುಕೂಲವಾದಂಥ ಅನೇಕ ಸಂಗತಿಗಳು ನಿಶ್ಚಯವಾಗಿ ಸಂಭವಿಸುವವು.

ದಾವೆ, ಖಟ್ಲೆ ಇಲ್ಲವೆ ಖಾಸಗಿ ಸ್ಪರ್ಧೆ ಅಥವಾ ಕಾಂಪಿಟೇಶನ್‌ಗಳಿಗೆ ಈ ವರ್ಷ ಅಷ್ಟೊಂದು ಅನುಕೂಲವಿರುವದಿಲ್ಲ. ಮತ್ತು ಅವುಗಳ ನಿರ್ಣಯ ಡಿಸೆಂಬರ ೩೦ ರಿಂದ ಫೆಬ್ರುವರಿ ೧೫, ಎಪ್ರಿಲ ೧ ರಿಂದ ೧೬, ಜುಲೈ ೨೬ ರಿಂದ ಅಗಷ್ಟ ೧೧, ಮತ್ತು ಅಗಷ್ಟ ೨೮ ರಿಂದ ನವ್ಹಂಬರ ೪ ರ ವರೆಗಿನ ಅವಧಿಯಲ್ಲಿ ಸಾರಲ್ಪಟ್ಟರೆ ಅದು ಬಹಳ ಮಟ್ಟಿಗೆ ನಿಮ್ಮ ವಿರುದ್ಧವಾಗುವದು. ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ಈ ಅವಧಿಯು ಶತ್ರುಗಳಿಗೆ ಇಲ್ಲವೆ ವಿರೋಧಿಗಳಿಗೆ ಬಹಳ ಅಭಿವೃದ್ಧಿಗೆ ಕಾರಣವಾಗಿರುವದು.

ಈ ರಾಶಿಯ ಸ್ತ್ರೀಯರು ಈ ವರ್ಷ ಗರ್ಭಿಣಿಯರಿದ್ದರೆ, ಮತ್ತು ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಮತ್ತು ಸಪ್ಟಂಬರ ೨೦ರ ನಂತರ ಪ್ರಸೂತರಾದರೆ ಬಹುಶಃ ಗಂಡು ಹಡೆಯುವರು. ಅದರಂತೆ ಅಗಷ್ಟ ೧೮ ರೊಳಗಾಗಿ ಹಡೆದವರಿಗೆ ಬಹಳ ಸುಲಭಪ್ರಸೂತಿಯಾಗುವದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೧ ರಿಂದ ಎಪ್ರಿಲ ೧೦ ಮತ್ತು ಸಪ್ಟಂಬರ ೨೦ ರಿಂದ ಮುಂದೆ ಆಗುವದಿದ್ದರೆ ಅವರು ಖಾತ್ರಿಯಿಂದ ಪಾಸಾಗುವರು. ಇಷ್ಟೇ ಅಲ್ಲ ಅವರಲ್ಲಿ ಫೆಬ್ರುವರಿ ೧೨ ರಿಂದ ಮಾರ್ಚ ೧೩ ಮತ್ತು ಸಪ್ಟಂಬರ ೨೦ ರ ನಂತರ ಯಾರ ಪರೀಕ್ಷೆಯಾಗುವದೋ ಅವರಿಗೆ ಉತ್ತಮ ಕ್ಲಾಸ ದೊರೆಯುವದು.

## ವೃಷಭ

ಒಟ್ಟಾರೆ ಈ ವರ್ಷ ಮೊದಮೊದಲು ಪ್ರಾಪಂಚಿಕ ಸುಖಕ್ಕಾಗಲಿ ಔದ್ಯೋಗಿಕ ಯಶಸ್ಸಿಗಾಗಲಿ ಎಷ್ಟೇ ತೊಂದರೆಯೆನಿಸಿದರೂ ಕೊನೆಗೆ ಬಹುತರ ವಿಷಯಗಳಲ್ಲಿ ಅಲ್ಪ ಸ್ವಲ್ಪವಾದರೂ ಸಮಾಧಾನವೆನಿಸುವದು.

ಈ ರಾಶಿಯ ಜನರ ಆಯುಷ್ಯಕ್ಕೆ ಗಂಡಾಂತರವಿಲ್ಲದಿದ್ದರೂ ಅಗಷ್ಟ ೧೮ ರ ವರೆಗೆ ಆರೋಗ್ಯ ಚನ್ನಾಗಿ ಉಳಿಯುವದಿಲ್ಲ. ಮತ್ತು ಪ್ರಕೃತಿ ಏಕೆ ಕೆಟ್ಟದೆಯೆಂಬುದು ಎಂಥ ಪ್ರಸಿದ್ಧ ಡಾಕ್ಟರ, ವೈದ್ಯರಿಗೂ ತಿಳಿಯಲಾರದು. ಗುಹ್ಯೇಂದ್ರಿಯಕ್ಕೆ ಪೀಡೆ ಮಾತ್ರ ನಿಶ್ಚಯವಾಗಿ ಆಗುವ ಸಂಭವವಿದೆ. ಮತ್ತು ಅದರಂತೆ ಅನೇಕ ವಿಷಯಗಳಲ್ಲಿ ಮಾನಸಿಕ ತೊಂದರೆಯು ಅಲ್ಪು ಸ್ವಲ್ಪು ಸದಾ ಆಗುವುದು. ಅಸಂಭಾವ್ಯವೆನಿಸಿದಂಥ ಬಹಳ ಕೆಟ್ಟ ಕೆಟ್ಟ ಸ್ವಪ್ನಗಳು ಬೀಳುವವು. ಅದರಲ್ಲಿಯೂ ಫೆಬ್ರುವರಿ ೧ ರಿಂದ ೨೬, ಮೇ ೧೩ ರಿಂದ ಜೂನ ೬ ರ ವರೆಗಿನ ಕಾಲ ಹೆಚ್ಚು ತೊಂದರೆಯದೆನಿಸುವದು. ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ಅವಶ್ಯಕವಾದ ಸಂಗತಿ ಸಂಭವಿಸಲಿಕ್ಕೆ ಬಹಳ ಕಾಲದವರೆಗೆ ಇರುವ ೨ ನೇ ಮತ್ತು ೩ ನೇ ಗುರುವು ಮತ್ತು ಸರ್ವ ಕಾಲವೂ ಇರುವ ೬ ನೇ ಶನಿ ಒಳ್ಳೆ ಕಾರಕರಾಗುವರು. ಅಗಷ್ಟ ೧೮ ರ ವರೆಗೆ ಯಾವಾಗಾದರೊಮ್ಮೆ ಗೃಹಕಲಹದ ಜಳ ತಾಕಿದರೂ ನಿಮ್ಮ ಗಂಭೀರ ಸ್ವಭಾವದ ವರ್ಚಸ್ಸಿನಿಂದ ಯಾರೂ ತಿರುಗಿ ಮಾತಾಡಲಾರರು. ಮನೆಯವರಿಗಿಂತ ದೂರಿನ ಆಪ್ತರು ಮತ್ತು ನೆರೆಹೊರೆಯವರು ಬಹಳ ತೊಂದರೆ ಕೊಡುವರು. ಮತ್ತು ಮನೆತನದ ಲೌಕಿಕವನ್ನು ಕಡಮೆ ಮಾಡುವಂಥ ಕುಸಂಗತಿಗಳು ಸಂಭವಿಸುವವು. ಈ ಕೆಲಸದಲ್ಲಿ ಮನೆಯಲ್ಲಿದ್ದ ಒಬ್ಬ ನೌಕರನು ಕೂಡಿಕೊಂಡಂತೆ ಎನಿಸುವದು. ಸ್ಥಾವರ ಮತ್ತು ಜಂಗಮ ವಸ್ತುಗಳಲ್ಲಿ ಹೊಸ ಸಂಗ್ರಹವಾಗದಿದ್ದರೂ ಹಳೆಯದಕ್ಕೆ ಲೋಪಬಾರದೆ ಅದು ದುರುಸ್ತಿಯಾಗುವದರಿಂದ ಹೊಸತನ ಬರುವದು. ಅನೇಕರ ಮನೆಗಳು ಇಲ್ಲವೆ ಹಳ್ಳಿಗಳು ಆಶ್ಚರ್ಯಕರ ರೀತಿಯಲ್ಲಿ ಬದಲಾಗುವವು.

ಸ್ತ್ರೀ ಸುಖಕ್ಕೆ ಈ ವರ್ಷ ಅಗಷ್ಟ ೧೮ ರವರೆಗೆ ಎಷ್ಟು ಉತ್ತಮ ಇರುವದೊ ಅಷ್ಟು ಮುಂದೆ

ಇರುವದಿಲ್ಲ. ಆ ಕಾಲಕ್ಕೆ ಯಾವದೊಂದು ಅಪಘಾತದ ಇಲ್ಲವೆ ವಿಪರೀತ ದೃಶ್ಯ ನೋಡಿ ಮನಸ್ಸಿಗೆ ಧಕ್ಕೆ ಕೂತು ಅದು ಬಹಳ ಕ್ಷೀಣ ಮತ್ತು ಅಧೈರ್ಯದ್ದಾಗುವ ಸಂಭವವಿದೆ. ಜನರೊಡನೆ ವಿತಂಡವಾದ ಮಾಡಿ ಚಿರಡಿಗೇಳುವ ಸಂಭವವಿದೆ. ಒಟ್ಟಾರೆ ಈ ವರ್ಷ ಮೊದಲು ನಿಮ್ಮ ಅನಾರೋಗ್ಯಕ್ಕಾಗಿ, ಅನಂತರ ಹೆಂಡತಿಯ ಶಾರೀರಕ ಮಾನಸಿಕ ಕಾರಣಗಳಿಗಾಗಿ ಸ್ತ್ರೀ ಸುಖಕ್ಕೆ ಬಹಳ ತೊಂದರೆಯಿರುವದು ನಿಶ್ಚಿತ. ನಿಮ್ಮ ಮದುವೆ ಇನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಅದು ಮಾರ್ಚ ೨೦ ರವರೆಗೆ, ಅನಂತರ ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ಅವಧಿಯಲ್ಲಿ ಸಹಜವಾಗಿ ಆಗುವದು. ವರ್ಷಾರಂಭದಲ್ಲಿ ಜಾಯೇಶನಾದ ಮಂಗಲನು ೯ ಅಂದರೆ ಭಾಗ್ಯಸ್ಥಾನದಲ್ಲಿ ಮತ್ತು ತನ್ನ ಉಚ್ಚ ರಾಶಿಯಾದ ಮಕರದಲ್ಲಿ ಇರುವದರಿಂದ ಈ ರಾಶಿಯ ವರನಿಗೆ ಉತ್ತಮ ವಧು ಮತ್ತು ವಧುವಿಗೆ ಸುಂದರ ವರ ಸಿಗುವರು. ಮತ್ತು ಅತ್ತೇಮನೆಯು ಬಹಳ ಉತ್ತಮ ಸಿಗುವದು. ಆದರೆ ಪ್ರತ್ಯಕ್ಷ ಲಗ್ನ ಸಮಾರಂಭದಲ್ಲಿ ಮಾತ್ರ ಪರಸ್ಪರ ತಪ್ಪು ತಿಳಿವಳಿಕೆಯಿಂದ ಇಲ್ಲವೆ ಅಡ್ಡಬರುವ ಅಡಚಣೆಗಳಿಂದ ಬಹಳ ವಿರಸ ಉಂಟಾಗುವದು.

ನಿಮ್ಮ ಮಕ್ಕಳ ಮದುವೆ ಆಗಿರದಿದ್ದರೆ, ಮತ್ತು ಈ ವರ್ಷ ಮಾಡುವದಿದ್ದರೆ ಅದು ನವ್ಹಂಬರ ೧೮ ರಿಂದ ಫೇಬ್ರುವರಿ ೨೨ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ನಿಶ್ಚಯವಾಗಿ ಆಗುವದು. ಕೂಡಿ ಬರುವದಕ್ಕೂ ಬಹಳ ಶ್ರಮ ಪಡಬೇಕಾಗಿಲ್ಲ. ಅಳಿಯ ಇಲ್ಲವೆ ಸೊಸೆ ನಿಮ್ಮ ಮನಸ್ಸಿಗೆ ಬರುವಂತಹವರು ಸಿಗುವರು ಮತ್ತು ಸದ್ಗುಣಿಗಳು ದೊರೆಯುವರು. ಮಕ್ಕಳು ಉತ್ಕರ್ಷ ಹೊಂದುತ್ತಿದ್ದರೂ ನಿಮ್ಮ ಗೂಡ ಮಾತ್ರ ಎಂದೂ ಸರಳ ನಡೆಯುವದಿಲ್ಲ. ಅದ್ದರಿಂದ ಅವಶ್ಯ ಪ್ರಸಂಗದಲ್ಲಿ ಅವರಿಂದ ನಿಮಗೆ ಸಹಾಯ ಸಿಕ್ಕಲಾರದು. ನೌಕರ ಚಾಕರರು ಕೂಡ ಶುದ್ಧ ಮೈಗಳ್ಳರಾಗುವರು. ಒಂದೆರಡು ಸಣ್ಣ ಕಳವು ಕೂಡ ಮಾಡುವರು. ವಾಹನಗಳಿದ್ದರೆ ಅವು ಮೇಲಿಂದ ಮೇಲೆ ಕೆಡ್ಸುವವು. ಸ್ಥಾವರ ಉತ್ಪನ್ನ ಒಳ್ಳೇ ಚನ್ನಾಗಿ ಬಂದರೂ ಕೈಗೆ ಬರಲಿಕ್ಕೆ ಸಾಕುಬೇಕಾಗಿ ಹೋಗುವದು. ಎಷ್ಟು ಉತ್ಪನ್ನಬಂದರೂ ದಿನದಿನಕ್ಕೆ ವೆಚ್ಚಹೆಚ್ಚಾಗುವದು. ಅದರಿಂದ ಅಗಸ್ಟ ೧೮ ರ ವರೆಗೆ ಅಲ್ಪ ಸ್ವಲ್ಪ ಸಾಲಮಾಡುವ ಪ್ರಸಂಗ ಬರುವದು. ಆದರಲ್ಲಿಯೂ ಗೃಹಸುಖದ ದೃಷ್ಟಿಯಿಂದ ನವ್ಹಂಬರ ೧೬ ರಿಂದ ಡಿಸೆಂಬರ ೧೫, ಜನೆವರಿ ೧೪ ರಿಂದ ಎಪ್ರಿಲ ೧೩, ಜೂನ ೧೫ ರಿಂದ ಜುಲೈ ೧೬ ಮತ್ತು ಅಗಸ್ಟ ೧೭ ರಿಂದ ಅಕ್ಟೋಬರ ೧೭ ಈ ಅವಧಿಯು ಕೆಲಮಟ್ಟಿಗೆ ಅನುಕೂಲವೆನಿಸುವದು.

ಧಂದೆ ಕೂಲಿಯವರಿಗೆ ಈ ವರ್ಷ ಸಪ್ಟಂಬರ ೨೦ರ ವರೆಗೆ ಬಹಳ ಉತ್ತಮವಿರುವದು. ಮುಂದೆಯಾದರೂ ಕೆಟ್ಟದಿದೆಯೆಂದಲ್ಲ. ಧಂದೆಗಾರರು ಪರಸ್ಪರ ಸ್ಪರ್ಧೆಯಿಂದ ಸಾಕಷ್ಟು ಲಾಭಹೊಂದಲಾರರು. ಮತ್ತು ನವಕರದಾರರಿಗೆ ಮೇಲಿನವರ ಅಡ್ಡಿಯುಂಟಾಗುವದು. ಉದ್ಯೋಗ ಧಂದೆ ಮಾಡುವವರು ಫೆಬ್ರುವರಿ ೧೫ ರಿಂದ ಮಾರ್ಚ ೩೦ ರ ವರೆಗೆ ದೊಡ್ಡ ಖರೀದಿ, ಇಲ್ಲವೆ ಸಟ್ಟಾ ವಾಯದೆ ವ್ಯವಹಾರ ಮಾಡದೆ ಇರುವದು ಅನುಕೂಲ. ಒಂದು ವೇಳೆ ಮಾಡಿದರೆ ಬಹಳ ಪೇಚಿನಲ್ಲಿ ಬಂದು ಹಾನಿ ಹೊಂದುವರು. ಮತ್ತು ಪಶ್ಚಾತ್ತಾಪ ಪಡಬೇಕಾಗುವದು. ಇಂಥ ಸಾಹಸಕ್ಕೆ ಡಿಶೆಂಬರ ೩೦ರಿಂದ ಫೆಬ್ರುವರಿ ೧೫ ಮತ್ತು ಜುಲೈ ೧ ರಿಂದ ಅಗಸ್ಟ ೧೮ ಈ ಅವಧಿಯು ಬಹಳ ಉತ್ತಮವಿರುವದು. ಭಾಗ್ಯೇಶ ಮತ್ತು ಕರ್ಮೇಶನಾದ ಶನಿಯು ಮತ್ತು ಲಾಭೇಶನಾದ ಗುರುವು ಈ ವರ್ಷ ಸ್ಥಾನಬಲಿಷ್ಠ ಮತ್ತು ರಾಶಿಬಲಿಷ್ಠ ಇರುವದರಿಂದ ಕಳೆದ ವರ್ಷಕ್ಕಿಂತ ಬಹಳ ಭಾಗ್ಯೋದಯವನ್ನುಂಟು ಮಾಡುವರು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಮಿತ್ರಸುಖ ಅನುಕೂಲವಾಗಿ ಅವರಿಂದ ಬಹಳ ಸಹಾಯ ಸಿಗುವದು. ಅವರಲ್ಲಿ ಅನೇಕರ ಉತ್ಕರ್ಷವಾಗುವದು, ನಿಮ್ಮ ಬಂಧುಗಳ ಉತ್ಕರ್ಷ ಬಹಳಾಗಿ ಅವರಲ್ಲಿ ಒಬ್ಬನಾದರೂ ಬಹಳ ಪ್ರಸಿದ್ಧಿಗೆ ಬರುವನು. ಈ ವರ್ಷ ಧಂದೆಯವರಿಗಿಂತ ನವಕರ ವರ್ಗದವರಿಗೆ ಹೆಚ್ಚು ಸುಖ ಸಮಾಧಾನ ದೊರೆಯುವವು. ಫೆಬ್ರುವರಿ ೨೨ ರಿಂದ ಎಪ್ರಿಲ ೧೦ರ ವರೆಗೆ ನವಕರರಿಗೆ ಬಡತಿಯಾಗುವದು. ಖಾತೆ ಬದಲಿಯಾಗುವದಿದ್ದರೆ ಡಿಸೆಂಬರ ೩೦ ರಿಂದ ಫೆಬ್ರುವರಿ ೧೫ರ ವರೆಗೆ ಮತ್ತು ಜುಲೈ ೧ ರಿಂದ ಅಗಸ್ಟ ೧೮ ರವರೆಗೆ ಆದರೆ ಒಳ್ಳೇ ಸುಖ ಸೌಕರ್ಯಗಳ ಸ್ಥಳಕ್ಕೆ ಆಗುವದು. ಆದರೆ ಫೆಬ್ರುವರಿ ೧೫ರಿಂದ ಮಾರ್ಚ ೩೦ರ ವರೆಗೆ ಬದಲಿ ಆದರೆ ಬಹಳ ಅನನುಕೂಲ ಸ್ಥಳಕ್ಕೆ ಆಗುವದು. ಹೊಸದಾಗಿ ಧಂದೆ ಸುರು ಮಾಡುವವರಿಗೆ ಜನೆವರಿ ೧ರಿಂದ ಫೆಬ್ರುವರಿ ೧೪ ಮತ್ತು ಮೇ ೧೫ ರಿಂದ ಜುಲೈ ೧ ಈ ಅವಧಿಯು ಬಹಳ ಅನುಕೂಲವಿರುವದು. ಒಟ್ಟಾರೆ ಬೇಕಾದಷ್ಟು ಹಣ ಸಿಗುವದೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಆದರೆ ವೆಚ್ಚವೂ ಮಿತಿಮೀರಿ ಆಗಿ ನೀವು ಬಹಳ ಸಂಪುಷ್ಟಕ್ಕೆ ಬರುವಿರಿ. ಸಿಕ್ಕ ಸಿಕ್ಕವರು ಕೈಗಡ ಇಸಕೊಂಡು ಬಹಳ ತೊಂದರೆ ಕೊಡುವರು. ಮತ್ತು ನಿಮ್ಮ ಪತ್ತನ್ನು ಕಾಯ್ದುಕೊಳ್ಳಬೇಕಾದರೆ ಸಾಕುಬೇಕಾಗಿ ಹೋಗುವದು. ನೀವು ಸಾಮಾಜಿಕ ಜೀವನ ನಡಿಸುವವರಾಗಿದ್ದರೆ ನಿಮ್ಮಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳಿಂದ ಬಹಳ ತೊಂದರೆಯಾಗುವದು. ಒಟ್ಟಾರೆ ಈ ವರ್ಷ ಧಂದೆ ಮತ್ತು ಕೂಲಿಯವರಿಗೆ ಬೇಕಾದಷ್ಟು ಲಾಭವಾದರೂ ಒಂದಿಲ್ಲ ಒಂದು ಕಿಟಕಿಟ ಇದ್ದದ್ದೆ.

ದಾವೆ ಫಿರ್ಯಾದಿ ಇಲ್ಲವೆ ಸ್ಪರ್ಧೆಯ ಕೆಲಸಗಳಲ್ಲಿ ಮಾತ್ರ ಬಹಳ ಯಶಸ್ಸು ದೊರೆಯುವದು. ಫೆಬ್ರುವರಿ ೧೫ ರಿಂದ ಮಾರ್ಚ ೩೦ ಮತ್ತು ಮೇ ೧೫ ರಿಂದ ಜುಲೈ೧ ಈ ಅವಧಿಯಲ್ಲಿ ಸಾರಲ್ಪಡುವ ನಿರ್ಣಯಗಳನ್ನು ಬಿಟ್ಟರೆ ಉಳಿದ ಎಲ್ಲ ಕಾಲದಲ್ಲಿ ಹೇಳಲ್ಪಡುವ ನಿರ್ಣಯಗಳು ನಿಮಗೆ ಅನುಕೂಲವಾಗುವವೆನ್ನಲು ಅಡ್ಡಿ ಇಲ್ಲ.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಅವರಲ್ಲಿ ಅನೇಕರಿಗೆ ಗಂಡು ಕೂಸು ಹುಟ್ಟುವದು ನಿಶ್ಚಿತವಿದ್ದರೂ ಅಗಸ್ಟ ೧೮ ರೊಳಗಾಗಿ ಹಡೆಯುವವರಿಗೆ ಬಾಣಂತಿತನ ಬಹಳ ತೊಂದರೆಯದಾಗಿ ಪರಿಣಮಿಸುವದು. ಡಿಸೆಂಬರ ೧೮ ರಿಂದ ಜನೆವರಿ ೫, ಎಪ್ರಿಲ ೧೬ ರಿಂದ ಮೇ ೩ ಮತ್ತು ಅಗಸ್ಟ ೧೧ ರಿಂದ ೨೮ ಈ ಅವಧಿಯಲ್ಲಿ ಹುಟ್ಟುವ ಮಕ್ಕಳಿಗೆ ಕೂಡ ಸ್ವಲ್ಪ ತೊಂದರೆಯಾಗುವದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೨೨ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ಈ ಅವಧಿಯಲ್ಲಿ ಆದರೆ ಖಾತ್ರಿಯಿಂದ ಯಶಸ್ಸು ಸಿಗುವದು. ಮತ್ತು ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಯಾರ ಪರೀಕ್ಷೆಯಾಗುವದೋ ಅವರು ಬಹಳ ಅಭ್ಯಾಸ ಮಾಡಿದರೆ ಪಾಸಾಗಬಹುದೆಂದು ತಿಳಿಯತಕ್ಕದ್ದು.

# ಮಿಥುನ

ಈ ವರ್ಷ ಈ ರಾಶಿಯವರಿಗೆ ಪ್ರಾಪಂಚಿಕ ಸುಖ ಅತ್ಯಂತ ಅನುಕೂಲವಿರುವದು. ಅದರಂತೆ ಧಂದೆ ಮಾಡುವವರಿಗೆ, ಕೂಲಿಯವರಿಗೆ ಅತ್ಯಂತ ಸಂತೋಷ ಉಂಟಾಗುವದು.

ಈ ರಾಶಿಯು ಜನರ ಆರೋಗ್ಯ ಅಗಸ್ಟ ೧೮ರ ವರೆಗೆ ಸ್ವಲ್ಪ ಕೆಡುವದು. ನವ್ಹಂಬರ ೨೦ ರ ವರೆಗೆ ಮತ್ತು ಮತ್ತೆ ಜುಲೈ ೧ ರಿಂದ ಅಗಸ್ಟ೧೮ ರ ವರೆಗೆ ಎಷ್ಟೋ ಜನರ ಆರೋಗ್ಯ ಬಹಳ ಕೆಡುವದು. ಆದರೆ ಗಂಡಾಂತರದ ಅಂಜಿಕೆ ಸ್ವಲ್ಪವೂ ಇಲ್ಲ. ವಾತಪ್ರಕೃತಿಯವರಿಗೆ ಹೆಚ್ಚು ತೊಂದರೆಯಾಗುವದು. ಮಾನಸಿಕ ಸ್ಥಿತಿ ಬಹಳ ಚಮತ್ಕಾರಿಕವಾಗುವದು. ವಿಪರೀತ ಕುತರ್ಕಗಳನ್ನು ಮಾಡಹತ್ತಿ ಅದರಲ್ಲಿಯೇ ಗುಂಗಾಗುವದು. ಸರಳ ಮಾತು ಕೂಡ ತಪ್ಪೆನಿಸುವದು. ಸ್ವಭಾವದಲ್ಲಿ ಆಗ್ರಹ ಮತ್ತು ಸಂಶಯ ಪ್ರವೃತ್ತಿ ಹೆಚ್ಚುವದು. ಈ ರಾಶಿಯಲ್ಲಿ ಅಗಸ್ಟ ವರೆಗೆ ನಿತ್ಯವೂ ವಕ್ರಿಯಾಗಿರುವ ಕೇತುವು ಇರುವದರಿಂದ ಮತ್ತು ರಾಶಿಸ್ವಾಮಿಯಾದ ಬುಧನು ವರ್ಷಾರಂಭದಲ್ಲಿ ವಕ್ರಿ ಇರುವದರಿಂದ ಮೇಲೆ ಹೇಳಿದಂತೆ ಪರಿಣಾಮವಾಗುವದು.

ಉಳಿದ ವಿಷಯಗಳಲ್ಲಿ ಗೃಹಸುಖಕ್ಕೆ ಕೆಡಕು ಇರುವದಿಲ್ಲ, ತದ್‌ವಿರುದ್ಧವಾಗಿ ಡಿಸೆಂಬರ ೧೮ ರಿಂದ ಜನೆವರಿ ೫ ಮಾರ್ಚ ೧೮ ರಿಂದ ಮೇ ೩, ಜುಲೈ ೪ ರಿಂದ ೨೬ ಮತ್ತು ಅಗಸ್ಟ ೧೧ ರ ನಂತರ ದೇಹಸುಖ ಬಹಳ ಉತ್ತಮಗೊಳ್ಳುವದು. ಮೊದಲು ಪ್ರತಿಕೂಲರಾಗಿದ್ದ ಜನರು ಅಗಸ್ಟ೧೮ ರ ನಂತರ ಅಂಥ ಮಹತ್ವದ ಕಾರಣವಿಲ್ಲದೆ ಅನುಕೂಲರಾಗುವರು. ನೌಕರ ಚಾಕರರು ವ್ಯವಸ್ಥಿತ ರೀತಿಯಿಂದ ತಮ್ಮ ತಮ್ಮ ಕೆಲಸವನ್ನು ವೇಳೆಗೆ ಸರಿಯಾಗಿ ಮಾಡುವರು. ಡಿಸೆಂಬರ ೧ ರಿಂದ ೧೫, ಎಪ್ರಿಲ ೧೬ ರಿಂದ ಮೇ ೩ ಮತ್ತು ಅಗಸ್ಟ ೧೧ ರಿಂದ ೨೮ ಈ ಅವಧಿಯಲ್ಲಿ ವಾಹನಗಳು ಕೆಟ್ಟರೂ ಉಳಿದ ಸಮಯಗಳಲ್ಲಿ ಅವು ಬಹು ಚೆನ್ನಾಗಿ ನಡೆಯುವವು. ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ಅವಧಿಯಲ್ಲಿ ಸ್ಥಾವರ ಜಂಗಮ ಸಂಗ್ರಹವು ಸ್ವಲ್ಪಾದರೂ ಹೆಚ್ಚುವದೆಂಬಲ್ಲಿ ಸಂಶಯವಿಲ್ಲ.

ಅಗಸ್ಟ ೧೮ ರ ವರೆಗೆ ನಿಮಗೆ ಸ್ತ್ರೀ ಸುಖ ಅನುಕೂಲವಾಗಲಾರದು. ಫೆಬ್ರುವರಿ ೨೦ ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಮೇಲೆ ಹೇಳಿದ ತಾರೀಖಿನವರೆಗೆ ಹೆಂಡತಿಯ ಆರೋಗ್ಯದ ಬಗ್ಗೆ ತಕರಾರು ಇದ್ದದ್ದೇ. ಅಲ್ಲದೆ ನಿಮ್ಮ ನಿಮ್ಮಲ್ಲಿ ಕ್ಷುಲ್ಲಕ ಕಾರಣಗಳಿಗಾಗಿಯೂ ಮೇಲಿಂದ ಮೇಲೆ ಮತಭೇದ ಉಂಟಾಗಿ ಅನೇಕ ಸಲ ದೊಡ್ಡ ರಂಭಾಟವೇಳುವದು. ತನ್ನ ಮೇಲೆ ಪತಿಯ ಪ್ರೇಮ ಇರದೆ ಅವನು ಪರಸ್ತ್ರೀಯ ಮೋಹಜಾಲದಲ್ಲಿ ಬಿದ್ದಿರುವನೆಂದು ಅವಳಿಗೆ ದಟ್ಟವಾದ ಸಂಶಯುಬರುವದು. ಇತ್ತ ಗಂಡನಿಗಾದರೂ ಹೆಂಡತಿ ತನ್ನೊಡನೆ ಮೊದಲಿನಂತೆ ನಿರ್ಮಲ ಮನಸ್ಸಿನಿಂದ ನಡೆಯುವದಿಲ್ಲೆಂದೆನಿಸುವದು; ಇದರ ಕಾರಣ ಹುಡುಕಲು ಅವನು ತರ್ಕವಿತರ್ಕ ಮಾಡಹತ್ತುವನು. ಈ ಸಂಶಯಕಲ್ಲೋಲವು ಸಪ್ಟಂಬರ ೨೦ ರ ನಂತರ ಒಮ್ಮೆಲೆ ಮಾಯವಾಗಿ ಮೊದಲಿನಂತೆ ಇಬ್ಬರೂ ಒಮ್ಮನಸ್ಸಿನಿಂದ ವರ್ತಿಸಹತ್ತುವರು. ನಿಮ್ಮ ಮದುವೆ ಇನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಆಗುವ ಇಚ್ಛೆ ಇದ್ದರೆ ಖಾತ್ರಿಯಿಂದ ಆಗುವದು. ಆದರೆ ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ೧೦ ರಿಂದ ಸಪ್ಟಂಬರ ೨೦ ರ ವರೆಗೆ ಅದು ಒದಗಿಬಂದರೆ ಹೆಚ್ಚು ಪ್ರಯಾಸ ಮಾಡಬೇಕಾಗುವದು. ಅಥವಾ ಸಹಜವಾಗಿ ಕೂಡಿಬಂದರೂ ಸಮಾರಂಭದಲ್ಲಿ ಒಂದಿಲ್ಲೊಂದು ಅಡಚಣೆ ಬಂದು ಮುಹೂರ್ತ ಬದಲು ಮಾಡಬೇಕಾಗುವದು. ಆದರೂ ವಧೂವರರು ಅನುರೂಪ ದೊರೆಯುವರು. ಆದರೆ ಕೆಲವು ಚಾಡಿಖೋರರಿಂದ ನಿಮ್ಮ ಸ್ವಭಾವದ ಬಗ್ಗೆ ಬಗೆಬಗೆಯ ಸುದ್ದಿ ಹುಟ್ಟಿ ಬಹಳ ಗೊಂದಲ ಉಂಟಾಗುವದು. ಅತ್ತೇ ಮಾವನ ಮನೆಯವರು ನಿಮ್ಮ ಪರಿಸ್ಥಿತಿಯ ದೃಷ್ಟಿಯಿಂದ ಬಹಳ ಉಚ್ಚ ದರ್ಜೆಯವರು ಇರುವರು. ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಅದು ಮಾತ್ರ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಬಹಳ ಪ್ರಯತ್ನದಿಂದ ಕೂಡಿ ಬರುವದು. ಉಳಿದ ಕಾಲದಲ್ಲಿ ಮಾತ್ರ ಸುಲಭವಾಗಿ ಕೂಡಿ ಬರುವದಿಲ್ಲ. ಅಳಿಯ ಇಲ್ಲವೆ ಸೊಸೆ ಬಹಳ ಹುಷಾರಿದ್ದ ಬಗ್ಗೆ ಎಲ್ಲೆಡೆ ಪ್ರಶಂಸೆ ಮಾಡಲ್ಪಡುವದು. ಮಕ್ಕಳ ಉತ್ಕರ್ಷ ಅಗುವದು. ಆದರೆ ಅವರು ನಿಮ್ಮ ಗೂಡ ಮಾತ್ರ ಚೆನ್ನಾಗಿ ನಡೆಯುವದಿಲ್ಲ. ಅಪ್ರಿಯ ರೀತಿಯಿಂದ ವರ್ತಿಸುವರು. ಕೇಳಿದ ಪ್ರಶ್ನೆಗಳಿಗೆ ಕೂಡ ಸರಿಯಾಗಿ ಉತ್ತರ ಕೊಡುವದಿಲ್ಲ. ನಿಮಗೆ ಸಹಾಯ ಮಾಡುವದಂತೂ ದೂರ ಉಳಿಯಿತು. ಅದರಲ್ಲಿಯೂ ನವ್ಹಂಬರ ೩ ರ ವರೆಗೆ ಅನಂತರ ಜನೆವರಿ ೧ ರಿಂದ ೩೦, ಫೆಬ್ರುವರಿ ೨೬ ರಿಂದ ಮಾರ್ಚ ೨೬, ಜೂನ ೬ ರಿಂದ ಜುಲೈ ೧ ಮತ್ತು ಸಪ್ಟಂಬರ೧೨ ರಿಂದ ಅಕ್ಟೋಬರ ೫, ಈ ಅವಧಿಯಲ್ಲಿ ಮಕ್ಕಳು ಹೆಚ್ಚು ಕ್ಷೋಭೆಗೊಳಿಸುವರು.

ಧಂದೆಯವರಿಗೆ ಮತ್ತು ಕೂಲಿಕಾರರಿಗೆ ಈ ವರ್ಷ ಬಹಳ ಪ್ರಗತಿಯಾಗುವದು. ಅಂದಾಜಿಗಿಂತ ಬಹಳ ಹೆಚ್ಚು ದ್ರವ್ಯಲಾಭವಾಗುವದು. ಮತ್ತು ಸಂಗ್ರಹ, ಮತ್ತು ವಿನಿಯೋಗವು ಯೋಗ್ಯ ಅಪೇಕ್ಷಿತ ವಿಷಯುಗಳಲ್ಲಿಯೇ ಅಗುವದು. ವರ್ಷಾರಂಭದಲ್ಲಿ ಭಾಗ್ಯೇಶ ಶನಿ, ಕರ್ಮೇಶ ಗುರು, ಮತ್ತು ಲಾಭೇಶ ಮಂಗಳ ಈ ಮೂವರೂ ತಮ್ಮ ತಮ್ಮ ಉಚ್ಚರಾಶಿಯಲ್ಲಿರುವದರಿಂದ ಬಹಳ ಭಾಗ್ಯೋದಯವನ್ನುಂಟುಮಾಡುವರು. ಕರ್ಮಧರ್ಮ ಸಂಯೋಗದಿಂದ ಯಾರ ಲಗ್ನ ಮತ್ತು ರಾಶಿಗೆ ಈ ಮೂವರಲ್ಲಿ ಒಬ್ಬರ ಮಹಾದಶಾ, ಅಥವಾ ಅಂತರದಶಾ, ಇದೇ ವೇಳೆಗೆ ಸುರು ಆಗಿದ್ದರೆ ಅವರ ಭಾಗ್ಯ ಖಾತ್ರಿಯಿಂದ ಇಮ್ಮಡಿಯಾಗುವದು. ಸ್ವತಂತ್ರ ರೀತಿಯಿಂದ ಉದ್ಯೋಗ ಮಾಡುವವರ ಉತ್ಕರ್ಷ ದಿನದಿನಕ್ಕೂ ಹೆಚ್ಚುವದು, ಲಾಭ ಹೆಚ್ಚಿ ಎಲ್ಲರ ಕಣ್ಣಿಗೂ ಕಾಣುವಂತೆ ಸಂಪತ್ತು ಹೆಚ್ಚುವದು. ಆದರಲ್ಲಿಯೂ ಫೆಬ್ರುವರಿ ೧೫ ರ ವರೆಗೆ, ಮತ್ತು ಮೇ ೧೫ ರಿಂದ ಅಕ್ಟೋಬರ ೪ ರ ವರೆಗೆ ಹೆಚ್ಚು ಲಾಭವುಂಟಾಗುವದು. ಎಷ್ಟೋ ಜನರಿಗೆ ನವ್ಹಂಬರ ೨೦ರ ವರೆಗೆ ಇಲ್ಲವೆ, ಜುಲೈ ೧ ರಿಂದ ಅಗಸ್ಟ ೧೮ ರ ವರೆಗೆ ಲಾಟ್ರಿ, ಸಟ್ಟಾ, ಚಕ್ರಬಂಧಸ್ಪರ್ಧೆ ಇಲ್ಲವೆ ಇಂತಹವೆ ಅನ್ಯ ಮಾರ್ಗಗಳಿಂದ ಗುಪ್ತ ಅಥವಾ ಅಕಸ್ಮಾತ್ ಧನ ಹೆಚ್ಚಿಗೆ ದೊರೆಯುವದು. ಫೆಬ್ರುವರಿ ೨೨ ರಿಂದ, ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ರ ವರೆಗೆ ಪ್ರತಿಷ್ಠೆ, ಪತ್ತು, ವರ್ಚಸ್ಸು, ಅಧಿಕಾರ ನಿಮಗೆ ಆಶ್ಚರ್ಯವೆನಿಸುವಂತೆ ಹೆಚ್ಚುವವು. ಮಾರ್ಚ ೨ ರಿಂದ ಜುಲೈ ೧೫ರ ವರೆಗೆ ಕೀರ್ತಿ ಹೆಚ್ಚುವಂತಹ ಸಂಗತಿಗಳು ಸಂಭವಿಸುವವು. ತಪ್ಪುಕೆಲಸ ಮಾಡಿದರೂ ಹಾನಿಯಾಗದೆ ಲಾಭವೆ ಆಗುವದು. ನೌಕರರಿಗೆ ಒಮ್ಮೆಲೆ ಬಡತಿಯಾಗುವದು. ಬದಲಿ ಆಗುವದಿದ್ದರೆ ಯೋಗ್ಯ ಸ್ಥಳಕ್ಕೆ ಆಗಿ ಸಂತೋಷ ಹೆಚ್ಚುವದು. ಮಿತ್ರ ಸುಖ ಚೆನ್ನಾಗಿ ದೊರೆಯುವದು. ಆದರೆ ಅವ

ರಲ್ಲಿ ಒಬ್ಬನು ಫೆಬ್ರುವರಿ ೧೫ ರಿಂದ ಮಾರ್ಚ ೩೦ ಇಲ್ಲವೆ, ಜುಲೈ ೧ ರಿಂದ ಅಗಸ್ಟ ೧೮ ಈ ಅವಧಿಯಲ್ಲಿ ಮರಣಹೊಂದುವ ಸಂಭವನಿದೆ. ವರಿಷ್ಠರ ಮರ್ಜಿ ನಿಮಗೆ ದೊರೆತರೂ ಅವರಲ್ಲಿ ಒಬ್ಬನು ಆಕಸ್ಮಾತ್ತಾಗಿ ನಿಮಗೆ ಮೋಸಮಾಡುವ ಅಂಜಿಕೆ ಇದೆ.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಶತ್ರುಗಳ ಜೋರು ಹೆಚ್ಚುವದು. ಅವರು ಬಗೆಬಗೆಯಿಂದ ತ್ರಾಸ ಕೊಡುವರು. ಆದರೆ ಆಗಷ್ಟ ೧೮ ರ ನಂತರ ಶತ್ರುಗಳು ಬಹಳ ವಿನಮ್ರರಾಗುವರು. ಅನಂತರ ನಿಮ್ಮ ಪರವಾಗಿಯೇ ಎಲ್ಲ ನಿರ್ಣಯಗಳಾಗುವವು. ನಿಮ್ಮನ್ನು ವಿರೋಧಿಸುವವರಲ್ಲಿ ಒಬ್ಬ ಹೆಣ್ಣುಮಗಳೂ ಇರುವಳು, ಒಬ್ಬ ಸ್ತ್ರೀಯಳ ವಿನಯಭಂಗಮಾಡಿದ ಅಪವಾದವೂ ನಿಮ್ಮ ಮೇಲೆ ಬರುವದು.

ಈ ರಾಶಿಯ ಸ್ತ್ರೀಯರು ಪ್ರಸೂತರಾಗುವವರಿದ್ದರೆ ಅವರು ಫೆಬ್ರುವರಿ ೨೨ ರಿಂದ ಎಪ್ರಿಲ ೧೦, ಮತ್ತು ಮೇ ೧೩ ರಿಂದ ಜೂನ ೬, ಜುಲೈ ೧ ರಿಂದ ೨೬, ಅಗಷ್ಟ ೧೯ ರಿಂದ ಸಪ್ಟಂಬರ ೧೨ ಮತ್ತು ಅಕ್ಟೋಬರ ೫ ರಿಂದ ೩೧, ಈ ಅವಧಿಯಲ್ಲಿ ಹಡೆದರೆ ಅವರು ಸುಲಭ ರೀತಿಯಿಂದ ಪ್ರಸವಹೊಂದಿ ಬಹುಶಃ ಗಂಡು ಹಡೆಯುವರು. ಯಾವದೇ ವೇಳೆಗೆ ಹಡೆದರೂ ಮಕ್ಕಳು ಮಾತ್ರ ಬಹಳ ಅಶಕ್ತರಿರುವರು.

ಯಾವ ವಿದ್ಯಾರ್ಥಿಗಳು ಫೆಬ್ರುವರಿ ೨೨ ರಿಂದ ಎಪ್ರಿಲ ೧೦, ಮೇ ೧೨ ರಿಂದ ಜೂನ ೬, ಅಗಷ್ಟ ೧೯ ರಿಂದ ಸಪ್ಟಂಬರ ೧೨, ಇಲ್ಲವೆ ಅಕ್ಟೋಬರ ೫ ರಿಂದ ೩೧, ಈ ಅವಧಿಯಲ್ಲಿ ಪರೀಕ್ಷೆಗೆ ಕೂಡುವರೋ ಅವರು ನಿಶ್ಚಯವಾಗಿ ಯಶಸ್ವಿಯಾಗುವರು.

ಆಸ್ಪದವುಂಟಾಗುವದು. ಬಂಧುವರ್ಗದವರು ಮೊದಲಿಗಿಂತ ಹೆಚ್ಚು ಕಾಳಜಿ ತೆಗೆದುಕೊಳ್ಳಹತ್ತುವರು ಮತ್ತು ಮಿತ್ರರೂ ಕಲ್ಯಾಣವನ್ನು ಬಯಸುವರು. ಆದರೆ ಅಗಷ್ಟ ೧೮ ರ ನಂತರ ಒಬ್ಬಿಬ್ಬ ಮಿತ್ರರೊಡನೆ ನಡೆದ ಚಾಷ್ಟಿ ವಿನೋದದ ಪರಿಣಾಮ ವಿಪರ್ಯಸ್ತಕ್ಕೆ ಮುಟ್ಟಿ ಬಹಳ ಕೆಡುವದು. ಅದರಲ್ಲಿಯೂ ಜನೆವರಿ ೩೦ ರ ವರೆಗೆ, ಅನಂತರ ಫೆಬ್ರುವರಿ ೨೬ ರಿಂದ ಮಾರ್ಚ ೨೬, ಮೇ ೧೩ ರಿಂದ ಜೂನ ೬, ಜುಲೈ ೨೬ ರಿಂದ ಸಪ್ಟಂಬರ ೧೨ ಮತ್ತು ಅಕ್ಟೋಬರ ೫ ರಿಂದ ೩೧, ಈ ಕಾಲ ಗೃಹಸುಖಕ್ಕೆ ಬಹಳ ಅನುಕೂಲ.

## ಕರ್ಕ

೪ ನೇ ಶನಿ ಮತ್ತು ಕೆಲಕಾಲ ಇರುವ ೧೨ ನೇ ಗುರುವಿನಿಂದ ಈ ವರ್ಷ ತಮ್ಮದು ಹೇಗೆ ನಡೆಯುವದೆಂದು ಯಾರಾದರೂ ಚಿಂತೆಗೊಳಗಾಗಿದ್ದರೆ ಅದು ವ್ಯರ್ಥ. ಏಕೆಂದರೆ ಪ್ರಾಪಂಚಿಕವೆ ಆಗಿರಲಿ, ಔದ್ಯೋಗಿಕವೇ ಇರಲಿ, ಹದಿನಾರಾಣೆಗಳಲ್ಲಿ ಹದಿನಾಲ್ಕಾಣೆಯಾದರೂ ನಿಮಗೆ ಅನುಕೂಲವಿರುವದೆಂಬಲ್ಲಿ ಸ್ವಲ್ಪೂ ಸಂಶಯವಿಲ್ಲ.

ಈ ರಾಶಿಯ ಜನರ ಆರೋಗ್ಯ ನಿರೋಗಿಯಿದ್ದರೂ ಅವರಿಗೆ ಮಾತ್ರ ತಮಗೇನೋ ಒಂದು ಭಯಂಕರ ವಿಕಾರವಾಗಿದೆ ಎಂಬ ಅಂಜಿಕೆ ಸದಾ ಇದ್ದುದೆ. ಆದರೆ ಕೆಲಜನರಿಗೆ ಫೆಬ್ರುವರಿ ೨೨ರಿಂದ ಎಪ್ರಿಲ ೧೦, ಮೇ ೧೫ ರಿಂದ ಜುಲೈ ೧, ಈ ಮಧ್ಯಂತರ ಅವಧಿಯಲ್ಲಿ ಸ್ವಲ್ಪ ಕಾಯಿಲೆಯೂ ಆಗುವದು. ಏನಾದರೂ ಆಗುವದೆಂಬ ಕಲ್ಪನೆಯಿಂದ ಮನಸ್ಸು ವಿಪರೀತ ಅಸ್ವಸ್ಥವಾಗುವದು. ಅದರ ನಿವಾರಣೋಪಾಯವು ಇಂದು ಒಂದಾಗಿದ್ದರೆ ನಾಳೆ ಮತ್ತೊಂದು, ನಾಡದು ಮುಗುದೊಂದು ಹೀಗೆ ಒಂದೇ ಸವನೆ ಔಷಧ ನಡೆಯುವದು. ಅದರಂತೆ ಇಂದು ಈ ದೇವರಿಗೆ, ನಾಳೆ ಆ ದೇವಿಗೆ ಉಪಾಸನೆ, ಮಂತ್ರ ತಂತ್ರಾದಿ ದೈವೀ ಉಪಚಾರ ಮಾಡುವ ನಾದವು ಬಹಳ ಹತ್ತುವದು. ಎಪ್ರಿಲ ೧೦ ರಿಂದ ಆಗಷ್ಟ ೧೮ ರವರೆಗೆ ಅನೇಕರ ಆರೋಗ್ಯ ಉತ್ತಮ ಉಳಿದು ತೂಕವೂ ಹೆಚ್ಚಿದ ಅನುಭವವುಂಟಾಗುವದು.

ಉಳಿದ ವಿಷಯಗಳಲ್ಲಿ ದೇಹಸುಖ ಬಹಳ ಅನುಕೂಲ ಉಳಿದು, ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೧೦ ರ ನಂತರ ಮನೋತ್ಸಾಹ ಹೆಚ್ಚುವಂತಹ ಅನೇಕ ಘಟನೆಗಳು ಸಂಭವಿಸುವವು. ಮೊದಲು ಕಠಿಣನೆನಿಸುತ್ತಿದ್ದ ಕೆಲಸವು ಕೂಡ ಅಲ್ಪಾಯಾಸದಿಂದ ಸಾಧ್ಯವಾಗುವದು.

ಮನೆಯಲ್ಲಿಯ ಜನರು ಪ್ರೇಮ ಮತ್ತು ಆದರ ಮಾಡುವರು. ರೋಖ ಹಣ ಕಡಮೆಯಿದ್ದರೂ ವಸ್ತುಗಳ ಸಂಗ್ರಹ ಹೆಚ್ಚುವದು. ಅನೇಕರು ಮನೆ ಕೊಳ್ಳುವರು, ಕೆಲವರು ಹೊಲ ಕೊಳ್ಳುವರು, ಇನ್ನೂ ಕೆಲವರು ಸುಂದರ ಮತ್ತು ಭಾರಿ ಬೆಲೆಯ ವಸ್ತ್ರಾಲಂಕಾರಗಳನ್ನು ಕೊಳ್ಳುವರು. ಮತ್ತೆ ಕೆಲವರು ಹೊಸ ಹೊಸ ವಾಹನಗಳನ್ನು ಕೊಂಡು ಚೈನಿ ಮಾಡುವರು. ಆದರೆ ನಿಮ್ಮ ವಿಶ್ವಾಸದಲ್ಲಿದ್ದ ಕೆಲ ನೋಕರರು ಮಾತ್ರ ಮೋಸ ಮಾಡುವರು. ಇಲ್ಲವೆ ನೋಕರಿ ಬಿಟ್ಟು ಹೋಗುವರು. ಮನೋರಂಜನದ ಯೋಗ ಮೇಲಿಂದ ಮೇಲೆ ಬಂದು ಪ್ರಸಿದ್ಧ ಕಲಾಕುಶಲರ ಸ್ನೇಹವುಂಟಾಗುವದು. ಸ್ಥಾವರ ಉತ್ಪನ್ನ ಉತ್ತಮ ಬರುವದು. ಮತ್ತು ವಿಶೇಷ ಜೊಬ್ಬಾಟವಿಲ್ಲದೆ ದೊರೆಯುವದು. ನೆರೆಹೊರೆಯವರು ಎಪ್ರಿಲ ೧೦ ರಿಂದ ಅತ್ಯಂತ ಪ್ರೇಮದಿಂದ ವರ್ತಿಸಹತ್ತುವರು. ಅದರಿಂದ ಒಮ್ಮೊಮ್ಮೆ ಸಂಶಯಕ್ಕೆ ಕೂಡ

ಗಂಡಹೆಂಡಿರಿಬ್ಬರಲ್ಲಿ ಕೆಲ ಸಮಯ ತಿಕ್ಕಾಟ ಇಲ್ಲವೆ ಆಗಂತುಕ ಕಾರಣಗಳಿಂದ ಪರಸ್ಪರ ಸಿಟ್ಟಿಗೇಳುವ ಪ್ರಸಂಗ ಬಂದರೂ ಒಟ್ಟಾರೆ ವರ್ಷವೆಲ್ಲ ಭಾರ್ಯೇಶಶನಿ ಸುಖ ಸ್ಥಾನದಲ್ಲಿ ಮತ್ತು ಉಚ್ಚನಿರುವದರಿಂದ ಸ್ತ್ರೀ ಸುಖ ಬಹಳ ಅನುಕೂಲ ದೊರೆಯುವದು. ಅವಳ ಆರೋಗ್ಯವೂ ಚನ್ನಾಗಿ ಉಳಿಯುವದು. ಆದರೆ ಡಿಸೆಂಬರ ೩೧ರೊಳಗಾಗಿ ಅಪಘಾತ ಇಲ್ಲವೆ ವಾತ ವಿಕಾರದ ಅಂಜಿಕೆ ಅವಳಿಗಿದೆ. ಅನೇಕ ವಿಷಯಗಳಲ್ಲಿ ನಿಮ್ಮಿಬ್ಬರದು ತಂತೋತಂತ ಕೂಡುವದು. ಮತ್ತು ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಅವಳು ಬಹಳ ಸುಶೀಲಳಿರುವಳೆಂಬ ಪ್ರತೀತಿ ಬಂದು ನಿಮ್ಮಷ್ಟಕ್ಕೆ ನೀವು ಧನ್ಯವಾದ ಮಾಡಿಕೊಳ್ಳುವಿರಿ. ಆದರೆ ನಿಮ್ಮ ಲಗ್ನ ಇನ್ನೂ ಆಗಿದ್ದಿಲ್ಲವಾದರೆ ಮತ್ತು ಈ ವರ್ಷ ಮಾಡಿಕೊಳ್ಳುವ ಇಚ್ಛೆಯಿದ್ದರೆ ಫೆಬ್ರುವರಿ ೨೨ ರ ವರೆಗೆ ಇಲ್ಲವೆ ಎಪ್ರಿಲ ೧೦ ರಿಂದ ಸಪ್ಟೆಂಬರ ೨೦ ರ ವರೆಗೆ ಖಾತ್ರಿಯಿಂದ ಲಗ್ನವಾಗುವದು. ವಧುವಿಗೆ ಉತ್ತಮ ವರ, ವರನಿಗೆ ವಧು ಮನಸ್ಸು ಹುಚ್ಚು ಹಿಡಿಯುವಷ್ಟು ಸುಂದರ ದೊರೆಯುವಳು. ಅದರಂತೆ ನಿಮ್ಮ ಮಾವ ಇಲ್ಲವೆ ಅತ್ತೆಯ ಮನೆಯವರೂ ನಿಮ್ಮ ದೃಷ್ಟಿಯಿಂದ ಬಹಳ ಶ್ರೀಮಂತರು ದೊರೆಯುವರು. ನಿಮ್ಮ ಮಕ್ಕಳಲ್ಲಿ ಯಾರದಾದರೂ ಲಗ್ನ ಮಾಡುವದಿದ್ದರೆ ಅದು ಫೆಬ್ರುವರಿ ೨೨ ರ

ವರೆಗೆ ಇಲ್ಲವೆ ಏಪ್ರಿಲ ೧೦ ರ ನಂತರ ಅಲ್ಪಾಯಾಸ ದಿಂದ ನಡೆಯುವದು. ಆಗಸ್ಟ ೧೮ ರ ನಂತರ ಮದುವೆ ಆದರೆ ಪ್ರತ್ಯಕ್ಷ ಲಗ್ನ ಸಮಾರಂಭದಲ್ಲಿ ಯಾವದೊಂದು ಅಪರಿಹಾರ್ಯ ಅಡಚಣೆ ಬಂದು, ಮುಹೂರ್ತವು ಕದಾಚಿತ್ ತಪ್ಪಬಹುದು. ಅಳಿಯ ಇಲ್ಲವೆ ಸೊಸೆ ಬಹಳ ಸುಂದರ ಇರುವರು. ನಿಮಗೆ ಮಕ್ಕಳಿಂದ ಒಳ್ಳೇ ಸುಖ ಸಿಕ್ಕುವದು. ನಿಮ್ಮ ಪ್ರತಿಯೊಂದು ಮಾತು ಯಶಸ್ವಿಯಾಗುವದು· ಅವರವರ ಯೋಗ್ಯತೆಯಂತೆ ಉತ್ಕರ್ಷವೂ ಆಗುವದು. ಆದರೆ ಆಗಸ್ಟ ೧೮ ರ ನಂತರ ಅವ ರಲ್ಲಿ ಒಬ್ಬರು ೧೦-೧೫ ದಿನ ಕಾಯಿಲೆ ಬೀಳುವ ಸಂಭವವಿದೆ. ಧಂದೆಯವರು ಉದ್ಯೋಗಸ್ಥರು ಕೂಲಿಕಾರರಿಗೆ ಫೆಬ್ರುವರಿ ೨೨ ರಿಂದ ಏಪ್ರಿಲ ೧೦ ರ ವರೆಗೆ ಸ್ವಲ್ಪ ಕಷ್ಟ ಮತ್ತು ಹಾನಿ ಯಾದರೂ ಉಳಿದ ಸಮಯದಲ್ಲಿ ಅದು ಬಹಳ ಬೆಳೆದು ವಿಪುಲ ಲಾಭವಾಗುವದು. ವರ್ಷಾರಂಭ ದಲ್ಲಿ ಭಾಗ್ಯೇಶ ಗುರು ಮತ್ತು ಕರ್ಮೇಶ ಮಂಗಳ ತಮ್ಮ ತಮ್ಮ ಉಚ್ಚ ರಾಶಿಯಲ್ಲಿ ಇರುವರು. ಲಾಭೇಶ ಶುಕ್ರ ಪಂಚಮದಲ್ಲಿರುವದರಿಂದ ಈ ಸ್ಥಾನದ ಮೇಲೆ ಅವನ ಪೂರ್ಣ ದೃಷ್ಟಿಯಿದೆ. ಈ ಅಸಾಮಾನ್ಯ ಶುಭ ಯೋಗದ ಪರಿಣಾಮದಿಂದ ಅಂದಾಜಿಗಿಂತ ನೂರ್ಮಡಿ ಲಾಭವಾಗದೆ ಇರದು. ಮಂಗಳ ಮತ್ತು ಗುರು ಇವರಾದರೂ ಅನುಕ್ರಮ ವಾಗಿ ಕರ್ಮ ಮತ್ತು ಭಾಗ್ಯಸ್ಥಾನದಲ್ಲಿರುವ ಮೇಷ ಮತ್ತು ಮೀನ ಈ ತಮ್ಮ ತಮ್ಮ ರಾಶಿಗಳನ್ನು ಪೂರ್ಣ ದೃಷ್ಟಿಯಿಂದ ನೋಡುವರು. ಅದರಿಂದಲೂ ಸಾಮಾಜಿಕ ವ್ಯಾವಹಾರಿಕ ಮತ್ತು ರಾಜಕೀಯ ಪ್ರತಿಷ್ಠೆ, ದರ್ಜೆ ಬಹಳ ಹೆಚ್ಚುವದು ಮತ್ತು ಕೀರ್ತಿ ದುಂದುಭಿಯು ಜಗತ್ತಿನಲ್ಲಿ ಮೊಳಗುವದು. ಇದ ರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಸ್ವತಂತ್ರ ಧಂದೆ ಇಲ್ಲವೆ ವ್ಯಾಪಾರ ಮಾಡುವವರಿಗೆ ನವ್ಹೆಂಬರ ೨೦ರ ವರೆಗೆ, ಅನಂತರ ಜನೆವರಿ ೧ರಿಂದ ಫೆಬ್ರುವರಿ ೧೫ ಮತ್ತು ಜುಲೈ ಒಂದರ ನಂತರದ ಕಾಲ ಕಲ್ಪನಾ ತೀತ ಲಾಭದ, ಲೌಕಿಕದ ಮತ್ತು ಪ್ರಭುತ್ವದ್ದಾಗಿ ಪರಿಣಮಿಸುವದು. ನೌಕರರಿಗೆ ಫೆಬ್ರುವರಿ ೧೫ ರಿಂದ ಮಾರ್ಚ ೩೦ ರ ವರೆಗೆ ವರಿಷ್ಠರ ಶಿಫಾರಸಿ ನಿಂದ ಭಾವೀ ಭಾಗ್ಯೋದಯದ ಬಗ್ಗೆ ಮನವರಿಕೆ ಯಾಗುವದು ಮತ್ತು ಅದರ ನಿಜ ಪ್ರತೀತಿಯು ಜುಲೈ ೧ ರಿಂದ ಅಕ್ಟೋಬರ ೪ ರ ವರೆಗೆ ಖಾತ್ರಿ ಯಿಂದ ಆಗುವದು. ಏಪ್ರಿಲ ೧೦ ರಿಂದ ಸಪ್ಟೆಂ ಬರ ೨೦ ರೊಳಗಾಗಿ ಮೇಲಿನ ಗ್ರೇಡು ಖಾತ್ರಿ ಯಿಂದ ಸಿಗುವದು. ಬದಲಿಯ ಶಾಖೆಯಿದ್ದರೆ ಜುಲೈ ೧ ರಿಂದ ಆಗಸ್ಟ ೧೮ ಇಲ್ಲವೆ ಅಕ್ಟೋಬರ ೪ ರ ನಂತರ ಅಪೇಕ್ಷೆ ಮೀರಿ ಸುಖ ಸೌಕರ್ಯದ ಸ್ಥಳಕ್ಕೆ ವರ್ಗ ಆಗುವದು.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆ ಯಲ್ಲಿಯೂ ಈ ವರ್ಷ ಆಗಸ್ಟ ೧೫ ರ ವರೆಗೆ ಪ್ರತಿಪಕ್ಷಿಗಳನ್ನು ಹಣ್ಣು ಮಾಡಿ ಅವರ ಮೇಲೆ ವಿಜಯ ಸಂಪಾದಿಸುವಿರಿ. ಅನಂತರ ಮಾತ್ರ ಅವರ ಚಟುವಟಿಕೆಗಳು ನಿಮಗೆ ತೊಂದರೆ ಕೊಡು ವವು. ನಿಮ್ಮವರೆನ್ನುವ ಕೆಲವರು ಸ್ವಾರ್ಥಕ್ಕಾಗಿ ಫಿತುರರಾಗುವ ದೃಶ್ಯವೂ ಕಾಣುವದು. ನಿಮ್ಮ ವರ್ತನೆಯೂ ಪ್ರತಿಪಕ್ಷಿಯೊಡನೆ ಬಹಳ ನಿಷ್ಠುರ ಮತ್ತು ಸೌಜನ್ಯಕ್ಕೆ ಕುಂದು ತರುವಂತಹದು. ಬೇ- ಕೆಂತಲೇ ಇಲ್ಲವೆ ತಪ್ಪಿನಿಂದ ಹಾಗೆ ಅನಿಸುವದು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯು- ವವರಿದ್ದರೆ ಆಗಸ್ಟ ೧೫ ರ ವರೆಗೆ ಅವರು ಸುಖ- ಪ್ರಸವಹೊಂದುವರು. ಅನೇಕರಿಗೆ ಕನ್ಯಾರತ್ನ ಹು- ಟ್ಟುವ ಯೋಗ ಪ್ರಬಲವಿದೆ. ಹುಟ್ಟುವ ಮಕ್ಕಳು ಬಹಳ ಸದೃಢ ಮತ್ತು ಮನಮೋಹಕ ಇರುವರು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೨೨ ರ ವರೆಗೆ, ಇಲ್ಲವೆ ಏಪ್ರಿಲ ೧೦ ರ ನಂತರ ಆಗುವ ದಿದೆಯೊ ಅವರು ಖಾತ್ರಿಯಿಂದ ಪಾಸಾಗುವರು. ಇಷ್ಟೇ ಅಲ್ಲ, ಆದರೆ ಏಪ್ರಿಲ ೧೦ ರಿಂದ ಮೇ ೧೫, ಮತ್ತು ಜುಲೈ ೧ ರಿಂದ ಆಗಸ್ಟ ೧೮ ಈ ಅವಧಿ ಯಲ್ಲಿ ಯಾರ ಪರೀಕ್ಷೆಯಾಗುವದೊ ಅವರು ಸಾವಿರಪಾಲಿಗೆ ಉಚ್ಚಶ್ರೇಣಿಯಲ್ಲಿ ಬರುವರು.

## ಸಿಂಹ

ಈ ವರ್ಷ ಈ ರಾಶಿಯವರಿಗೆ ಪ್ರಾಪಂಚಿಕ ಸುಖಕ್ಕೆ ಮತ್ತು ಆರ್ಥಿಕ ಲಾಭಕ್ಕೆ ಅಲ್ಪ- ಸ್ವಲ್ಪ ತೊಂದರೆಯಿದ್ದರೂ ಲೌಕಿಕ ಸುಖಕ್ಕೆ ಬಹಳ ಅನುಕೂಲವಿದೆ. ಸಂಕಟ ಮತ್ತು ಶತ್ರುಸಂಹಾರಕ್ಕೆ ಅತ್ಯಂತ ಅನುಕೂಲ ವಿದ್ದದ್ದೂ ನಿದರ್ಶನಕ್ಕೆ ಬರುವದು ನಿಶ್ಚಿತ.

ಈ ರಾಶಿಯವರ ಆರೋಗ್ಯದ ಬಗ್ಗೆ ಚಿಂತೆ ಮಾಡಬೇಕಿಲ್ಲ, ಅದು ಬಹಳ ಉತ್ತಮವಿರುವದು. ಆದರೆ ರಕ್ತದ ಒತ್ತಡ ಇಲ್ಲವೆ ಸಂಗ್ರಹಣಿಯ ವಿಕಾರವಿದ್ದವರುಮಾತ್ರ ಜನೆವರಿ ೧ ರಿಂದ ಫೆಬ್ರು ವರಿ ೧೫, ಮತ್ತು ಅಕ್ಟೋಬರ ೪ ರಿಂದ ಮುಂದಿನ ಅವಧಿಯಲ್ಲಿ ಸ್ವಲ್ಪ ಜಪ್ಪಿಸಿ ನಡೆಯಬೇಕು, ಏನೇ ಆದರೂ ಗಂಡಾಂತರದ ಅಂಜಿಕೆ ಯಿಲ್ಲ.

ಉಳಿದ ವಿಷಯಗಳಲ್ಲಿ ಸಿಕ್ಕುವ ದೇಹಸುಖಕ್ಕೆ ಫೆಬ್ರುವರಿ ೨೨, ಮತ್ತು ಮುಂದೆ ಏಪ್ರಿಲ ೧೦ರಿಂದ ಸಪ್ಟೆಂಬರ ೨೦ರ ವರೆಗೆ ಅಲ್ಪ ಸ್ವಲ್ಪ ಕಷ್ಟವಾದರೂ ಕೊನೆಗೆ ಸ್ವಲ್ಪಾದರೂ ಸಮಾಧಾನ ಕೊಡಲಿಕ್ಕೆ ೩ ನೇ ಶನಿ ಸಮರ್ಥನಿರುವನು. ಕುಟುಂಬದ- ಲ್ಲಿಯ ಪ್ರತಿ ಒಬ್ಬನ ಮನಸ್ಸಿನಲ್ಲಿ ನಾವು ಅವನಿಗೆ ಅಹಿತ ಮಾಡುತ್ತಿರುವೆನೆಂಬ ದೊಡ್ಡ ತಪ್ಪು ತಿಳಿವ ಳಿಕೆ ಬಹಳ ದಿನಗಳ ವರೆಗೆ ಅಂದರೆ ಸಪ್ಟೆಂಬರ ೨೦ ರ ವರೆಗೆ ಇದ್ದದ್ದು ಪ್ರತ್ಯಯಕ್ಕೆ ಬರುವದು. ಆದರೆ ಮುಂದೆ ಮೂರು ನಾಲ್ಕು ದಿನಗಳಲ್ಲಿ ಯಾವ ದೊಂದು ಚಮತ್ಕಾರಿಕ ಪ್ರಸಂಗದಲ್ಲಿ ನಿಮ್ಮ ಅಂತಃ ಕರಣದ ಬಗ್ಗೆ ಪೂರ್ಣ ಖಾತ್ರಿಯಾಗಿ ಆ ಭ್ರಮದ ನಿರಸನವಾಗುವದು. ಕೌಟುಂಬಿಕ ಉತ್ಕರ್ಷ ಮತ್ತು ಅಭಿವೃದ್ಧಿಯ ಸಂಗತಿಗಳು ಒಂದರಹಿಂದೆ ಒಂದು ಸಂಭವಿಸುವವು, ಮತ್ತು ಕಠಿಣ ಪ್ರಸಂಗ ದಲ್ಲಿ ಯಾವದೊಂದು ದೈವೀ ಚಮತ್ಕಾರದ ಸಹಾ ಯದಿಂದ ಪಾರಾಗುವದು ಪ್ರತ್ಯಯಕ್ಕೆ ಬರುವದು. ಬಂಧುಗಳಲ್ಲಿ ನಿದಾನ ಒಬ್ಬರಾದರೂ ದೊಡ್ಡ ವೈಭವ ಹೊಂದುವರು. ಮತ್ತು ಅದು ನಿಮಗೆ ಅನುಕೂಲವಾಗಿ ಪರಿಣಮಿಸುವದು. ಆಪ್ತರಲ್ಲಿ ಕೆಲವರು ಬಹಳ ಸೇಡಿನ ಬುದ್ಧಿಯಿಂದ ವರ್ತಿಸು- ವರು. ನೌಕರ ಚಾಕರರು ಒಳ್ಳೆ ಪ್ರೀತಿಯಿಂದ ವರ್ತಿಸುವರು. ಸ್ವತಃ ನಿಮ್ಮದು ಇದ್ದರೂ ಸರಿ, ಇಲ್ಲದಿದ್ದರೂ ಸರಿ, ಉತ್ತಮ ವಾಹನಸುಖ ದೊರೆ ಯುವದು. ಸ್ಥಾವರ, ಜಂಗಮ ಸಂಗ್ರಹ ಹೆಚ್ಚು ವ ಯೋಗವಿಲ್ಲದಿದ್ದರೂ ಇದ್ದದರಲ್ಲಿಯೇ ಹೊಸ ಹೊಸ ಸುಧಾರಣೆ ಸಪ್ಟೆಂಬರ ೨೦ ರ ನಂತರ ನಿಶ್ಚ ಯವಾಗಿ ಆಗುವದು. ಈವರ್ಷ ಅನೇಕ ಸಲ ನೀವು ದೂರ ಪ್ರವಾಸಮಾಡುವಿರಿ. ಫೆಬ್ರುವರಿ ೨೨ ರ ವರೆಗೆ ಕೀರ್ತಿಗೆ ಪರಿಪೋಷಕನಾದ ಮತ್ತು ಪರೋ ಪಕಾರದ ಯಾವದೊಂದು ಸಂಗತಿ ಸಂಭವಿಸು ವದು. ಏಪ್ರಿಲ ೧೦ರಿಂದ ಸಪ್ಟೆಂಬರ ೨೦ರೊಳಗಾಗಿ ಯಾವದೊಂದು ಸಾಮಾಜಿಕ ಮತ್ತು ರಾಜಕೀಯ ಆಯ್ಕೆಯಲ್ಲಿ ಉಮೇದವಾರರಾಗಿ ನಿಂತರೆ ನೀವು ಬಹುಮತದಿಂದ ಆರಿಸಿಬರುವಿರಿ. ಮನೆಯಲ್ಲಿ ಏನೇ ಇದ್ದರೂ ಹೊರಗೆ ಒಳ್ಳೇ ವರ್ಚಸ್ಸು ಬೀಳು ವದು.

ಕೆಲ ವಿಷಯಗಳಲ್ಲಿ ಸ್ವಲ್ಪ ಮತಭೇದವಾದರೂ ಬಹುತರ ವಿಷಯಗಳಲ್ಲಿ ಸ್ತ್ರೀ ಸುಖ ಅನುಕೂಲ. ಪರಸ್ಪರರಲ್ಲಿ ಅತ್ಯಂತಿಕ ಪ್ರೇಮ ಮತ್ತು ಆದರ ಉಳಿದು ಮಹತ್ವದ ಕೆಲಸಗಳಲ್ಲಿ ಅವಳ ಸಹಾಯ ಸಿಕ್ಕುವದು. ಆದರೆ ಅವಳ ಆರೋಗ್ಯ ಮಾತ್ರ

ಇರಬೇಕಾದಷ್ಟು ಅನುಕೂಲ ಇರುವದಿಲ್ಲ. ಜನೆವರಿ ೧ ರಿಂದ ಮಾರ್ಚ ೩೦ ಮತ್ತು ಜುಲೈ ೧ ರಿಂದ ಅಗಸ್ಟ ೧೮ ರ ನಡುವಿನ ಅವಧಿಯಲ್ಲಿ ಅವಳಿಗೆ ಅಲ್ಪ ಸ್ವಲ್ಪ ಕ್ಲೇಶವಾಗುವದು. ಅಲ್ಲದೆ ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಅವಳು ಇಲ್ಲವೆ ನೀವು ಸ್ಥಳಾಂತರ ಮಾಡುವದರಿಂದ ಸಹವಾಸ ತಪ್ಪುವದು. ನಿಮ್ಮ ವಿವಾಹವಾಗಿರದಿದ್ದರೆ ಮತ್ತು ಈ ವರ್ಷ ಆಗುವದಿದ್ದರೆ ಅದು ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಖಾತ್ರಿಯಿಂದ ಆಗುವದು. ಒಂದು ವೇಳೆ ಆಗದಿದ್ದರೆ ಮುಂದೆ ಸಪ್ಟಂಬರ ೨೦ ರ ನಂತರ ಆಗುವದು. ಕೂಡಿ ಬರುವಾಗ ಸ್ವಲ್ಪ ತೊಂದರೆಯಾದರೂ ಸಮಾರಂಭ ನಿರ್ವಿಘ್ನವಾಗಿ ಸಾಗಿ ವಧೂವರರು ಪರಸ್ಪರ ಬಹಳ ಪ್ರೇಮದವರಿರುವರು. ಆದರೆ ವಧೂವರರು ಪರಸ್ಪರ ತಮ್ಮ ಪರಿಸ್ಥಿತಿಗಿಂತ ಹೆಚ್ಚು ಸಧನರು ಸಿಕ್ಕುವದು ಕಠಿಣವೆ. ನಿಮ್ಮ ಮಕ್ಕಳ ವಿವಾಹ ಮಾಡುವದಿದ್ದರೆ ಅದೂ ಮೇಲೆ ಹೇಳಿದ ಅವಧಿಯಲ್ಲಿ ಆಗುವದು. ಆದರೆ ಮೊದಲಿನ ಅವಧಿಯಲ್ಲಿ ಅಂದರೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ಅವಧಿಯಲ್ಲಿ ಆದರೆ, ಮೊದಲು ಕೂಡುವಾಗ ಅನಂತರ ಲಗ್ನವಾಗುವಾಗ ಪರಾಕಾಷ್ಠೆಯ ತೊಂದರೆಯಾಗುವದು. ಮತ್ತು ಸತ್ಯಾಸತ್ಯ ಕಾರಣಗಳಿಗಾಗಿ ಬೀಗಬೀಗರಲ್ಲಿ ವೈಷಮ್ಯವುಂಟಾಗುವದು. ಆದರಂತೆ ಮಕ್ಕಳು ಅಗಸ್ಟ ೧೮ ರ ವರೆಗೆ ಬಗೆಬಗೆಯ ತೊಂದರೆಗಳನ್ನು ಮೇಲಿಂದ ಮೇಲೆ ಕೊಡುವರು. ಅವರ ಉನ್ನತಿಯು ನಿಮ್ಮ ಮನಸ್ಸಿನಂತೆ ಯಾವದರಲ್ಲಿಯೂ ಆಗುವದಿಲ್ಲ. ಒಬ್ಬನು ಕಾಯಿಲೆ ಬಿದ್ದು ಅದಕ್ಕಾಗಿ ಬಹಳ ವೆಚ್ಚ ಮಾಡಬೇಕಾಗುವದು. ಆದರೆ ಜೀವಕ್ಕೆ ಮಾತ್ರ ಗಂಡಾಂತರವಿಲ್ಲ. ಮಿತ್ರರು ಸ್ವಲ್ಪ ಮತ್ಸರದಿಂದ ವರ್ತಿಸುವರು. ಸ್ಥಾವರ ಉತ್ಪನ್ನ ಹೆಚ್ಚಿಗೆ ಬಂದರೂ ನಿಮ್ಮ ಉಡಿಯಲ್ಲಿ ಮಾತ್ರೆ ಅರ್ಧದಷ್ಟೇ ಬೀಳುವದು.

ಧಂದೆ ಕೂಲಿಯುವರಿಗೆ ಈ ವರ್ಷ ಉತ್ತಮ. ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ಮತ್ತು ಸಪ್ಟಂಬರ ೨೦ರ ನಂತರದ ಅವಧಿಯಲ್ಲಿ ಧಂದೆಯುವರಿಗೆ ಬಹಳ ಅನುಕೂಲ. ಉಳಿದ ಅವಧಿಯಲ್ಲಿ ವೆಚ ಹೆಚ್ಚಿಗೆ ಬಂದು ದುಡ್ಡಿನ ಕೊರತೆ ಬೀಳುವದಾದರೂ ಪತ್ತು ಇಲ್ಲವೆ ಪ್ರತಿಷ್ಠೆ ಸ್ವಲ್ಪೂ ಕಡಿಮೆಯಾಗುವದಿಲ್ಲ. ಧಂದೆಯುವರಿಗಿಂತ ಕೂಲಿಯುವರಿಗೆ ಈ ವರ್ಷ ಹೆಚ್ಚು ಸುಖದ್ದು. ಅವರಿಗೆ ನೌಕರಿಯಲ್ಲಿ ಡಿಸೆಂಬರ ೩೦ ರ ವರೆಗೆ ಅನಂತರ ಫೆಬ್ರುವರಿ ೧೫ ರಿಂದ ಜುಲೈ ೧, ಅನಂತರ ಅಗಸ್ಟ ೧೮ ರಿಂದ ಅಕ್ಟೋಬರ ೪ರ ವರೆಗಿನ ಕಾಲ ವಿಶೇಷ ಪ್ರಗತಿಯದು. ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ರ ವರೆಗಿನ ಕಾಲದಲ್ಲಿ ೧೨ನೇ ಗುರುವಿನ ಪ್ರಭಾವದಿಂದ ಕೈಕೆಳಗಿನ ಜನರು ಕೆಳಗೆಳೆಯಲು ಪ್ರಯತ್ನಿಸಿದರೂ ವರ್ಷಾರಂಭದಲ್ಲಿ ಭಾಗ್ಯೇಶ ಮಂಗಳನು ಉಚ್ಚಸ್ಥಾನದಲ್ಲಿ ಬಲಿಷ್ಠನು ಮತ್ತು ಕರ್ಮೇಶ ಶುಕ್ರನು ಸ್ಥಾನಬಲಿಷ್ಠನಿದ್ದು, ಅವರು ತಮ್ಮ ಸ್ಥಾನಗಳನ್ನು ಪೂರ್ಣದೃಷ್ಟಿಯಿಂದ ನೋಡುವರು. ಅದರಿಂದ ವರಿಷ್ಠರ ಮರ್ಜಿ ಕಾಯಂ ಉಳಿಯುವದು. ಫೆಬ್ರುವರಿ ೧೫ ರಿಂದ ಮೇ ೧೫ ಇಲ್ಲವೆ ಅಗಸ್ಟ ೧೮ ರಿಂದ ಅಕ್ಟೋಬರ ೪, ಈ ಅವಧಿಯಲ್ಲಿ ಮೇಲಿನಗ್ರೇಡು ಸಿಕ್ಕುವದು. ಮತ್ತು ಬದಲಿ ಆಗುವ ಖಾತೆ ಇದ್ದರೆ ಅದು ಕೂಡ ಇದೇ ಅವಧಿಯಲ್ಲಿ ಆಗುವದು, ಸ್ಥಳ ಸ್ವಲ್ಪ ಹೆಚ್ಚು ಖರ್ಚಿನದಾದರೂ ಸುಖಸೌಕರ್ಯಗಳದ್ದಿರುವದು. ಬುದ್ಧಿಜೀವಿಗಳಿಗೆ ಈ ವರ್ಷ ಆದ ಲಾಭಕ್ಕಿಂತ ಲೌಕಿಕಕ್ಕೆ ಹೆಚ್ಚು ಉತ್ತಮವಿದೆ. ಸರ್ವಸಾಧಾರಣವಾಗಿ ಯಾರಿಗಾದರೂ ಪ್ರತ್ಯಕ್ಷ ದ್ರವ್ಯಲಾಭಕ್ಕೆ ಡಿಸೆಂಬರ ೧ರ ವರೆಗೆ, ಮತ್ತು ಅನಂತರ ಡಿಶೆಂಬರ ೧೮ ರಿಂದ ಜನೆವರಿ ೫, ಮಾರ್ಚ ೧೨ ರಿಂದ ಎಪ್ರಿಲ ೧, ಎಪ್ರಿಲ ೧೬ ರಿಂದ ಮೇ ೩, ಮೇ ೨೩ರಿಂದ ಜೂನ ೧೪, ಜುಲೈ ೪ ರಿಂದ ೨೬, ಮತ್ತು ಅಗಸ್ಟ ೧೧ರ ನಂತರಕಾಲ ಹೆಚ್ಚು ಅನುಕೂಲ. ಇದೆಲ್ಲ ನಿಜವಿದ್ದರೂ ಕಷ್ಟದ ಹಾಗೂ ಕೆಲವರಿಗೆ ಸುಖದ ಕಾರಣಗಳಿಗಾಗಿ ಮಾಡಬೇಕಾದ ಹೆಚ್ಚು ವೆಚ್ಚಕ್ಕಾಗಿ ಉದ್ರಿ, ಸಾಲ, ಕೈಗಡದ ಸರತಿಯು ಬರುವದು.

ದಾವೆ ಖಟ್ಲೆ ಇಲ್ಲವೆ ಖಾಸಗಿ ಸ್ಪರ್ಧೆಗಳ ಕೆಲಸಗಳಲ್ಲಿ ಈ ವರ್ಷ ಒಳ್ಳೇ ಯಶಸ್ಸು ಕೊಡುವಂತಹದಿದ್ದರೂ ವೆಚ್ಚ ಮತ್ತು ತೊಂದರೆ ಮಿತಿ ಮೀರಿ ಸಂಭವಿಸುವದು. ಆದರೂ ಶತ್ರುಗಳು ಇಲ್ಲವೆ ವಿರೋಧಿಗಳ ಎಲುಬು ಪುಡಿಪುಡಿಯಾಗದೆ ಇರಲಾರದು.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ, ಅವರು ಅಗಸ್ಟ ೧೮ರ ವರೆಗೆ ಹಡೆದರೆ ಪುನರ್ಜನ್ಮವತ್ ಕ್ಲೇಶವಾಗಿಯೂ ಬಹುಶಃ ಹೆಣ್ಣೇ ಹಡೆಯುವರು. ಅನಂತರ ಹಡೆದರೆ ಅದು ಸುಲಭವಾಗುವದು. ಸಪ್ಟಂಬರ ೨೦ರ ನಂತರ ಹಡೆಯುವವರಿಗೆ ಮಾತ್ರ ಖಾತ್ರಿಯಿಂದ ಗಂಡು ಹುಟ್ಟುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ರ ವರೆಗೆ ಆಗುವದಿದೆಯೊ ಅವರಿಗೆ ಕೇವಲ ಪಾಸಾಗುವಷ್ಟು ಗುಣ ಬಿದ್ದು ಅವರು ಯಶಸ್ವಿಯಾಗುವರು. ಸಪ್ಟಂಬರ ೨೦ ರ ನಂತರ ಪರೀಕ್ಷೆ ಆಗುವ ವಿದ್ಯಾರ್ಥಿಗಳು ಮಾತ್ರ ಮೊದಲನೆ ವರ್ಗದಲ್ಲಿ ಅಲ್ಲದಿದ್ದರೂ ಎರಡನೆ ವರ್ಗದಲ್ಲಿಯಾದರೂ ಪಾಸಾಗಿಯೇ ತೀರುವರು.

## ಕನ್ಯಾ

ಈ ರಾಶಿಯವರಿಗೆ ಒಟ್ಟಾರೆ ಈ ವರ್ಷ ಪ್ರಾಪಂಚಿಕ ಸುಖಕ್ಕೆ ಮತ್ತು ಲೌಕಿಕಕ್ಕೆ ಸ್ವಲ್ಪ ತೊಂದರೆಯಾದರೂ ಧಂದೆ ಕೂಲಿಕಾರರಿಗೆ ಯಶಸ್ಸು ಮತ್ತು ಲಾಭ ಅಪೇಕ್ಷೆಗಿಂತ ಹೆಚ್ಚಿಗೆ ದೊರೆಯುವದೆಂಬುದು ನಿಶ್ಚಿತವಿದೆ.

ಈ ವರ್ಷ ಈ ರಾಶಿಯವರಿಗೆ ಸಾಡೇಸಾತಿಯದಿದ್ದರೂ ಕೆಮ್ಮು, ನೆಗಡಿ, ಹೊಟ್ಟೆ ಕಡೆತ, ಹಲ್ಲು ನೋವು, ತಲೆನೋವು, ಸ್ವಲ್ಪ ನೇತ್ರಪೀಡೆಯಂಥ ಕಿರುಕುಳ ಉಪದ್ರವ ಆಗುವದು. ಉಳಿದ ದೃಷ್ಟಿಯಿಂದ ಆರೋಗ್ಯ ಅನುಕೂಲವೆ. ಮೇಲೆ ಹೇಳಿದ ಉಪದ್ರವವಾದರೂ ನವ್ಹಂಬರ ೨೦ ರಿಂದ ಡಿಸೆಂಬರ ೩೦, ಫೆಬ್ರುವರಿ ೧೫ ರಿಂದ ಮಾರ್ಚ ೩೦ ಮತ್ತು ಅಗಸ್ಟ ೧೮ ರಿಂದ ಅಕ್ಟೋಬರ ೪ ಈ ಅವಧಿಯಲ್ಲಿಯೇ ಅಲ್ಪ ಸ್ವಲ್ಪ ಎನಿಸುವದು.

ಅಗಸ್ಟ ೧೮ ರ ವರೆಗೆ ಮನೆಯಲ್ಲಿಯ ಇಲ್ಲವೆ ಹೊರಗಿನ ಕೆಲವು ಆಪ್ತರು ಕೊಡುವ ಕಿಟಕಿಟ

ಯಿಂದ ಮನಃಕ್ಷೋಭ ಉಂಟಾದರೂ ಅದನ್ನು ಸಹಿಸುವ ಸಂಯಮವೃತ್ತಿ ಉಳಿದು ಕೊನೆಗೆ ನಿಮ್ಮ ಅಭಿಪ್ರಾಯವೇ ಸರಿಯೆಂದು ಅವರು ಒಪ್ಪಬೇಕಾಗುವದು. ಅನೇಕ ಸಲ ಕೆಲ ಪ್ರಿಯ ಮತ್ತು ಅಪ್ರಿಯ ಅತಿಥಿಗಳು ಬರುವದರಿಂದ ವಿಶೇಷತಃ ಅವರು ಒಂದೇ ಕಾಲಕ್ಕೆ ಬರುವದರಿಂದ ಮನಸ್ಸಿನಲ್ಲಿ ಬಹಳ ತೊಂದರೆ. ನೆರೆಯುವರು ಯಾನಾಗಲೂ ಒಳ್ಳೇ ಸೊಕ್ಕಿನಲ್ಲಿದ್ದು ನಿಮ್ಮನ್ನು ತಿರಸ್ಕರಿಸುತ್ತಲೆ ಇರುವರು- ನೀವು ಇದ್ದ ಊರಲ್ಲಿ ಎರಡು ಬಣಗಳು ನಿರ್ಮಾಣವಾಗುವಂಥ ಒಂದು ಘಟನೆ ಸಂಭವಿಸುವದು. ಅದರಿಂದ ನಿಮ್ಮ ಬಗ್ಗೆ ತಪ್ಪು ತಿಳಿವಳಿಕೆ, ತಪ್ಪು ಅಭಿಪ್ರಾಯ ವಾತಾವರಣದಲ್ಲೆಲ್ಲ ಹಬ್ಬುವದು. ಫೆಬ್ರುವರಿ ೨೨ ರ ವರೆಗೆ, ಮತ್ತು ಎಪ್ರಿಲ ೧೦ ರಿಂದ ಸಪ್ಟೆಂಬರ ೨೦ ರ ವರೆಗೆ ತಾಯಿ ಇದ್ದರೆ ಅವಳಿಗೆ ಬಹಳ ಕಾಯಿಲೆ ಆಗುವದು. ನೋಕರರು ಬಹಳ ರೀತಿಯಿಂದ ಅಡಚಣೆ ತರುವರು. ವಾಹನಗಳಿದ್ದರೆ ಅವು ಮೇಲಿಂದ ಮೇಲೆ ಕೆಡುವವು. ದನಕರುಗಳಿದ್ದರೆ ಅವೂ ಇದೇ ಕಾಲಕ್ಕೆ ಬೇನೆ ಬೀಳುವವು. ಆದರೆ ಕೊನೆಯಲ್ಲಿ ಎಲ್ಲ ವಿಷಯಗಳಲ್ಲಿ ಯಶಸ್ಸು ಮತ್ತು ಸಮಾಧಾನ. ಫೆಬ್ರುವರಿ ೨೨ ರ ವರೆಗೆ ಕೈಯಲ್ಲಿದ್ದ ದುಡ್ಡಿನಿಂದ ಅನಂತರ ಸಪ್ಟಂಬರ ೨೦ ಆದ ಮೇಲೆ ಎರಡನೆಯವರಿಂದ ಕೈಗಡ ಇಲ್ಲವೆ ಸಾಲ ಇಸಿದುಕೊಂಡು ಸ್ಥಾವರ ಆಸ್ತಿಯನ್ನು ಮಾಡುವಿರಿ.

ಸಪ್ಟಂಬರ ೨೦ ರ ವರೆಗೆ ಸ್ತ್ರೀ ಸುಖ ಬಹಳ ಉತ್ತಮ. ಮುಂದೆ ಯಾವದೊಂದು ಕ್ಷುಲ್ಲಕ ಇಲ್ಲವೆ ವಿಶೇಷ ಕಾರಣಗಳಿಂದ ಹೆಂಡತಿ ಮತ್ತು ನಿಮ್ಮಲ್ಲಿ ತಿಕ್ಕಾಟವೆದ್ದು ವರ್ಷ ಮುಗಿಯುವ ವರೆಗೆ ಅದು ಹಾಗೆಯೆ ಉಳಿಯುವದು. ಅಲ್ಲದೆ ಈ ಅವಧಿಯಲ್ಲಿ ಅವಳ ಆರೋಗ್ಯವಾದರೂ ಕೆಲಮಟ್ಟಿಗೆ ಶಾರೀರಿಕ ಆದರೆ ಬಹಳ ಮಟ್ಟಿಗೆ ಮಾನಸಿಕ ಕಾರಣಗಳಿಂದ ಕೆಡುವದು. ಒಂದು ವೇಳೆ ಇನ್ನೂ ನಿಮ್ಮ ಲಗ್ನವಾಗಿರದಿದ್ದರೆ, ಅದು ಫೆಬ್ರುವರಿ ೨೨ ರ ವರೆಗೆ ಇಲ್ಲವೆ ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಖಾತ್ರಿಯಿಂದ ಮತ್ತು ಅಲ್ಪಾಯಾಸದಿಂದ ಆಗುವದು. ವಧೂವರರು ಪರಸ್ಪರ ಅನುರೂಪ ಆದಂಥವರೇ ಸಿಕ್ಕುವರು ಮತ್ತು ವಧೂವರರ ಅತ್ತೆಯ ಮನೆ ಕಲ್ಪನೆಯಕ್ಕಿಂತ ಹೆಚ್ಚು ಸರಸ ಸಿಕ್ಕುವದು. ಕಾರ್ಯಸಮಾರಂಭವು ನಿಶ್ಚಿತ ಸಮಯಕ್ಕೆ ನಿರ್ವಿಘ್ನವಾಗಿ ಯಥಾಸಾಂಗ ಜರಗುವದು ನಿಮ್ಮ ಮಕ್ಕಳ ಮದುವೆಯಾಗುವದಿದ್ದರೆ ಅದಾದರೂ ಮೇಲಿನ ಅವಧಿಯಲ್ಲಿಯೇ ಆಗುವದು. ಆದರೆ ಅಳಿಯ ಇಲ್ಲವೆ ಸೊಸೆ ರೂಪದಿಂದ ಬಹಳ ಚೆನ್ನಾಗಿದ್ದರೂ ಸ್ವಭಾವದಿಂದ ಸಿಟ್ಟಿನವರು ಇರುವರು. ಅದರಂತೆ ಲಗ್ನ ಕೂಡಲಿಕ್ಕೆ ಬಹಳ ಆಯಾಸವಾಗುವದು. ಎಲ್ಲರಿಗಿಂತ ಹಿರಿಯ ಮಗ ಇದ್ದರೆ ಅವನು ಸ್ವಲ್ಪ ವಿರೋಧದಿಂದ ಅಥವಾ ದುರಾಗ್ರಹದಿಂದ ವರ್ತಿಸುವನು ಆದರೆ ಉಳಿದವರೆಲ್ಲ ಮನಸ್ಸಿನಂತೆ ವರ್ತಿಸಿ ಸುಖ ಕೊಡುವರು. ಅದರಂತೆ ಪ್ರತಿಯೊಬ್ಬರು ಅವರವರ ದೇಹ ಭೇದ ಮತ್ತು ಶಕ್ತಿಯಂತೆ ಉತ್ಕರ್ಷ ಹೊಂದುವರು. ಮಿತ್ರರು ಚೆನ್ನಾಗಿ ವರ್ತಿಸುವರು. ಸಪ್ಟಂಬರ ೨೦ ರ ನಂತರ ಶುಭಕೃತ್ಯಗಳಲ್ಲಿ ಬಹಳ ವೆಚ್ಚ ಮಾಡಬೇಕಾಗುವದು. ಧಾರ್ಮಿಕ ಭಾವನೆ ಮತ್ತು ಅನಾಥರ ಬಗ್ಗೆ ಕಳಕಳಿ ಹೆಚ್ಚಿ ಅಂಥ ಕೆಲಸಗಳಲ್ಲಿ ಸ್ವತಃ ಪ್ರಯತ್ನಿಸುವಿರಿ.

ಧಂದೆ ಕೂಲಿಕಾರರಿಗೆ ಈ ವರ್ಷ ಸಾಡೇಸಾತಿ ಇದ್ದರೂ ತೊಂದರೆಯಾಗದೆ ಬಹಳ ಅನುಕೂಲವೆನಿಸುವದು. ಈ ಮಾತನ್ನು ನಂಬಿ ಜೋಕೆಯಿಂದ ಮುಂದೆ ಹೆಜ್ಜೆಯಿಡಬೇಕು. ಧಂದೆ ಮಾಡುವವರು ಸಪ್ಟಂಬರ ೨೦ ರ ವರೆಗೆ ಮನಸ್ಸಿಗೆ ಬಂದಂತೆ ಖರೀದಿಮಾಡುವ ಆಗ್ರಹ ಹಿಡಿದು ಖರೀದಿ ವಿಕ್ರಿ ಮಾಡಿದರೆ ನಿಶ್ಚಯವಾಗಿ ವಿಪುಲ ಲಾಭವಾಗುವದೆಂದು ಪೂರ್ಣ ಖಾತ್ರಿ ಹಿಡಿಯಬೇಕು. ಧಂದೆ ಹೆಚ್ಚುವದು ಮತ್ತು ಅದರಲ್ಲಿಯ ಪತ್ತು, ಪ್ರತಿಷ್ಠೆ ಹತ್ತುಪಟ್ಟು ಹೆಚ್ಚುವದು. ಸಪ್ಟಂಬರ ೨೦ರ ನಂತರ ಮಾತ್ರ ಹೆಚ್ಚಿನ ವ್ಯಾಪ ಮಾಡಬಾರದು. ಮಾಡಿದ್ದಾದರೆ ೧೨ ನೇ ಗುರುವಿನಿಂದ ತೊಂದರೆ ಅನುಭವಿಸಬೇಕಾಗುವದು ಮತ್ತು ವರ್ಷಾರಂಭದಿಂದ ಸಂಪಾದಿಸಿದ್ದನ್ನು ಸ್ವಲ್ಪಾದರೂ ಕಳೆದುಕೊಳ್ಳಬೇಕಾಗುವದು. ನೌಕರರಿಗೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗಿನ ಕಾಲ ಹೆಚ್ಚು ಮಹತ್ವದ್ದು. ವರಿಷ್ಠರು ಮೇಲಿಂದ ಮೇಲೆ ಶಿಫಾರಸು ಮಾಡುವದರಿಂದ, ಹಕ್ಕು ಇದ್ದವರನ್ನು ಹಿಂದಕ್ಕಟ್ಟಿ ನೀವು ಮೇಲಿನ ಗ್ರೇಡಿಗೆ ಹೋಗುವಿರಿ. ಬದಲಿಯಾಗುವ ಶಾಖೆಯಲ್ಲಿ ಕೆಲಸಮಾಡುತಿದ್ದರೆ ಹೆಚ್ಚಿನ ಸಂಬಳದ ಮೇಲೆಯಾದರೂ ಬೇಡದ ಊರಿಗೆ ಹೋಗಬೇಕಾಗುವದು. ಅದರಂತೆ ಇಡಿ ವರ್ಷ ಕೆಲಸಮಾಡಿ ಶ್ರಮ ಸಹಿಸಬೇಕಾಗುವದು. ಕೈಕೆಳಗಿನವರೂ ನಿಮ್ಮ ಅಪಮಾನ ಮಾಡಬೇಕೆಂದು ಜೋರಿನಿಂದ ಪ್ರಯತ್ನಿಸುವರು. ಧಂದೆ ಇರಲಿ ಇಲ್ಲವೆ ನೌಕರಿ ಇರಲಿ ಡಿಸೆಂಬರ ೧೮ ರಿಂದ ಜನೇವರಿ ೫ ಮತ್ತು ಅಕ್ಟೋಬರ ೧೭ ರ ನಂತರದ ಅವಧಿಯಲ್ಲಿ ನಿಮ್ಮ ಲೌಕಿಕಕ್ಕೆ ಇಲ್ಲವೆ ಸದ್ಹೇತುವಿಗೆ ಸ್ವಲ್ಪಾದರೂ ಕಲಂಕ ತಗಲುವ ಅಂಜಿಕೆ. ಅದರಂತೆ ವರ್ಚಸ್ಸು, ದೊಡ್ಡಿಸ್ತನದ ಲಾಲಸೆ ಮತ್ತು ಹೆಚ್ಚು ಪತ್ತು ಬೆಳೆಸಿಕೊಳ್ಳುವ ಹವ್ಯಾಸದಲ್ಲಿ ೧೨ ನೇ ಗುರು ಬಹಳ ವೆಚ್ಚ ಮಾಡಹಚ್ಚುವನು. ಆದರೂ ಈ ವರ್ಷ ಭಾಗ್ಯೋದಯದ ವರ್ಷವೇ ಇರುವದರಿಂದ ಡಿಸೆಂಬರ ೨ ರ ವರೆಗಿನ ಮತ್ತು ಜನೆವರಿ ೬ ರಿಂದ ೩೦, ಫೆಬ್ರುಅರಿ ೨೬ ರಿಂದ ಮಾರ್ಚ ೨೬, ಎಪ್ರಿಲ ೧೮ ರಿಂದ ಮೇ ೧೩, ಜೂನ ೬ ರಿಂದ ಜುಲೈ ೧ ಮತ್ತು ಜುಲೈ ೨೬ ರಿಂದ ಅಗಸ್ಟ ೧೯ ಈ ಕಾಲದಲ್ಲಿ ಭಾಗ್ಯೋದಯಕ್ಕೆ ಪೂರಕವಾದ ಅನೇಕ ಸಂಗತಿಗಳು ಸಂಭವಿಸುವವು. ಇದರಲ್ಲಿ ಸಂದೇಹವಿಲ್ಲ. ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳು ಮಹತ್ಪ್ರಯಾಸದಿಂದ ಮತ್ತು ಒಂದು ಬಗೆಯ ಫಿತೂರಿಯಿಂದ ಸುಮಾರು ಅರ್ಧಕ್ಕಿಂತ ಹೆಚ್ಚು ಸಪ್ಟಂಬರ ೨೦ ರೊಳಗಾಗಿ ಯಶಸ್ವಿಯಾಗುವವು. ಆದರೆ ಅದರಿಂದ ಪ್ರತಿಪಕ್ಷಿಯು ಹಿಂದೆ ಸರಿಯದೆ ಅಪೀಲು ಮುಂತಾದ್ದು ಮಾಡಿ ಮುನ್ನುಗ್ಗುವನು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ನವ್ಹಂಬರ ೨೦ ರಿಂದ ಡಿಸೆಂಬರ ೩೦ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ರ ಅವಧಿಯಲ್ಲಿ ಹಡೆದರೆ ಸಹಜವಾಗಿ ಪ್ರಸೂತಿ ಹೊಂದುವರು. ಯಾವಾಗ ಹಡೆದರೂ ಈ ವರ್ಷ ಅಧಿಕರಿಗೆ ಪುತ್ರರತ್ನವೇ ಆಗುವ ಲಕ್ಷಣವಿದೆ. ಅದರಂತೆ ಜನೇವರಿ ೧ ರಿಂದ ಮಾರ್ಚ ೩೦ ಮತ್ತು ಜುಲೈ ೧ ರಿಂದ ಅಗಸ್ಟ ೧೮ರ ಅವಧಿಯಲ್ಲಿ ಪ್ರಸೂತಿಹೊಂದುವವರ ಕೂಸು ಮಾತ್ರ ಬಹಳ ಅಶಕ್ತ ಉಳಿಯುವವು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಸಪ್ಟಂಬರ ೨೦ರ ನಂತರ ಆಗುವದಿದೆಯೊ ಅವರು ಪಾಸಾಗುವರೊ ನಪಾಸಾಗುವರೋ ಖಾತ್ರಿಯಿಂದ ಹೇಳಲಿಕ್ಕಾಗದು. ಆದರೂ ತತ್ಪೂರ್ವದಲ್ಲಿ ಯಾರ ಪರೀಕ್ಷೆಯಾಗುವದೋ ಅವರು ನಿಶ್ಚಿತವಾಗಿ ಪಾಸಾಗುವರು, ಇದರಲ್ಲಿ ಸಂಶಯವಿಲ್ಲ, ಇಷ್ಟೇ ಅಲ್ಲ ಮಾರ್ಚ ೨೦ ರಿಂದ ಸಪ್ಟಂಬರ ೨೦ ರ ಅವಧಿಯಲ್ಲಿ ಪರೀಕ್ಷೆಯಾದವರಿಗೆ ವರ್ಗಕೂಡ ಸಿಕ್ಕಬಹುದು.

## ತುಲಾ

ಈ ವರ್ಷ ಈ ರಾಶಿಯವರು ಒಂದು ಕ್ಷಣ ನಕ್ಕರೆ ಮರುಕ್ಷಣಕ್ಕೆ ಅಳುವರು. ಧಂದೆ ಕೂಲಿಕಾರರಿಗೂ ಒಮ್ಮೆ ತಲೆತಿರುಗುವಷ್ಟು ಯಶಸ್ಸು ಸಿಕ್ಕರೆ ಮತ್ತೊಮ್ಮೆ ಧೈರ್ಯಗುಂದುವಷ್ಟು ಅಪಯಶಸ್ಸು ಉಂಟಾಗುವದು. ಇದು ನಿಜವಿದ್ದರೂ ಪತ್ತು, ಪ್ರತಿಷ್ಠೆ ಮತ್ತು ಲೌಕಿಕ ಇವುಗಳಿಗೆ ಯತ್ಕಿಂಚಿತ್ತಾದರೂ ಧಕ್ಕೆ ಬರಲಾರದು, ಇದು ನಿಶ್ಚಿತ.

ಈ ರಾಶಿಯವರಿಗೆ ಸಾಡೇಸಾತಿಯ ನಡುವಿನ ಎರಡೂವರೆ ವರ್ಷ ಈಗ ನಡೆದಿದ್ದರೂ ಇದು ಶನಿಯ ಉಚ್ಚ ರಾಶಿಯಾದ್ದರಿಂದ ಪ್ರಕೃತಿಗೆ ಸ್ವಲ್ಪೂ ಅಂಜಿಕೆಯಿಲ್ಲ. ಆದರೂ ನವ್ಹಂಬರ ೧೬ ರ ವರೆಗೆ ಮತ್ತು ಅನಂತರ ದಿಸೆಂಬರ ೧೪ ರಿಂದ ಜನೇವರಿ ೧೪, ಎಪ್ರಿಲ ೧೩ ರಿಂದ ಜೂನ ೧೫, ಜುಲೈ ೧೬ ರಿಂದ ಅಗಸ್ಟ ೧೭, ಮತ್ತು ಅಕ್ಟೋಬರ ೧೭ ರ ನಂತರದ ಕಾಲದಲ್ಲಿ ವಿಪರೀತ ಮಾನಸಿಕ ತೊಂದರೆ. ಮನಸ್ಸು ಒಪ್ಪದಿದ್ದರೂ ಎರಡನೆಯವರ ಪ್ರೇಮ ಇಲ್ಲವೆ ವರ್ಚಸ್ಸಿಗೊಳಗಾಗಿ ಬೇಡಾದ ಸಂಗತಿಗೆ ಅನುಮೋದನ ಕೊಡಬೇಕಾಗುವದು. ಮಾರ್ಚ ೩೦ ರಿಂದ ಮೇ ೧೫ ರ ವರೆಗಿನ ಅವಧಿಯಲ್ಲಿ ಪ್ರಕೃತಿಗೆ ಸ್ವಲ್ಪ ತೊಂದರೆ. ಅಗಸ್ಟ ೧೮ರ ನಂತರ ತಲೆಗೆ ಬಹಳ ತೊಂದರೆಯಾಗುವ ಈ ಕೆಲ ವಿಷ

ರೀತ ಸಂಗತಿ ಸಂಭವಿಸುವವು, ಇಲ್ಲವೆ ತಪ್ಪು ತಿಳಿವಳಿಕೆಯಿಂದ ಸುಖಾಸುಖದ ಬಗ್ಗೆ ವಿಪರೀತ ತರ್ಕವಿತರ್ಕ ಮಾಡಿಕೊಂಡು ಬೇಕಂತಲೇ ತ್ರಾಸ ಮಾಡಿಕೊಳ್ಳುವದು. ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ಬಹಳ ಉತ್ತಮ ಯೋಗವಿದೆ. ಅಗಸ್ಟ ೧೮ರ ವರೆಗೆ ದೇಹಸುಖ ಯಥೋಚಿತ ದೊರೆಯುವದು. ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಕೌಟುಂಬಿಕ ಲೌಕಿಕವು ಹೆಚ್ಚುವಂತೆ ಕನಿಷ್ಠ ಮೂರು ನಾಲ್ಕಾದರೂ ಸಂಗತಿ ಸಂಭವಿಸುವವು. ಮನೆಯಲ್ಲಿ ಹೆಂಡತಿಯ ವರ್ಚಸ್ಸು ಸ್ವಲ್ಪ ಹೆಚ್ಚಿಗೆ ಎನಿಸಿದರೂ ನಿಮ್ಮ ಅಭಿಪ್ರಾಯಕ್ಕೇ ಎಲ್ಲರೂ ಒಪ್ಪಿಗೆ ಕೊಡುವರು. ಪ್ರಿಯ ಜನರ ಸಹವಾಸ ಮೇಲಿಂದಮೇಲೆ ಉಂಟಾಗುವದು. ನೋಕರ ಚಾಕರರು ಕರ್ತವ್ಯತತ್ಪರರಾಗುವರು. ಮನೆಮಾರು,ಹೊಲ ತೋಟ ಹೊಸದಾಗಿಕೊಳ್ಳುವ ಯೋಗ. ಪ್ರತಿ ವಿಷಯದಲ್ಲಿ ಅದ್ವಿತೀಯ ಸಾಹಸ ಮತ್ತು ಹುರುಪು ಇರುವದರಿಂದ ಕೆಲವುಗಳಲ್ಲಿ ಕಡಮೆ ಕೆಲವುಗಳಲ್ಲಿ ಹೆಚ್ಚು:ಹೀಗೆ ಬಹಳ ಕೆಲಸಗಳಲ್ಲಿ ಯಶಸ್ಸು ಸಿಕ್ಕುವದೆಂದು ತಿಳಿಯಬೇಕು. ಹೆಂಡತಿಯ ಆರೋಗ್ಯ ಮಾತ್ರ ಮೊದಲಿನಷ್ಟು ಚನ್ನಾಗಿ ಉಳಿಯುವದಿಲ್ಲ. ಫೆಬ್ರುವರಿ ೧೫ ರಿಂದ ಮಾರ್ಚ ೩೦ ರ ಅವಧಿಯಲ್ಲಿ ಅವಳಿಗೆ ಅಪಘಾತದ ಅಂಜಿಕೆ ಇದೆ. ಜುಲೈ ೧ ರಿಂದ ಅಗಸ್ಟ ೧೮ ರ ಅವಧಿಯಲ್ಲಿ ಸ್ವಲ್ಪ ಕಾಯಿಲೆ. ನಿಮ್ಮ ಮದುವೆ ಇನ್ನೂ ಆಗಿರದಿದ್ದರೆ ಸಪ್ಟಂಬರ ೨೦ ರ ನಂತರವೆ ಬಾಶಿಂಗಬಲವಿದೆ. ಆದರೆ ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಪ್ರಯಾಸದಿಂದಲಾದರೂ ಆಗಬಹುದು. ವಧೂವರರು ಪರಸ್ಪರ ಪೂರ್ಣ ಅನುರೂಪ ಸುಸಂಸ್ಕೃತ ಮನಸ್ಸಿನವರಾಗಿದ್ದರೂ ನೋಡಲಿಕ್ಕೆ ಅಷ್ಟೊಂದು ಸುಂದರವಿರುವದಿಲ್ಲ. ವಿವಾಹ ಸಮಾರಂಭ ಕೆಲ ಕಾರಣಗಳಿಗಾಗಿ ಧಾರ್ಮಿಕತಂತ್ರದಮಟ್ಟಿಗೆ ಮಾತ್ರ ಜರಗುವದು. ಅದರಂತೆ ನಿಮ್ಮ ಮಕ್ಕಳಲ್ಲಿ ಯಾರದಾದರೂ ಲಗ್ನ ಮಾಡುವದಿದ್ದರೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರವರೆಗೆ ಅನಾಯಾಸವಾಗಿ ಮತ್ತು ಸಪ್ಟಂಬರ ೨೦ ರ ನಂತರ ಪ್ರಯಾಸದಿಂದ ಆಗುವದು. ಅಳಿಯ ಮತ್ತು ಸೊಸೆ ರೂಪ ಲಕ್ಷಣಗಳಿಂದ ಎಲ್ಲರ ಮನಸ್ಸಿಗೆ ಬಂದರೂ ಸ್ವಭಾವದಿಂದ ಮಾತ್ರ ವಿಚಿತ್ರವಿದ್ದುದು ಸ್ವಲ್ಪ ಕಾಲದ ಸಹವಾಸದಿಂದ ಗೊತ್ತಾಗುವದು. ಎಲ್ಲ ಮಕ್ಕಳು ಅಗಷ್ಟ ೧೮ ರ ವರೆಗೆ ನೀವು ಹೇಳಿದಂತೆ ಕೇಳುವರು, ಆದರೆ ಮುಂದೆ ಮಾತ್ರ ಅವರಲ್ಲಿ ಒಬ್ಬಿಬ್ಬರು ತಲೆತಿರುಕರಂತೆ ನಡೆದು ಮನಸ್ಸು ನೋಯಿಸುವರು. ಎಲ್ಲರ ಉನ್ನತಿಯು ಈ ವರ್ಷ ಸ್ಪಷ್ಟವಾಗಿ ಕಂಡು ಬರುವದು.

ಧಂದೆ ಕೂಲಿಕಾರರ ದೃಷ್ಟಿಯಿಂದ ಈ ವರ್ಷ ಅಗಷ್ಟ ೧೮ ರಿಂದ ಸಪ್ಟಂಬರ ೨೦ರ ವರೆಗೆ ಒಂದು ತಿಂಗಳು ಬಹಳ ತೊಂದರೆಯದಿದ್ದರೂ ಉಳಿದ ಸಮಯದಲ್ಲಿ ಒಳ್ಳೆ ಉತ್ಕರ್ಷದ್ದು. ಆ ಒಂದು ತಿಂಗಳು ಮಾತ್ರ ಪ್ರತಿಯೊಬ್ಬರಿಗೆ ಬಹಳ ತೊಂದರೆಯದು. ಧಂದೆಮಾಡುವವರಲ್ಲಿ ಅನೇಕರು ದಿವಾಳಿ ತೆಗೆಯುವರು. ಅನೇಕರಿಗೆ ಯಾರಾದರೂ ಮೋಸಮಾಡಿ ತೊಂದರೆ ಕೊಡುವರು. ಕೆಲವರಲ್ಲಿ ಕಳವಾಗಿ ಬಹಳ ಕಷ್ಟವಾಗುವದು. ಕೆಲಹರಿಗೆ ವ್ಯವಹಾರದಲ್ಲಿ ಬಹಳ ಹಾನಿಯಾಗಿ ಅನೇಕ ದಿನಗಳವರೆಗೆ ಮೋರೆ ಮೇಲಕ್ಕೆತ್ತದಂತೆ ಹೊಡೆತಬೀಳುವದು. ಆದರೂ ಈ ವರ್ಷ ಶನಿ ಮತ್ತು ಗುರು ಈ ಎರಡು ದೊಡ್ಡ ಗ್ರಹಗಳ ಭ್ರಮಣ ಸದಾಕಾಲದಲ್ಲಿ ಅನುಕೂಲವಿರುವದರಿಂದ ಮರ್ಯಾದೆಗೆ ಸ್ವಲ್ಪ ಧಕ್ಕೆ ಎನಿಸಿದರೂ ಅದಕ್ಕೆಂದೂ ಚ್ಯುತಿ ಬರಲಾರದು. ಉರುಳಿಸಬೇಕೆನ್ನುವವರು ಕೆಲವರಿದ್ದರೂ ಅದೇ ಕಾಲಕ್ಕೆಮೇಲಕ್ಕೆತ್ತುವವರೂ ಸಿಕ್ಕುವರು. ನೌಕರರಿಗೆ ಕೂಡ ಮೇಲಿನ ಕಾಲ ಬಹಳ ತೊಂದರೆಯದು. ಉಳಿದ ಅನುಕೂಲ ದಿನಗಳಲ್ಲಿ ಡಿಸೆಂಬರ ೧ ರವರೆಗೆ, ಅನಂತರ ಡಿಸೆಂಬರ ೧೮ ರಿಂದ ಎಪ್ರಿಲ ೧, ಎಪ್ರಿಲ ೧೬ರಿಂದ ಮೇ ೩, ಜುಲೈ ೪ ರಿಂದ ಅಗಷ್ಟ ೧೮, ಮತ್ತು ನಂತರ ನವ್ಹಂಬರ ೪ ರಿಂದ ಮುಂದಿನ ಅವಧಿಯು ಲಾಭ ಮತ್ತು ಉತ್ಕರ್ಷವನ್ನುಂಟುಮಾಡುವದು. ಅನೇಕರಿಗೆ ಜನೇವರಿ ೩೦ ರವರೆಗೆ ಇಲ್ಲವೆ ಜೂನ ೬ ರಿಂದ ಜುಲೈ ೧, ಮತ್ತು ಅಕ್ಟೋಬರ ೩೧ ರ ನಂತರದ ಅವಧಿಯಲ್ಲಿ ಅಕಸ್ಮಾತ್ ಇಲ್ಲವೆ ಗುಪ್ತ ಲಾಭವೂ ಆಗುವದು. ಎಪ್ರಿಲ ೧೦ ರಿಂದ ಅಗಷ್ಟ ೧೫ ರ ಅವಧಿಯಲ್ಲಿ ನೌಕರರಿಗೆ ಮೇಲಿನ ಗ್ರೇಡು ದೊರೆಯುವದು. ಧಂದೆ ಮಾಡುವವರ ಪತ್ತು ಪ್ರತಿಷ್ಠೆ ಹೆಚ್ಚುವದು. ಬದಲಿಯಾಗುವ ಖಾತೆ ಇದ್ದರೆ ಮೇ ೨೩ ರಿಂದ ಅಗಷ್ಟ ೨೫ ರ ಅವಧಿಯಲ್ಲಿ ಯೋಗ್ಯ ಸ್ಥಳಕ್ಕೆ ಆಗುವದು. ವರಿಷ್ಠರ ಇಲ್ಲವೆ ಆಶ್ರಯದಾತರ ಮರ್ಜಿ ಬಹಳಾಗುವದು. ಮೇಲಿನ ಅವಧಿಯಲ್ಲಿ ಏನಾದರೂ ಅನಿರೀಕ್ಷಿತ ಘಟನೆಗಳಾಗದಿದ್ದರೆ ನಾಲ್ಕು ದುಡ್ಡು ಕೈಯಲ್ಲಿ ಉಳಿಯುವವು. ಬಹಳ ದೂರಿನ ಪ್ರವಾಸವಾಗಿ ಅದರಲ್ಲಿಯ ಉದ್ದೇಶ ಸಾಧ್ಯವಾಗುವದು. ಮನಸ್ಸಿನಂತೆ ಮಿತ್ರಸುಖ, ಆದರೆ ಅವರಲ್ಲಿ ಒಬ್ಬಿಬ್ಬರು ದಿವಂಗತರಾಗುವ ಅಂಜಿಕೆ. ಫೆಬ್ರುವರಿ ೨೨ರ ವರೆಗಿನ ಕಾಲ ಬಂಧುಗಳಿಗೆ ಅಪಕರ್ಷದ್ದೆನಿಸುವದು. ಇಲ್ಲವೆ ನಿಮ್ಮದು ಅವರದು ಕೂಡಿ ನಡೆಯಲಾರದು. ಉಳಿದ ಅವಧಿಯಲ್ಲಿ ಉನ್ನತಿಯಾಗಿ ನಿಮ್ಮಲ್ಲಿ ಮತ್ತೈಕ್ಯವಾಗುವದು.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಅರ್ಧ ನಿಮ್ಮ ಕಡೆಗೆ ಉಳಿದರ್ಧ ಶತ್ರುಗಳಿಗೆ ಅನುಕೂಲವಾಗುವ ಸಂಭವವಿದೆ. ನಿಮಗಿಂತ ಶತ್ರುಗಳ ಪರಿಸ್ಥಿತಿ ಹೆಚ್ಚು ಅನುಕೂಲ ಮತ್ತು ಬಲಿಷ್ಠ ಇರುವದು ಮತ್ತು ಆಬಗ್ಗೆ ನಿಮಗೆ ಮೇಲಿಂದ ಮೇಲೆ ಖೇದವೆನಿಸುವದು. ಡಿಸೆಂಬರ ೩೦ ರಿಂದ ಫೆಬ್ರುವರಿ ೧೫ ಮತ್ತು ಅಗಷ್ಟ ೧೮ ರ ನಂತರದ ಅವಧಿ ಬಹಳ ಶತ್ರುನಾಶಕವೆನಿಸುವದು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ಅವರಲ್ಲಿ ನವ್ಹಂಬರ ೨೦ ರಿಂದ ಡಿಸೆಂಬರ ೩೦, ಮತ್ತು ಜುಲೈ ೧ ರಿಂದ ಅಕ್ಟೋಬರ ೪ ಈ ಅವಧಿಯಲ್ಲಿ ಪ್ರಸೂತಿಗೆ ಸ್ವಲ್ಪ ಕಷ್ಟವಾಗುವದು. ಆದರೆ ಇಬ್ಬರ ಜೀವಕ್ಕೂ ಗಂಡಾಂತರವಾಗಲಾರದು. ಫೆಬ್ರುವರಿ ೨೨ ರಿಂದ ಎಪ್ರಿಲ ೧೦, ಮತ್ತು ಸಪ್ಟಂಬರ ೨೦ರ ನಂತರ ಹಡೆಯುವವರು ಬಹುಶಃ ಗಂಡು ಹಡೆಯುವರು. ಆದರೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ರೊಳಗಾಗಿ ಹಡೆಯುವವರ ಕೂಸು ಅಶಕ್ತವಿರುವವು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಸಪ್ಟಂಬರ ೨೦ ರೊಳಗಾಗಿ ಆಗುವದೊ ಅವರ ಜನ್ಮಕುಂಡಲಿಯಲ್ಲಿಯೇ ಪ್ರಬಲಯೋಗವಿದ್ದರೆ ಮಾತ್ರ ಅವರು ಹೇಗಾದರೂ ಪಾಸಾಗುವರು. ಅನಂತರ ಪರೀಕ್ಷೆಯಾಗುವವರು ಮಾತ್ರ ಯಶಸ್ಸಿನ ಬಗ್ಗೆ ಖಾತ್ರಿ ಹಿಡಿಯಬೇಕು. ಅಭ್ಯಾಸದಲ್ಲಿ ಮನಸ್ಸಿದ್ದರೂ ಅದು ಸಾಧ್ಯವಾಗದೆ ಸಪ್ಟಂಬರ ೨೦ ರ ವರೆಗೆ ಆಕಸ್ಮಿಕವಾಗಿ ಅಡಚಣೆಯು ಉದ್ಭೂತವಾಗುವ ಹೆದರಿಕೆ ಹೆಚ್ಚಾಗಿ ಇದೆ.

ನೀವು ನಿಮ್ಮ ಹೆಂಡತಿ ಸಮಕ್ಷಮದಲ್ಲಿಯೂ ಸನಿ ಸನಿ ಮಾತಾಡುವದರಿಂದ ನಿಮ್ಮ ಸದ್ಧೇತುವಿನ ಬಗ್ಗೆಯೂ ಕೆಲ ದಿನ ಅವಳ ಮನಸ್ಸು ಸಂಶಯ ತಾಳುವದು. ಯಾರ ಲಗ್ನಕುಂಡಲಿಯಲ್ಲಿ ಸಪ್ತಮದಲ್ಲಿ ರಾಹು ಇಲ್ಲವೆ ಕೇತು ಇರುವನೊ ಅವರಿಗೆ ಸ್ತ್ರೀರೋಷ ಹೆಚ್ಚಿಗೆನಿಸುವದು. ಅದರಂತೆ ನಿಮ್ಮ ವಿವಾಹವಿನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವವರಿದ್ದರೆ ಅದಕ್ಕೆ ಫೆಬ್ರುವರಿ ೨೨ರಿಂದ ಎಪ್ರಿಲ ೧೦ರ ವರೆಗೆ ಮತ್ತು ಸಪ್ಟೆಂಬರ ೨೦ರ ನಂತರ ಬಹಳ ಉತ್ತಮ ಬಾಶಿಂಗಬಲವಿದೆ. ಆದರೆ ಉಳಿದ ಸಮಯದಲ್ಲಿ ಆ ಬಗೆಯ ಬಲವಿಲ್ಲ. ವಿವಾಹ ಯಾವಾಗ ಆದರೂ ಅದು ಕೂಡಿ ಬರಲಿಕ್ಕೆ ಮಾತ್ರ ಬಹಳ ತೊಂದರೆಯೆನಿಸುವದು. ಅಲ್ಲದೆ ವಿವಾಹವಾಗುವ ಕಾಲಕ್ಕೆ ಅಲ್ಪ ಸ್ವಲ್ಪ ಮನೋಭಂಗವಾಗುವದು. ಅದರಂತೆ ವಧು ಇಲ್ಲವೆ ವರ ಪರೀಕ್ಷೆ ಮಾಡುವಾಗ ಏನೋ ಮೋಸ ನಡೆಯಿತು ಎಂದು ಬಹಳ ದಿವಸ ಎನಿಸುವದು. ಆದರೂ ಮುಂದೆ ಕೆಲಕಾಲ ಗತಿಸಿದ ನಂತರ ಗಂಟುಬಿದ್ದದ್ದು ಯೋಗ್ಯ ವ್ಯಕ್ತಿಯೇ ಎಂದು ಖಾತ್ರಿಯಾಗುವದು. ಅದರಂತೆ ವಧು ಇಲ್ಲವೆ ವರರಲ್ಲಿ ಯಾರೊಬ್ಬರು ಮೆಳ್ಳ ಇರುವ ಸಂಭವವಿದೆ. ಅದರಂತೆ ನಿಮ್ಮ ಮಕ್ಕಳ ಮದುವೆ ಯಾಗುವದಿದ್ದರೆ ಫೆಬ್ರುವರಿ೨೨ರ ಮೊದಲು ಇಲ್ಲವೆ ಎಪ್ರಿಲ ೧೦ರ ನಂತರ ಆಗುವದು. ಸೊಸೆ ಇಲ್ಲವೆ ಅಳಿಯ ಅಪೇಕ್ಷಿಸಿದಷ್ಟು ಉತ್ತಮರಿರುವದಿಲ್ಲ.

ಧಂದೆ ಕೂಲಿಯವರಿಗೆ ಮಾತ್ರ ಈ ವರ್ಷ ಸ್ವಾಭಾವಿಕವಾಗಿ ಉತ್ತಮವಿದೆ. ಭಾಗ್ಯೋದಯದ ಒಂದೆರಡು ಹೆಜ್ಜೆಯಾದರೂ ಮುಂದೆ ಬೀಳುವದು. ಇದರ ಅನುಭವ ಮೊದಲು ಆಗಸ್ಟ ೧೮ರ ನಂತರ ೧೫ ದಿನಗಳಲ್ಲಿಯೇ ಬರುವದು. ಅನಂತರ ಅಕ್ಟೋಬರ ೪ರ ನಂತರ ಮತ್ತೆ ಬರುವದು. ನೌಕರರಿಗಿಂತ ಸ್ವತಂತ್ರ ಧಂದೆ ಮಾಡುವವರಿಗೆ ವಿಪುಲ ಲಾಭ ಈ ವರ್ಷ ಮೇಲಿಂದ ಮೇಲೆ ಆಗುವ ಯೋಗ ಪ್ರಬಲವಾಗಿದೆ. ಅದರ ಅನುಭವ ನವಂಬರ ೩ ರಿಂದ ಡಿಸೆಂಬರ ೩೧, ಜನೇವರಿ ೩೦ ರಿಂದ ಮಾರ್ಚ ೨೬, ಎಪ್ರಿಲ ೧೮ ರಿಂದ ಜೂನ ೬, ಜುಲೈ ೨೬ ರಿಂದ ಸಪ್ಟಂಬರ ೧೨, ಮತ್ತು ಅಕ್ಟೋಬರ ೪ರಿಂದ ನವಂಬರ ೨೯ ಅವಧಿಯಲ್ಲಿ ಪ್ರತ್ಯಕ್ಷವಾಗಿ ಬರುವದು. ಯಾವದೊಂದು ದುರ್ಘಟ ಇಲ್ಲವೆ ದುರ್ಲಭ ಮಾತು ಕೂಡ ಸ್ವಲ್ಪ ಪ್ರಯತ್ನದಿಂದ ಸಾಧ್ಯವಾಗುವಂತೆ ದೈವೀಕೃಪೆಯು ಸಪ್ಟಂಬರ ೨೦ರನಂತರವೇ ಬಹಳಿದೆ. ನೌಕರರಿಗೆ ಲಾಭದ ದೃಷ್ಟಿಯಿಂದ ಹತಾಶರಾಗುವ ಕಾರಣ ಸ್ವಲ್ಪೂ ಇಲ್ಲ. ಕಳೆದ ನಾಲ್ಕೈದು ವರ್ಷಕ್ಕಿಂತ ಈ ವರ್ಷ ಲಾಭ ಹೆಚ್ಚಾಗುವದು. ಆದರೆ ಕೆಲಸದಲ್ಲಿ ಮೇಲಿಂದ ಮೇಲೆ ವರಿಷ್ಠರು ದೋಷತೆಗೆದು ಬಹಳ ಪೀಡಿಸುವರು. ಕೈಕೆಳಗಿನ ಜನರು ಅವರ ಕಿವಿ ಊದುತ್ತ ನಡೆಯುವರು. ಆದರೆ ಅಗಸ್ಟ೧೮ರ ನಂತರ ವರಿಷ್ಠರ ಇಲ್ಲವೆ ನಿಮ್ಮ ಬದಲಿ ಆಗುವದರಿಂದ ಆ ತೊಂದರೆ ಬಹಳ ಮಟ್ಟಿಗೆ ಕಡಿಮೆಯಾಗುವದು. ಬದಲಿಯಾದರೆ ಅದು ಒಪ್ಪಿಗೆ ಇಲ್ಲದ ಸ್ಥಳಕ್ಕೆ ಆಗುವದು. ಸಪ್ಟಂಬರ ೨೦ರನಂತರ ಅನೇಕರಿಗೆ ಮೇಲಿನ ಗ್ರೇಡು ಸಿಕ್ಕುವದು. ನೌಕರಿ ಇರಲಿ ಧಂದೆ ಇರಲಿ ವೆಚ್ಚ ಮಾತ್ರ ಸುಮಸುಮಾರು ಲಾಭದಷ್ಟೇ ಹೆಚ್ಚುವದು. ಆದರೆ ಅದರಲ್ಲಿ ಬಹಳ ವೆಚ್ಚ ಯೋಗ್ಯ ಮತ್ತು ಸಂಗ್ರಾಹಕ ಕೆಲಸಗಳಲ್ಲಿ ಆಗುವದು. ಇದೇ ಸಮಾಧಾನದ ಸಂಗತಿ. ಈ ವರ್ಷ ದೂರ ದೂರದ ಪ್ರವಾಸವೂ ಆಗುವದು. ಹೆಚ್ಚು ಕೀರ್ತಿವಂತ ಮತ್ತು ಪ್ರಮುಖ ಜನರ ಭೆಟ್ಟಿ ಇಲ್ಲವೆ ಪತ್ರವ್ಯವಹಾರದ ಯೋಗ ಬಹಳ ಸಲ ಸಿಕ್ಕುವದು, ನಿಮ್ಮ ವರ್ತನೆಯಲ್ಲಿ ದಂಭ ಮತ್ತು ದೊಡ್ಡತನಕ್ಕಾಗಿ ಪರಕಾರ್ಯತತ್ಪರತೆ ಹೆಚ್ಚಿದ್ದು ಕಂಡು ಬರುವದು.

ವಾದವಿವಾದಗಳಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಅಗಸ್ಟ ೧೮ರ ವರೆಗೆ ಪ್ರತಿಪಕ್ಷಿಗಳ ಜೋರು ಹೆಚ್ಚಾಗುವದು. ಒಂದೆರಡು ಕೆಲಸಗಳು ನಿಮ್ಮ ವಿರುದ್ಧವಾಗುವವು. ಆದರೆ ಈ ತಾರೀಖಿನ ನಂತರ ಅವರು ಪೂರ್ಣವಾಗಿ ನಿರಾಸೆ ಹೊಂದುವಂತೆ ನಿಮಗೆ ಯಶಸ್ಸು ಸಿಕ್ಕುವದು. ವಾದಿ, ಪ್ರತಿವಾದಿ ಇಲ್ಲವೆ ಸಾಕ್ಷಿದಾರರೆಂದು ನಿಮ್ಮ ಕೆಲಸದಲ್ಲಿ ಸ್ತ್ರೀಯರ ಸಂಬಂಧ ಸ್ವಲ್ಪಾದರೂ ಈ ವರ್ಷ ಬರುವದು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ಅವರಲ್ಲಿ ಸಪ್ಟಂಬರ ೨೦ರ ವರೆಗೆ ಹಡೆಯುವ ಸ್ತ್ರೀಯರು ಬಹಳ ಕಷ್ಟದಿಂದ ಹಡೆಯುವರು. ಅನಂತರ ಹಡೆಯುವವರು ಮಾತ್ರ ಸುಲಭಪ್ರಸೂತರಾಗಿ ಸಾವಿರ ಪಾಲಿಗೆ ಗಂಡು ಹಡೆಯುವರು. ಆದರೆ ಅನೇಕರ ಮಕ್ಕಳು ತಂದೆ ತಾಯಿಗಳ ಆರೋಗ್ಯಕ್ಕೆ ಹೋಲಿಸಿ ನೋಡಿದರೆ ಬಹಳ ಅಶಕ್ತರೆನಿಸುವರು.

ಯಾರ ಪರೀಕ್ಷೆ ಡಿಸೆಂಬರ ೩೦ರ ವರೆಗೆ ಮತ್ತು ಮುಂದೆ ಫೆಬ್ರುವರಿ ೧೫ ರಿಂದ ಮಾರ್ಚ ೩೦, ಮೇ ೧೫ ರಿಂದ ಜುಲೈ ೧ ಮತ್ತು ಅಗಸ್ಟ ೧೮ರ ನಂತರ ಆಗುವದಿದೆಯೊ ಆ ವಿದ್ಯಾರ್ಥಿಗಳು ನಿಶ್ಚಿತವಾಗಿ ಪಾಸಾಗುವರು.

## ಮಕರ

ಈ ವರ್ಷ ನಿಮಗೆ ಪ್ರಾಪಂಚಿಕ ಹಾಗು ಔದ್ಯೋಗಿಕ ಉತ್ಕರ್ಷಕ್ಕೆ ಬಹಳ ಅನುಕೂಲವಿರುವದು. ಇದರ ಪ್ರತ್ಯಯ ನಿಮಗೆ ಬರುವಷ್ಟು ಈ ವರ್ಷದಲ್ಲಿ ಶುಭಯೋಗವಿದೆಯೆಂಬಲ್ಲಿ ಎಳ್ಳಷ್ಟು ಸಂಶಯವಿಲ್ಲ.

ಈ ರಾಶಿಯ ಜನರ ಆರೋಗ್ಯ ಸ್ವಲ್ಪ ಕೆಡುವದಾದರೂ ಸಪ್ಟಂಬರ ೨೦ರ ನಂತರ ಮಾತ್ರ ಸಹಸಾ ನೆಗಡಿ ಕೂಡ ಬರುವದಿಲ್ಲ. ತರುಣರಂತೂ ಒಳ್ಳೆ ನಿರೋಗಿಗಳಾಗಿ ಉಳಿಯುವರು ಮತ್ತು ಆದರಿಂದ ಅವರಿಗೆ ಸ್ವಲ್ಪ ಗರ್ವ ಕೂಡ ಬರುವದು. ಅಡ್ಡಾಡುವ ಇಲ್ಲವೆ ಅಂಗಪರಿಶ್ರಮ ಹೆಚ್ಚಿಗೆ ಆಗುವಂಥ ವ್ಯಾಯಾಮದ ನಾದು ಬಹಳ ಹೆಚ್ಚುವದು. ಫೆಬ್ರುವರಿ ೨೨ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ರ ವರೆಗೆ ಮಾನಸಿಕ ಉನ್ನತಿಯಾಗುವಂತಹ ವ್ಯಕ್ತಿಗಳ ಸಹವಾಸ, ಅಂತಹ ಪುಣ್ಯಕ್ಷೇತ್ರಗಳ ದರ್ಶನ ಇಲ್ಲವೆ ಅದಕ್ಕೆ ಪೋಷಕವಾಗುವಂಥ ಉತ್ತಮ ಗ್ರಂಥದ ಪಠನ ಇವುಗಳಲ್ಲಿ ಎಲ್ಲ ಅಥವಾ ಒಂದೆರಡು ಸಂಗತಿಗಳಾದರೂ ಖಾತ್ರಿಯಿಂದ ಸಂಭವಿಸುವವು.

ಆದರಂತೆ ಅವಾಂತರ ವಿಷಯಗಳಲ್ಲಿ ಆವಶ್ಯಕವಾದ ದೇಹಸುಖಕ್ಕೆ ಈ ವರ್ಷ ಬಹಳ ಪುಷ್ಟಿದಾಯಕವಿದೆ. ಮನೆಯಲ್ಲಿ ಒಳ್ಳೆ ಮತ್ಯೈಕ್ಯ. ವಯಸ್ಸಿಗನುಗುಣವಾಗಿ ನಿಮ್ಮ ವರ್ಚಸ್ಸು ಚನ್ನಾಗಿ ಉಳಿಯುವದು. ಫೆಬ್ರುವರಿ ೧೫ರಿಂದ ಮಾರ್ಚ ೩೦ ಮತ್ತು ಜುಲೈ ೧ ರಿಂದ ಅಗಸ್ಟ ೧೮ ಈ ಅವಧಿಯಲ್ಲಿ ಆಪ್ತರು, ಆಶ್ರಿತರು, ಮನೆಯ ಒಡೆಯರು ಇಲ್ಲವೆ ಬಾಡಿಗೆದಾರರು ಮತ್ತು ತೀರ ಸಮೀಪದ ನೆರೆಯವರು ಇವರಲ್ಲಿ ಕೆಲವರಿಂದ ಸ್ವಲ್ಪ ಕಲಹ ಇಲ್ಲವೆ ತೊಂದರೆಯಾದರೂ ಉಳಿದ

ಸಮಯದಲ್ಲಿ ಅವರ ಕಡೆಯಿಂದಲೆ ಪೂರ್ಣ ಸಹಕಾರ ಸಿಕ್ಕುವದು. ಅವರವರ ಮೂಲ ಗ್ರಹ ಬಲಕ್ಕನುಸಾರವಾಗಿ, ಕೆಲವರು ಕಡನೆ, ಕೆಲವರು ಹೆಚ್ಚಿಗೆ ಹೀಗೆ ಸ್ಥಾವರ ಆಸ್ತಿಯನ್ನು ನಿಶ್ಚಿತವಾಗಿ ಕೊಳ್ಳುವ ಯೋಗವುಂಟು. ಅದರಂತೆ ಮನೆಮಾರು ದೊರಕಿಸುವ ಯೋಗವಿದೆ. ಇದ್ದೂದರಲ್ಲಿ ವರ್ಚಸ್ಸು ಹೆಚ್ಚುವ ಯೋಗವೂ ಇದೆ. ಸಾರ್ವಜನಿಕ ಇಲ್ಲವೆ ಸರಕಾರೀ ಆಯ್ಕೆಗೆ ಉಮೇದವಾರರಾಗಿ ನಿಂತರೆ ಪ್ರಚಂಡ ಬಹುಮತದಿಂದ ಆರಿಸಿ ಬರುವ ಯೋಗವೂ ಬಲವತ್ತರವಾಗಿದೆ. ನೋಕರ ಚಾಕರರು ಬಹಳ ವಿಶ್ವಾಸದಿಂದ ಮತ್ತು ಆರ್ಜವದಿಂದ ಇದ್ದು ಕಾರ್ಯತತ್ಪರ ಉಳಿಯುವರು. ಮಿತ್ರರು ಸಹಿತ ಸ್ವತಃ ತಮಗಿಂತ ಹೆಚ್ಚು ನಿಮ್ಮ ಕಲ್ಯಾಣಕ್ಕಾಗಿಯೇ ಮನಃಪೂರ್ವಕವಾಗಿ ಪ್ರಯತ್ನಿಸುವರು. ಒಟ್ಟಾರೆ ಇಡೀ ವರ್ಷ ರಾಶಿಸ್ವಾಮಿಯಾದ ಶನಿಯು ದಶಮ ಅರ್ಥಾತ್ ಬಲವರ್ಧಕ ಸ್ಥಾನದಲ್ಲಿ ಮತ್ತು ಉಚ್ಚರಾಶಿಯಾದತುಲಾದಲ್ಲಿ ಇದ್ದು ವರ್ಷಾರಂಭದಲ್ಲಿ ಸುಖೇಶ ಮತ್ತು ಲಾಭೇಶ ಮಂಗಳ ಮತ್ತು ವ್ಯಯೇಶ ಮತು ಪರಾಕ್ರಮೇಶ ಗುರು ಇವರೂ ಉಚ್ಚ ಮತ್ತು ಅನುಕ್ರಮವಾಗಿ ಪ್ರಥಮ ಮತ್ತು ಸಪ್ತಮದಂಥ ಉಕ್ತ ಕೇಂದ್ರದಲ್ಲಿ ಇರುವರು. ಆದುದರಿಂದ ಈ ವರ್ಷ ಬಹುತರ ವಿಷಯಗಳಲ್ಲಿ ಸುಖ ಮತ್ತು ಯಶ ಹೆಚ್ಚುವದೆಂಬುದು ಖಾತ್ರಿಯಿದೆ. ಸ್ಥಾವರ ಉತ್ಪನ್ನ ಹೆಚ್ಚುವದು. ಉಪಯುಕ್ತ ದನಗಳು ನಿರೋಗಿ ಉಳಿಯುವವು. ಅವುಗಳಿಂದ ಅಪೇಕ್ಷಿತ ಕೆಲಸ ಇಲ್ಲವೆ ಉಪಯುಕ್ತ ಕೆಲಸಗಳು ಆಗುವವು. ವಾಹನ ಸುಖ ಉತ್ತಮವಿದೆ. ಹಳೆಯುವನ್ನು ಮಾರಿ ಹೊಸವನ್ನು ಕೊಳ್ಳುವಿರಿ. ಇಡಿ ಜನ್ಮವೆಲ್ಲ ಪಾದಚಾರಿಯುಳಿಯುವ ದುರ್ಬಲ ಯೋಗದ ಜನರಿಗೆ ಕೂಡ ಮೇಲಿಂದ ಮೇಲೆ ವಾಹನದಲ್ಲಿ ಕೂಡುವ ಯೋಗ ಈ ವರ್ಷವಂತೂ ಇದ್ದೇ ಇದೆ. ಆಪ್ತರಲ್ಲಿ ಯಾರಾದರೂ ಈ ವರೆಗೆ ಒಳ್ಳೆ ರೀತಿಯಿಂದ ಇದ್ದಿಲ್ಲವಾದರೆ ಇನ್ನು ಮೇಲೆಯಾದರೂ ಅತ್ಯಂತ ಪ್ರೇಮದಿಂದ ವರ್ತಿಸಹತ್ತುವರು.

ಸ್ತ್ರೀಸುಖಕ್ಕೆ ಈ ವರ್ಷ ೭ ನೇ ಗುರುವಿದ್ದಾಗ ಅಂದರೆ ಫೆಬ್ರುಅರಿ ೨೦ ರ ವರೆಗೆ ಮತ್ತೆ ಮುಂದೆ ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಬಹಳ ಉತ್ತಮ ಕಾಲ. ಸತಿಪತ್ನಿಯರು ಪರಸ್ಪರ ಆಜ್ಞಾಧಾರಕರಿರುವರು. ಆದರೆ ಅವಳ ಪ್ರಕೃತಿ ಮಾತ್ರ ವಾತವಿಕಾರದಿಂದ ಸ್ವಲ್ಪ ಕೆಡುವದು. ಸಪ್ಟೆಂಬರ ೨೦ ರ ನಂತರ ನೀವು ಇಲ್ಲವೆ ಅವಳು ಸ್ಥಳಾಂತರವಾಗುವದರಿಂದ ಕೆಲ ದಿನ ವಿರಹವ್ಯಥೆಯನ್ನನುಭವಿಸಬೇಕಾಗುವದು. ಆದರೆ ನಿಮ್ಮ ಮದುವೆ ಇನ್ನೂ ಆಗಿದ್ದಿಲ್ಲವಾದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಅದಾದರೂ ೭ ನೇ ಗುರುವಿದ್ದಾಗ ಖಾತ್ರಿಯಿಂದ ಮತ್ತು ಪ್ರಯಾಸವಿಲ್ಲದೆ ಸಾಧ್ಯವಾಗುವದು. ವಧೂವರರು ಪರಸ್ಪರ ಪೂರ್ಣ ಅನುರೂಪ ಇರುವರು. ಆದರೆ ಅವರು ಹಾಗೆ ಇಲ್ಲದಿದ್ದ ಬಗ್ಗೆ ಮನೆಯಲ್ಲಿಯ ಕೆಲ ಜನರಿಗೆ ತಪ್ಪುತಿಳಿವಳಿಕೆಯಾಗುವದು. ನಿಮ್ಮ ಮಕ್ಕಳಲ್ಲಿ ಯಾರ ವಿವಾಹವನ್ನಾದರೂ ಈ ವರ್ಷ ಮಾಡುವದಿದ್ದರೆ ಅದಕ್ಕೆ ಮಾತ್ರ ಬಾಸಿಂಗಬಲ ಇರುವದಿಲ್ಲ. ಆದರೂ ಜನೆವರಿ ೧ ರಿಂದ ೩೦, ಫೆಬ್ರುಅರಿ ೨೬ ರಿಂದ ಮಾರ್ಚ ೨೬, ಎಪ್ರಿಲ ೧೮ ರಿಂದ ಮೇ ೧೩, ಜೂನ ೬ ರಿಂದ ಜುಲೈ ೧, ಈ ಅವಧಿಯಲ್ಲಿ ಸ್ವಲ್ಪ ಬಲವಿರುವದರಿಂದ ಅನೇಕರ ಮದುವೆಯು ಆಗಬಹುದು. ಅಳಿಯ ಇಲ್ಲವೆ ಸೊಸೆ ಅಪೇಕ್ಷೆಗಿಂತ ಹೆಚ್ಚು ಅನುಕೂಲ ದೊರೆಯುವರು. ಎಲ್ಲ ಮಕ್ಕಳಿಂದ ಯಥೋಚಿತ ಸುಖ ಸಿಕ್ಕುವದು. ಅವರಲ್ಲಿ ಕೆಲವರು ಸಪ್ಟಂಬರ ೨೦ ರ ವರೆಗೆ ಉನ್ನತಿಯನ್ನು ಹೊಂದುವರು. ಆದರೆ ಅಗಸ್ಟ ೧೮ ರ ನಂತರದ ಕಾಲವು ಅವರ ಪ್ರಕೃತಿಗೆ ಕಿರುಕಳ ಕ್ಲೇಶ ಕೊಡುವಂತಹದು.

ಧಂದೆ ಕೂಲಿಯುವರಿಗೆ ಈ ವರ್ಷ ಪ್ರಾಪಂಚಿಕ ಸುಖದಂತೆಯೇ ಅತ್ಯುತ್ತಮ ಅಭಿವೃದ್ಧಿಯುದಿದೆ. ಸಪ್ಟಂಬರ ೨೦ ರ ವರೆಗೆ ಧಂದೆಯುವರು ಬಹಳ ಉನ್ನತಿ ಹೊಂದುವರು. ಧಂದೆ ಯಾವದೇ ಇರಲಿ, ಎಷ್ಟೇ ಇರಲಿ ಅವರವರ ಯೋಗ್ಯತಾನುಸಾರ ಕನಿಷ್ಠ ನಾಲ್ಮಡಿ ಐದುಮಡಿ ಲಾಭವಾಗುವದು. ಅನೇಕರು ಬೇರೆ ಬೇರೆ ಕಡೆಗೆ ಶಾಖೆಗಳನ್ನು ತೆಗೆಯುಬರಬೇಕಾದಷ್ಟು ಧಂದೆ ಬೆಳೆಯುವದು. ಅನೇಕರಿಗೆ ತಮಗಿಂತ ಶ್ರೀಮಂತ ಪಾಲುಗಾರರು ಸಿಕ್ಕುವರು. ನೌಕರರಿಗೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಮೇಲಿನ ಗ್ರೇಡು ಖಾತ್ರಿಯಿಂದ ಸಿಕ್ಕುವದು. ಗ್ರೇಡ ಸಿಕ್ಕುವ ಹಕ್ಕು ಇಲ್ಲದಿದ್ದರೂ ಗ್ರಹಬಲದ ಮೂಲಕ ಸಿಕ್ಕುವ ಸಂಭವ ಅಕಸ್ಮಾತ್ತಾಗಿ ಇರುವದು. ಅದರಂತೆ ಯಾರ ಯೋಗದಲ್ಲಿ ಗುಪ್ತ ಧನ ಸಿಗುವದಿದೆಯೋ ಅವರಿಗೆ ಸಪ್ಟಂಬರ ೨೦ ರ ನಂತರ ಸ್ವಲ್ಪಿಲ್ಲ ಸ್ವಲ್ಪ ಗುಪ್ತ ಹಣ ಸಿಕ್ಕುವದು. ವರಿಷ್ಠರು ಒಳ್ಳೇ ಅನುಕೂಲರು. ಕೈಕೆಳಗಿನವರು ಚೆನ್ನಾಗಿ ನಡೆಯುವರು. ಧಂದೆಯುವರಿಗೆ ದೊಡ್ಡದೊಡ್ಡ ಗಿರಾಕಿ ಸಿಕ್ಕುವವು, ಎಲ್ಲ ಗಿರಾಕಿಗಳು ನಿಮ್ಮಲ್ಲಿ ಸಂತುಷ್ಟರು. ಬಹಳ ಕಠಿಣ ಕೆಲಸಗಳು ಕೂಡ ೭ ನೇ ಗುರುವಿನ ಬಲದಿಂದ ಸಾಧ್ಯವಾಗುವವು. ಸಾಮಾಜಿಕ ಲೌಕಿಕ ಬೆಳೆಯುವದು, ನಿಮ್ಮಿಂದಾಗಬಹುದಾದ ಕ್ವಚಿತ್ ತಪ್ಪಿನ ಬಗ್ಗೆ ಕೂಡ ಯಾರೂ ಟೀಕಿಸದೆ ಅದನ್ನು ಸಮರ್ಥನೆ ಮಾಡುವರು. ಇಲ್ಲವೆ ಆ ಬಗ್ಗೆ ಕೌತುಕ ಪ್ರದರ್ಶಿಸುವರು. ನೌಕರರ ಖಾತೆ ಬದಲಿಯಾಗುವದಿದ್ದರೆ ಡಿಸೆಂಬರ ೧ ರಿಂದ ೧೮, ಜನೆವರಿ ೫ ರಿಂದ ೩೧, ಎಪ್ರಿಲ ೧೨ ರಿಂದ ೧೬, ಜೂನ ೧೪ ರಿಂದ ಜುಲೈ ೪, ಅಗಸ್ಟ ೨೮ ರಿಂದ ನವ್ಹಂಬರ ೪, ಇದರಲ್ಲಿ ಯಾವದಾದರೊಂದು ಅವಧಿಯಲ್ಲಿ ಆಗಿ ಮನಸ್ಸಿಗೆ ಬರುವ ಮತ್ತು ಎಲ್ಲ ಬಗೆಯ ಸುಖಸೌಕರ್ಯದ ಸ್ಥಳಕ್ಕೆ ಆಗುವದು. ಅನೇಕರಿಗೆ ಕಾರ್ಯ ಕೆಲಸಗಳಿಗಾಗಿ ಇಲ್ಲವೆ ಕೇವಲ ಹೌಸಿಗಾಗಿ ಬಹಳ ದೂರದ ಪ್ರವಾಸ ಸಂಭವಿಸುವದು. ಪ್ರತ್ಯಕ್ಷ ಭೆಟ್ಟಿಯ ಕೆಲಸ ಬಹಳ ಅನುಕೂಲ, ಪತ್ರವ್ಯವಹಾರ ಕರಾರ ಕಾಗದ ಮೊದಲಾದ ಪತ್ರಲೇಖನ ಮೊದಲಾದವುಗಳೂ ಪೂರ್ಣವಾಗಿ ಮನಸ್ಸಿನಂತೆ ಸಂಭವಿಸುವವು. ಒಟ್ಟಾರೆ ತುಂಬ ಲಾಭದ ಈ ವರ್ಷವಿದ್ದು ಅದರಲ್ಲಿ ಸ್ವಲ್ಪಾದರೂ ಶಿಲ್ಲಕ ಉಳಿಯುವದು. ಹಿಂದಿನ ಬಾಕಿಯೂ ಬಹಳಷ್ಟು ವಸೂಲಾಗುವದು.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಮುಖ್ಯವಾದ ಕೆಲವು ಪರಸ್ಪರ ವಿಚಾರವಿನಿಮಯದಿಂದ ಒಡಂಬಡಿಕೆಯಾಗಿ ಬಗೆಹರಿಯುವವು. ಉಳಿದವುಗಳಲ್ಲಿ ಅರ್ಧಕ್ಕೆ ಹೆಚ್ಚು ಅಗಸ್ಟ ೧೮ ರೊಳಗೆ ಪ್ರತಿಪಕ್ಷಿಗಳಿಗೆ ಬಹಳ ಅಪಜಯಕಾರಕ ಮತ್ತು ಸ್ವಪಕ್ಷಕ್ಕೆ ಪ್ರಶಂಸನೀಯ ಯಶಸ್ಸು ದೊರೆಯುವದು. ಆದರೆ ಮೇಲಿನ ತಾರೀಖಿನ ನಂತರ ಪ್ರತಿಪಕ್ಷಿಯು ಹೆಚ್ಚು ಬಲಿಷ್ಠನಾಗುವ ಯೋಗವಿದೆ.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ, ಅದರಲ್ಲಿಯೂ ೭ ನೇ ಗುರು ಇದ್ದಾಗ ಯಾರು ಹಡೆಯುವರೊ ಅವರು ಸುಲಭ ಪ್ರಸೂತರಾಗಿ ಅನೇಕರಿಗೆ ಗಂಡುಮಗುವು ಹುಟ್ಟುವದು. ಆರನೇ ಗುರುವಿದ್ದಾಗ ಅಂದರೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಹಡೆಯುವವರ ಪ್ರಸೂತಿ ಸುಲಭವಾಗಿ ಕನ್ಯಾ ಹುಟ್ಟುವ ಯೋಗ ವಿಶೇಷವಿದೆ. ಆದರೆ ಅಗಸ್ಟ ೧೮ ರ ನಂತರ ಮತ್ತು ಅದರಲ್ಲಿಯೂ ಸಪ್ಟಂಬರ ೨೦ ರ ನಂತರ ಹಡೆಯುವವರಿಗೆ ಕಷ್ಟಯೋಗವಿದ್ದು ಹುಟ್ಟುವ ಮಕ್ಕಳು ಕೂಡ ಸದೃಢ ಇರುವದಿಲ್ಲ.

ಯಾವ ವಿದ್ಯಾರ್ಥಿಗಳ ಪರೀಕ್ಷೆ ನವ್ಹಂಬರ ೩ ರೊಳಗಾಗಿ ಮತ್ತು ಜನೆವರಿ ೧ ರಿಂದ ೩೦, ಫೆಬ್ರುವರಿ ೨೬ ರಿಂದ ಮೇ ೧೩, ಜೂನ ೬ ರಿಂದ ಜುಲೈ ೧ ಮತ್ತು ಜುಲೈ ೨೬ ರಿಂದ ಅಗಸ್ಟ ೧೯ ಈ ಅವಧಿಯಲ್ಲಿ ಆದರೆ ಆ ವಿದ್ಯಾರ್ಥಿಗಳು ನಿಶ್ಚಯವಾಗಿ ಪಾಸಾಗುವರು.

## ಕುಂಭ

ಈ ವರ್ಷ ಪ್ರಾಪಂಚಿಕ ಔದ್ಯೋಗಿಕ ಸುಖ ದುಃಖಗಳ ಮೆಟ್ಟಲು ಮೇಲಿಂದ ಮೇಲೆ, ಮೇಲೆ ಕೆಳಗೆ ಆಗುತ್ತಿದ್ದರೂ ವರ್ಷದ ಕೊನೆಯಲ್ಲಿ ಒಳ್ಳೇ ಮೇಲ್ಮಟ್ಟದ ಕಡೆ ಹೊರಳುವದೆಂಬಲ್ಲಿ ಸಂದೇಹವಿಲ್ಲ.

ಈ ರಾಶಿಯ ಜನರ ಆರೋಗ್ಯ ಅಗಸ್ಟ ೧೮ ರ ನಂತರ, ಇನ್ನೂವರೆಗೆ ಸಂಶೋಧನವಾಗದಿದ್ದ ಯಾವದೊಂದು ಹೊಸ ವಿಕಾರದಿಂದ ಅಲ್ಪ ಸ್ವಲ್ಪ ತೊಂದರೆಯಾಗುವ ಸಂಭವವಿದೆ. ತಲೆ ನೋವು, ಬೆನ್ನಲ್ಲಿ ವಿಪರೀತ ನೋವು ಮೊದಲಾದ ವಿಕಾರ ಹೆಚ್ಚು. ಸ್ತ್ರೀಯರಿಗೆ ಇದು ವಿಶೇಷವೆನಿಸುವದು. ಅದರಲ್ಲಿಯೂ ಅಕ್ಟೋಬರ ೪ ರಿಂದ ಹೆಚ್ಚು ಜಪ್ಪಿಸಲು ಬೇಕಾಗುವದು.

ಕೆಲವೊಂದು ಅಪವಾದವನ್ನು ಬಿಟ್ಟರೆ ಬಹುಶಃ ಅನೇಕರಿಗೆ ಗಂಡಾಂತರದ ಅಂಜಿಕೆ ಮಾತ್ರ ಇರುವದಿಲ್ಲ. ಯಾಕೆಂದರೆ ಇಡೀ ವರ್ಷ ರಾಶಿಸ್ವಾಮಿ ಶನಿಯು ಉಚ್ಚ ಮತ್ತು ಆಯುರ್ವರ್ಧಕವೆನಿಸಿದ ೯ನೇ ಸ್ಥಾನದಲ್ಲಿ ಇರುವನು.

ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ಅವಶ್ಯಕವಾದ ಘಟನೆಗಳು ಕೂಡ ಅಗಸ್ಟ ೧೮ ರ ವರೆಗಿನ ಕಾಲದಲ್ಲಿ ಬಹಳ ಸಮಾಧಾನದ್ದಿದೆ. ಅದರಲ್ಲಿಯೂ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಬಹಳ ಹರ್ಷಭರಿತ ಉಳಿಯುವದು. ಸಪ್ಟಂಬರ ೨೦ ರ ನಂತರ ಸಹ ಒಳ್ಳೆಯದಿರುವದು. ಆದರೆ ಕೆಲ ಶಾರೀರಿಕ ಮತ್ತು ಮಾನಸಿಕ ಕಷ್ಟಗಳಿಂದ ಅದರ ನಿಜವಾದ ಆಸ್ವಾದವನ್ನು ಸವಿಯುವದಾಗುವದಿಲ್ಲ. ಕೌಟುಂಬಿಕ ಉತ್ಕರ್ಷದ ಅನೇಕ ಸಂಗತಿಗಳು ಸಂಭವಿಸುವವು. ಆದರೆ ಅಗಸ್ಟ ೧೮ ರಿಂದ ಸಪ್ಟಂಬರ ೨೦ ರ ಮಧ್ಯಾಂತರದ ಅವಧಿಯಲ್ಲಿ ಗೃಹಕಲಹ ಬಹಳ ಏಳುವದು. ಇದೇ ಅವಧಿಯಲ್ಲಿ ಸ್ಥಾವರದಲ್ಲಿ ಅತ್ಯಂತ ಖಾತ್ರಿಯ ಇಲ್ಲವೆ ಪ್ರಿಯವಾದ ವಸ್ತುವಿಗೆ ಕ್ರಿಮಿ-ಕೀಟಕ, ಬಿರುಗಾಳಿ, ಮುರಿಯುವ ಮೊದಲಾದವುಗಳಿಂದ ಅಥವಾ ಸಿಡಿಲು ಬಿದ್ದು ಬಹಳ ಹಾನಿ. ಇಲ್ಲದಿದ್ದರೆ ವಿಶ್ವಾಸದಲ್ಲಿದ್ದ ನೋಕರರಲ್ಲಿ ಯಾರಾದರೂ ಮೋಸ ಮಾಡುವರು. ಇಲ್ಲವೆ ನೋಕರಿಗೆ ಶರಣು ಹೊಡೆಯುವರು. ಉಪಯುಕ್ತ ದನಕರುಗಳಲ್ಲಿ ಯಾವವಾದರೂ ಕೆಲಸಕ್ಕೆ ಬಾರದಂತಾಗುವವು. ಈ ಅವಧಿಯಲ್ಲಿ ಯಾವನೊಬ್ಬ ಆಪ್ತನು ಇಲ್ಲವೆ ನೆರೆಯವನು ಕ್ಷುಲ್ಲಕ ಮಾತಿಗಾಗಿ ಶತ್ರುವಿನಂತೆ ಪೀಡೆ ಕೊಡುವನು. ಆದರೂ ಉಳಿದ ಅವಧಿಯಲ್ಲಿ ಸ್ಥಾವರಆಸ್ತಿ ಬಹಳ ಹೆಚ್ಚುವದು. ಏನಿಲ್ಲೆಂದರೂ ಅದರಲ್ಲಿ ಹೊಸ ಹೊಸ ಸುಧಾರಣೆಗಳನು ಮನಸ್ಸಿನಂತೆ ಮಾಡುವ ಹೊಸ ಗಿರಾಕಿಗಳು ದೊರೆಯುವರು. ವಾಹನಸುಖ ಸದಾ ಉತ್ತಮ. ಬಂಧುಗಳಿಗೆ ಬಹಳ ಉತ್ಕರ್ಷ. ಅವರು ನಿಮ್ಮನ್ನು ಬಹಳ ಪ್ರೀತಿಯಿಂದ ಮಾತಾಡಿಸುತ್ತ ಇರುವರು. ಫೆಬ್ರುವರಿ ೨೨ ರಿಂದ ಎಪ್ರಿಲ ೧೦, ಮತ್ತು ಸಪ್ಟೆಂಬರ ೨೦ ರ ನಂತರದ ಅವಧಿ ಮಿತ್ರಸುಖಕ್ಕೆ ಉತ್ತಮವಿದೆ. ಆದರೆ, ಫೆಬ್ರುವರಿ ೨೨ ರೊಳಗಾಗಿ ನಿಮ್ಮ ಶತ್ರುಗಳೊಡನೆ ನಿಮ್ಮ ವಿರುದ್ಧ ಗುಪ್ತ ರೀತಿಯಿಂದ ಕಿವಿಮಾತು ಹೇಳಿದ ಸಂಶಯದಿಂದ ಮನಸ್ಸು ಬಹಳ ವ್ಯಗ್ರವಾಗುವದು.

ಸ್ತ್ರೀಸುಖ ಅನುಕೂಲ. ಉಭಯತರಲ್ಲಿ ಪ್ರೇಮ ಮೊದಲಿಗಿಂತ ಹೆಚ್ಚುವದು. ಮತ್ತು ಯಾವಾಗಲೂ ಅವಳು ನಿಮ್ಮ ಮಾತಿನಂತೆಯೆ ನಡೆಯುವಳು. ಅವಳ ಪ್ರಕೃತಿಗೆ ಮಾತ್ರ ಜುಲೈ ೧ ರ ನಂತರ ಅಷ್ಟೊಂದು ಅನುಕೂಲವಿಲ್ಲ. ಕೆಲವರಿಗೆ ಹೊಟ್ಟೆನೋವಿದ್ದರೆ ಕೆಲವರಿಗೆ ಮಧುಮೇಹವಾಗುವದು. ಯಾವದೊಂದು ಮಾತಿನ ದುರಾಗ್ರಹದಿಂದ ಅವಳ ಬಂಧುಗಳು ಬಹಳ ಪೀಡಿಸುವರು. ಇನ್ನೂ ನಿಮ್ಮ ಮದುವೆಯಾಗಿರದಿದ್ದರೆ ಈ ವರ್ಷ ಮಾಡಿಕೊಳ್ಳುವ ಇಚ್ಛೆ ಇದ್ದರೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ಈ ಅವಧಿ ಪೂರ್ಣ ಅನುಕೂಲ ಮತ್ತು ಫೆಬ್ರುವರಿ ೨೨ ರ ಮೊದಲಿನ ಮತ್ತು ಎಪ್ರಿಲ ೧೦ ರಿಂದ, ಸಪ್ಟಂಬರ ೨೦ ರ ವರೆಗಿನ ಅವಧಿ ಅರ್ಧಮರ್ಧ ಅನುಕೂಲ. ವಧುವಿಗೆ ವರ ಹೆಚ್ಚು ಗುಣವಂತನಾಗಿದ್ದರೂ ರೂಪದಿಂದ ಬಹಳ ಹೀನ ಇರುವ ಸಂಭವವಿದೆ. ಲಗ್ನ ಕಾರ್ಯದಲ್ಲಿಯೂ ಒಂದೆರಡು ವಿಘ್ನಗಳು ಅಡ ಬರುವದರಿಂದ ಬಹಳ ಮನೋಭಂಗವಾಗಿ ದುಡ್ಡಿನ ಕೊರತೆಯನ್ನು ಸಹಿಸಬೇಕಾಗುವದು. ಅದರಂತೆ ನಿಮ್ಮ ಮಕ್ಕಳು ಮರಿಗಳ ಮದುವೆ ಮಾಡುವದಿದ್ದರೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ಮತ್ತು ಸಪ್ಟಂಬರ ೨೦ ರ ನಂತರದ ಅವಧಿಯು ಬಹಳ ಅನುಕೂಲವಿದೆ. ಆದರೆ ಮೊದಲನೇ ಅವಧಿಯಲ್ಲಿ ಲಗ್ನ ಕೂಡಲಿಕ್ಕೆ ಅಂದಾಜಿಗಿಂತ ಹೆಚ್ಚು ತೊಂದರೆಯಾಗುವದು. ಬೀಗ ಬೀಗರಲ್ಲಿ ಕಿಲ್ಮಿಷ ಬರುವದು. ಮತ್ತು ಅಳಿಯ ಇಲ್ಲವೆ ಸೊಸೆ ಮೊದಲು ತಿಳಿದಷ್ಟು ಒಳ್ಳೆಯವರಿಲ್ಲೆಂದು ಎನಿಸುವದು. ಅಗಸ್ಟ ೧೮ ರ ವರೆಗೆ ಕೆಲ ಜನರ ಪ್ರಕೃತಿಗೆ ಅಲ್ಪ ಸ್ವಲ್ಪ ಕಿರಿಕಿರಿ. ಆದರೆ ಈ ವರ್ಷ ಬಹುಶಃ ಎಲ್ಲರ ಉನ್ನತಿಯಾಗುವದು.

ಧಂದೆ ಕೂಲಿಯವರಿಗೆ ಮಾತ್ರ ಈ ವರ್ಷದ ಕೆಲಭಾಗ ಕಷ್ಟದ್ದು ಮತ್ತು ದಗದಗಿಯದಿದೆ. ಆದರೆ ಉಳಿದಕಾಲ ಅಷ್ಟೇ ಭರಭರಾಟಿಯದು ಇದೆ. ಮತ್ತು ಧಂದೆಯವರಿಗೆ ಯಾವ ಕಾಲ ಕಷ್ಟದ್ದೋ ಆ ಕಾಲ ನೌಕರರಿಗೆ ಸುಖದ್ದು ಈ ಬಗೆಯ ಅನುಭವ ಬರುವದು. ಆದರೆ ಧಂದೆಯವರಿಗೆ ಫೆಬ್ರುವರಿ ೨೨ರ ವರೆಗೆ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ಅವಧಿ ಎಷ್ಟು ಕಷ್ಟದ್ದೆನಿಸುವದೊ ಆ ಅವಧಿ ನೌಕರರಿಗೆ ಆನಂದದ್ದೆನಿಸುವದು. ಪ್ರತ್ಯಕ್ಷವಾಗಿ ದುಡ್ಡು ಕಡಿಮೆ ಎನಿಸಿದರೂ ಭಾವೀ ಉನ್ನತಿಗೆ ಪರಿಪೋಷಕವಾಗುವ ಬೀಜವನ್ನು ಬಿತ್ತಲಾಗುವದು. ಪ್ರತ್ಯಕ್ಷ ಭೆಟ್ಟಿಯ ಕೆಲಸದಲ್ಲಿ ನವ್ಹಂಬರ ೨೦ ವರೆಗೆ ಮತ್ತು ಮೇ ೧೫ ರಿಂದ ಜುಲೈ ೧ ರ ವರೆಗೆ ಬಹಳ ಜಪ್ಪಿಸಬೇಕಾಗುವದು. ಕಾರಣವಿರಲಿ ಇಲ್ಲದಿರಲಿ, ಎರಡನೆಯವರಿಗೆ ಸೇರದಂಥ ಕೆಲ ಕಟುಮಾತುಗಳು ನಿಮ್ಮ ಬಾಯಿಂದ ತಿಳಿಯದಲೆ ಹೊರಬೀಳುವವು. ನೌಕರರ ಖಾತೆ ಬದಲಾಗುವದಿದ್ದರೆ ಹೆಚ್ಚಿನ ಸಂಬಳದ ಮೇಲೆ ಮೇಲಿನ ಗ್ರೇಡಿನಲ್ಲಿ ವರ್ಗಾಗುವದು. ಆದರೆ ಆ ಸ್ಥಳ ಮಾತ್ರ ನಿಮ[ಗೆ] ಸುಖ ಸೌಕರ್ಯಕ್ಕೆ ತೀರ ಪ್ರತಿಕೂಲವಿರುವದು. ಈ ವರ್ಷ ವರಿಷ್ಠರು ನಿಮ್ಮ ಮೇಲೆ ಸಂತುಷ್ಟರಾಗಿರದೆ ಸ್ವಲ್ಪ ರೊಚ್ಚಿಗೇಳುವರು. ಧಂದೆಯವರಿಗಾಗಲಿ ನೌಕರದಾರರಿಗಾಗಲಿ ವೆಚ್ಚ ಮಾತ್ರ ಹೆಚ್ಚು, ಆದರೆ ಅವೆಲ್ಲ ಯೋಗ್ಯ ಕೆಲಸಕ್ಕಾಗಿಯೇ ಆಗುವದರಿಂದ ಮನಸ್ಸಿಗೆ ಅಷ್ಟೊಂದು ಹತ್ತುವದಿಲ್ಲ. ವಿಶೇಷ ಲಾಭಕ್ಕೆ ಫೆಬ್ರುವರಿ ೨೬ ರ ವರೆಗೆ ಮತ್ತು ಮಾರ್ಚ ೨೬ ರಿಂದ ಮೇ ೧೩, ಜೂನ ೬ ರಿಂದ ಜುಲೈ ೨೬ ಮತ್ತು ಅಕ್ಟೋಬರ ೫ ರಿಂದ ಮುಂದಿನ ಕಾಲ ಬಹಳ ಅನುಕೂಲ.

ವಾದದಲ್ಲಿ ಸ್ಪರ್ಧೆಯಲ್ಲಿ ಈ ವರ್ಷ ಕೆಲ ಸಮಯ ಬಹಳ ಪ್ರತಿಕೂಲ. ಶತ್ರುಗಳಲ್ಲಿ ಗುಪ್ತ ಶತ್ರುಗಳ ಚಲನವಲನವೇ ಹೆಚ್ಚು. ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಮಿತ್ರರಲ್ಲಿಯೂ ಒಬ್ಬಿಬ್ಬರು ನಿಮ್ಮ ವಿರುದ್ಧ ಕೆಲ ಕೈವಾಡ ನಡೆಸುವರು. ಒಟ್ಟಾರೆ ಸಪ್ಟಂಬರ ೨೦ ರ ವರೆಗೆ ಆಗುವ ನಿರ್ಣಯಗಳಲ್ಲಿ ಬಹಳ ನಿರ್ಣಯಗಳು ಶತ್ರುಗಳಿಗೆ ಅನುಕೂಲವಾಗುವವು. ಆದರೆ ಅನಂತರ ಹೊರಬೀಳುವ ನಿರ್ಣಯಗಳು ಮಾತ್ರ ನಿಮಗೆ ಪೂರ್ಣ ಅನುಕೂಲವಾಗುವವು ನಿಶ್ಚಯ. ಬೌದ್ಧಿಕ ತುರಸಿಗಾಗಿ ಕೆಲ ವಿದ್ವಾಂಸರ ಕೂಡ ಈ ವರ್ಷ ವೈಷಮ್ಯವುಂಟಾಗುವ ಸಂಭವವಿದೆ.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ಅವರಲ್ಲಿ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರೊಳಗಾಗಿ ಮತ್ತು ಸಪ್ಟಂಬರ ೨೦ ರ ನಂತರ ಯಾರು ಹಡೆಯುವರೋ ಅವರು ಸುಲಭವಾಗಿ ಹಡೆಯುವರು. ಆದರೂ ಉಳಿದ ಅವಧಿಯಲ್ಲಿ ಹಡೆಯುವವರಿಗೂ ಬಹಳ ಕಷ್ಟದ ಅಂಜಿಕೆಯಿಲ್ಲ. ಬಹುಶಃ ಎಲ್ಲರಿಗೂ ಹೆಣ್ಣು ಹುಟ್ಟುವ ಬಲವತ್ತರ ಯೋಗವಿದೆಂದು ತಿಳಿಯಲಡ್ಡಿಯಿಲ್ಲ.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ಅವಧಿಯಲ್ಲಿ ಆಗುವದಿದೆಯೋ ಆ ವಿದ್ಯಾರ್ಥಿಗಳು ಪಾಸಾಗುವಷ್ಟು ಗುಣಗಳನ್ನು ದೊರಕಿಸುವರು. ಆದರೆ ಅಗಸ್ಟ ೧೮ ರ ನಂತರ ಯಾರ ಪರೀಕ್ಷೆ ಆಗುವದೊ ಅವರಲ್ಲಿ ಅನೇಕರು ಉಚ್ಚ ವರ್ಗದಲ್ಲಿ ಪಾಸಾಗುವರೆಂಬಲ್ಲಿ ಸಂದೇಹವಿಲ್ಲ.

## ಮೀನ

ಈ ವರ್ಷ ನಿಮಗೆ ಪ್ರಾಪಂಚಿಕ ದೃಷ್ಟಿಯಿಂದ ಸುಖವಿಲ್ಲದಿದ್ದರೂ ಔದ್ಯೋಗಿಕ ಮತ್ತು ಆರ್ಥಿಕ ವಿಷಯಗಳಲ್ಲಿ ಒಳ್ಳೇ ವಿಕಾಸವಿದ್ದಿದೆ ಇದರಲ್ಲಿ ಎಳ್ಳಷ್ಟು ಸಂಶಯವಿಲ್ಲೆಂದು ತಿಳಿಯಿರಿ.

ಈ ರಾಶಿಯವರ ಪ್ರಕೃತಿ ಇಡೀ ವರ್ಷ ಉತ್ತಮವಿದ್ದರೂ ಎರಡನೆಯವರ ನೋವು ಇಲ್ಲವೆ ರೋಗವನ್ನು ನೋಡಿ, ಕೇಳಿ ಇಲ್ಲವೆ ಓದಿ, ತಮಗೆ ಹಾಗೆ ಆದ ಕಲ್ಪನೆ ಮಾಡಿಕೊಂಡು ಮನಸ್ಸಿನಲ್ಲಿ ನಿರರ್ಥಕವಾಗಿ ಬಹಳ ಗಾ[ಬ]ರಿಯಾಗುವರು. ಈ ವರ್ಷವಿದ್ದ ಅನೇ ಶನಿಯಿಂ[ದ] ಹಸಿಬಿಸಿ ಕೆಲ ಭವಿಷ್ಯವಾದಿಗಳು ನಿಮಗೆ ಬಹ[ಳ] ಶರೀರಪೀಡೆಯಾಗುವದೆಂದು ಅಂಜಿಕೆ ಹ[ಾಕ]ಬಹುದು. ಆದರೆ ಶನಿಯು ತನ್ನ ಉಚ್ಚ ರಾ[ಶಿ]ಯಾದ ತುಲಾದಲ್ಲಿರುವದರಿಂದ ಹೊಸ ದು[ಃಖ]ವನ್ನುಂಟು ಮಾಡದೆ ತದ್ವಿರುದ್ಧವಾಗಿ ಮೊದಲಿ[ನ] ಕ್ಲೇಶವನ್ನು ನಿವಾರಿಸುವನೆಂದು ಜಾತಕಶಾಸ್ತ್ರ ನಿಯಮವಿದೆ. ಅಲ್ಲದೆ ವರ್ಷಾರಂಭದಲ್ಲಿ

ಸ್ವಾಮಿಯಾದ ಗುರುವೂ ಉಚ್ಚನಿರುವದರಿಂದ ಗ್ರಹದೃಷ್ಟಿಯ ನಿಯಮಕ್ಕನುಸಾರವಾಗಿ ಅವನದು ನಿಮ್ಮ ಮೇಲೆ ಪೂರ್ಣ ದೃಷ್ಟಿಯಿದೆ. ಮತ್ತು ವರ್ಷದಲ್ಲಿ ಸುಮಾರು ಅರ್ಧಕ್ಕಿಂತ ಹೆಚ್ಚು ದಿನ ಅವನು ಉಚ್ಚನಿರುವನು. ಅರ್ಥಾತ್ ಈ ರಾಶಿಯು ಹುಟ್ಟುಸ್ವಭಾವದುರ್ಗುಣಕ್ಕನುಸಾರವಾಗಿ ಪ್ರಕೃತಿ ನಿರೋಗಿ ಇಲ್ಲವೆಂಬ ತಕರಾರು ಮನಸ್ಸಿನಲ್ಲಿ ಸದಾ ಇದ್ದದ್ದು ಕೇಳಬರುವದು. ಆದರೆ ಪ್ರತ್ಯಕ್ಷ ತಪಾಸ ಮಾಡಲಾಗಿ ಏನೂ ದೋಷ ಇದ್ದದ್ದು ಕಂಡು ಬರುವದಿಲ್ಲ. ಆದರೆ ಅಗಸ್ಟ ೧೮ ರ ವರೆಗೆ ಯಾವಾಗಾದರೊಮ್ಮೆ ಎಡವಿ ಬೀಳುವದು, ಮೇಲಿನಿಂದ ಕೆಳಗೆ ಬೀಳುವದರಿಂದ ಕಾಲು ಉಳಿಯುವದು ಇಲ್ಲವೆ ಮೊಳಕಾಲು ಒಡೆಯುವದು ಇಂಥ ಆಗಂತುಕ ನೋವು ಸ್ವಲ್ಪ ಪ್ರಮಾಣದಲ್ಲಿ ಆಗುವವು.

ಇತರ ವಿಷಯುಗಳಲ್ಲಿ ದೇಹಸುಖಕ್ಕೆ ಈ ವರ್ಷ ಅಗಸ್ಟ ೧೮ ರ ವರೆಗೆ ಇರಬೇಕಾದಷ್ಟು ಅನುಕೂಲವಿಲ್ಲ. ಸಮೀಪದ ಆಪ್ತರು ನೋಕರ ಚಾಕರ ಮುಂತಾದ ಆಶ್ರಿತರು, ತಿರದುಂಡು ಉಪದ್ವ್ಯಾಪ ಮಾಡುವ ಕೆಲ ಜನರಿಂದ ನಿರರ್ಥಕವಾಗಿ ಪೀಡೆ ಬಹಳ. ಫೆಬ್ರುವರಿ ೨೨ ರ ವರೆಗೆ ಮತ್ತು ಎಪ್ರಿಲ ೩೦ ರಿಂದ ಸಪ್ಟಂಬರ ೨೦ ರ ವರೆಗೆ ಉಚ್ಚ ಮತ್ತು ೫ ನೇ ಸ್ಥಾನದಲ್ಲಿದ್ದ ರಾಶಿಸ್ವಾಮಿಯಾದ ಗುರುವಿನಿಂದ ಅತ್ಯಂತ ದುರ್ಘಟ ಮತ್ತು ದುರ್ಲಭವಾದ ಕೆಲಸಗಳಲ್ಲಿ ಸಂಪೂರ್ಣ ಯಶಸ್ಸು ಸಿಕ್ಕು ಅನೇಕರಿಗೆ ತಲೆ ಬೇಸರವಾಗುವದು. ಇದರಿಂದ ವಿರೋಧಿಗಳ ದುಷ್ಪರಿಣಾಮ ನಿಮ್ಮ ಮೇಲೆ ಮಾನಸಿಕ ತೊಂದರೆ ಹೊರತುಪಡಿಸಿ ಏನೂ ಆಗುವದಿಲ್ಲ. ನಿಮ್ಮ ಪರಿಶ್ರಮದಿಂದ ಸ್ವಲ್ಪಾದರೂ ಸ್ಥಾವರ ಆಸ್ತಿ ಹೆಚ್ಚುವದು. ಅಲ್ಲದೆ ಯಾವನೊಬ್ಬನು ನಿಮ್ಮನ್ನು ವಾರಸದಾರನೆಂದು ನಿಶ್ಚಯಿಸುವದರಿಂದ ಸ್ವಲ್ಪ ಆಸ್ತಿ ಮತ್ತು ರೋಖ ಹಣ ಸಿಕ್ಕುವ ಸಂಭವವಿದೆ. ಈ ಬಗೆಯ ಯೋಗ ಬಂದರೆ ಅದು ಡಿಸೆಂಬರ ೧ ರೊಳಗಾಗಿ ಇಲ್ಲವೆ ಎಪ್ರಿಲ ೧೬ ರಿಂದ ಮೇ ೩, ಜುಲೈ ೪ ರಿಂದ ೨೬, ಇಲ್ಲದಿದ್ದರೆ ಅಗಸ್ಟ ೨೮ ರ ನಂತರ ಉಂಟಾಗುವ ಸಂಭವವಿದೆ. ವಾಹನಸುಖ ಕೂಡ ಸಿಕ್ಕುವದಿಲ್ಲ. ಅಗಸ್ಟ ೧೮ ರ ವರೆಗೆ ವಾಹನ ಮೇಲಿಂದ ಮೇಲೆ ಕೆಡುವವು. ಆದರೆ ಸಪ್ಟಂಬರ ೨೦ ರ ನಂತರ ನಿಮಗಿಂತ ನಿಮ್ಮ ಅತಿಥಿಗಳು, ಆಪ್ತರು, ಸ್ನೇಹಿತರು ಮೊದಲಾದ ಎರಡನೆಯವರೆ ನಿಮ್ಮ ವಾಹನಗಳನ್ನು ಹೆಚ್ಚಾಗಿ ಉಪಯೋಗಿಸುವರು. ಅಗಸ್ಟ ೧೮ ರ ನಂತರದ ಕಾಲ ನಿಮ್ಮ ತಾಯಿ ತಂದೆಗಳಿಗೆ ಇಲ್ಲವೆ ಅತ್ತೆ ಮಾವಂದರಿಗೆ ಸ್ವಲ್ಪ ಕಾಯಿಲೆಯದು. ಅವಾಂತರ ಕೆಲಸಗಳಲ್ಲಿ ದೊರೆಯುವ ಪ್ರಾಪಂಚಿಕ ಸುಖ ಕ್ಷಣದಲ್ಲಿ ಉಲ್ಲಾಸ ಹೆಚ್ಚಿಸುವಂತಹದಿದ್ದರೆ ಮರುಕ್ಷಣದಲ್ಲಿ ಔದಾಸೀನ್ಯ ಹೆಚ್ಚಿಸುವಂತಹ ಅನಿಶ್ಚಿತ ಪ್ರಕಾರದ್ದು. ನಿದ್ರೆ ಮೊದಲಿಗಿಂತ ಕಡಮೆ. ಈ ಶುಭ ಪ್ರಶ್ನೆಗಳ ಪ್ರತ್ಯಯು ಬೇಗ ಬರುವದು.

ಸ್ತ್ರೀಸುಖಕ್ಕೆ ಈ ವರ್ಷ ಮಧ್ಯಮವಿದೆ. ಅವಳ ಆರೋಗ್ಯ ಚರ್ಮರೋಗದಿಂದ ಫೆಬ್ರುವರಿ ೧೫ ರಿಂದ ಮಾರ್ಚ ೩೦, ಇಲ್ಲವೆ ಅಕ್ಟೋಬರ ೪ ರ ನಂತರ ಸ್ವಲ್ಪ ಕೆಡುವದು. ಆದರೆ ಗಂಡಾಂತರದ ಅಂಜಿಕೆ ಇಲ್ಲವೆ ಹಾಸಿಗೆ ಹಿಡಿಯುವ ಭೀತಿ ಸ್ವಲ್ಪವೂ ಇಲ್ಲ. ಉಭಯತರಲ್ಲಿಯು ಪ್ರೇಮ ವಿಶ್ವಾಸ ಕಾಯಂ ಉಳಿಯುವದು. ಸಹವಾಸ ಸುಖದಲ್ಲಿಯೂ ಕ್ವಚಿತ್ತಾಗಿ ಅಂತರ ಬೀಳುವದು. ಆದರೆ ಪ್ರತಿಯೊಬ್ಬನಿಗೆ ತಾನು ಅಂದದ್ದು ಸತ್ಯವೆಂಬ ವಿಪರೀತ ದುರಭಿಮಾನ ಹುಟ್ಟುವದರಿಂದ ನಿಮ್ಮ ನಿಮ್ಮಲ್ಲಿ ಶುಷ್ಕ ವಿತಂಡವಾದದ ಪ್ರಸಂಗ ಬರುವದು. ಸಮೀಪದ ನೆರೆಯವರು ಕೇಳಿ ಬೇಸರಿಯುವಂತೆ ಇದು ಹೆಚ್ಚುವದು. ನಿಮ್ಮ ಮದುವೆ ಇನ್ನೂ ಆಗಿರದಿದ್ದರೆ ಈ ಸಲ ಮಾಡಿಕೊಳ್ಳುವದಕ್ಕೆ ಮನಸ್ಸು ಇದ್ದರೆ ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ಅವಧಿಯಲ್ಲಿ ಹೇಗಾದರೂ ಆಗಿ ಹೋಗುವ ಬಾಸಿಂಗಬಲವಿದೆ. ಲಗ್ನ ಗೊತ್ತಾದಂದಿನಿಂದ ಕೊರಳಲ್ಲಿ ಮಾಲೆ ಬೀಳುವವರೆಗೆ ಆಗುವದೊ ಇಲ್ಲವೊ ಎಂಬ ಭೀತಿ ಅಡಚಣಿ ಬರುವವು. ವಧೂವರರು ಅನೇಕ ದೃಷ್ಟಿಯಿಂದ ಪರಸ್ಪರ ಮನಸ್ಸಿನಂತೆ ದೊರೆಯುವದಿಲ್ಲ. ಅದರಂತೆ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಅದು ಫೆಬ್ರುವರಿ ೨೦ ರೊಳಗೆ ಇಲ್ಲವೆ ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರ ವರೆಗೆ ಖಾತ್ರಿಯಿಂದ ಆಗುವದು. ಆದರೆ ಲಗ್ನ ಕೂಡಿ ಬರಲು ಬಹಳ ತೊಂದರೆ. ಆದರೂ ಅಳಿಯು ಇಲ್ಲವೆ ಸೊಸೆ ಮಾತ್ರ ಒಳ್ಳೆ ಕೀರ್ತಿವಂತರು ಸಿಕ್ಕುವರು. ಮಕ್ಕಳಿಗೆಲ್ಲ ಅವರ ವಯಸ್ಸು ಮತ್ತು ನೋಕರಿ ಮಾನದಿಂದ ಈ

ವರ್ಷ ಉದಯೋನ್ಮುಖವಾಗಿದೆ. ನಿಮ್ಮ ಬಂಧು ಮಿತ್ರರಿಗೆ ಇಲ್ಲವೆ ಪ್ರೀತಿಯ ಮಿತ್ರರಿಗೆ ಸಹಿತ ಈ ವರ್ಷ ಉತ್ಕರ್ಷದ್ದಿದೆ ಮತ್ತು ಎಲ್ಲರಿಂದ ನಿಮಗೆ ಯಥೋಚಿತ ಸುಖ ಸಿಕ್ಕುವದು.

ಧಂದೆ ಕೂಲಿಯುವರಿಗೆ ಶ್ರಮಮಾನದಿಂದ ಹೆಚ್ಚು ಲಾಭ ಸಿಕ್ಕುವ ಯೋಗ ಈ ವರ್ಷವಿದೆ. ಇದರ ಪ್ರತೀತಿ ನವೆಂಬರ ೨೦ ರೊಳಗಾಗಿ ಮತ್ತು ಮುಂದೆ ಡಿಸೆಂಬರ ೩೦ ರಿಂದ ಫೆಬ್ರುವರಿ ೧೫, ಮಾರ್ಚ ೩೦ ರಿಂದ ಮೇ ೧೫ ಮತ್ತು ಅಗಸ್ಟ ೧೮ ರ ನಂತರದ ಕಾಲದಲ್ಲಿ ಖಾತ್ರಿಯಿಂದಾಗುವದು. ಸರ್ವ ಸಾಧಾರಣವಾಗಿ ಸಪ್ಟಂಬರ ೨೦ರ ವರೆಗೆ ಧಂದೆಯುವರಿಗೆ ಮತ್ತು ಮುಂದಿನ ಕಾಲದಲ್ಲಿ ನೌಕರರಿಗೆ ಬಹಳ ಉತ್ಕರ್ಷದ ಕಾಲ. ಅನೇಕ ದೃಷ್ಟಿಯಿಂದ ಭಾಗ್ಯೋದಯಕ್ಕೆ ಪೋಷಕವಾದ ಸಂಗತಿಗಳು ಸಂಭವಿಸುವವು. ಅನೇಕರಿಗೆ ಲಾಟರಿ, ಸಟ್ಟಾ, ಚಕ್ರಬಂಧಸ್ಪರ್ಧೆ, ವಾರಸಾ ಮೊದಲಾದ ಯಾವದಾದರೊಂದು ಮಾರ್ಗದಿಂದ ಅಕಲ್ಪಿತವಾಗಿ ಬಹಳ ಹಣ ಸಿಗುವದು. ಈ ಬಗೆಯ ಯೋಗ ಬಹುಶಃ ನವೆಂಬರ ೩ರಿಂದ ಜನೆವರಿ ೧, ಮೇ ೧೩ ರಿಂದ ಜೂನ ೬, ಜುಲೈ ೧ ರಿಂದ ಅಗಸ್ಟ ೧೯ ಮತ್ತು ಅಕ್ಟೋಬರ ೫ ರಿಂದ ೩೧ ಈ ಅವಧಿಯಲ್ಲಿ ಹೆಚ್ಚಿಗೆ ಇದೆ. ನೌಕರರ ಮೇಲೆ ವರಿಷ್ಠರ ಮರ್ಜಿ ಸಪ್ಟಂಬರ ೨೦ ರಿಂದ ಬಹಳ ಹೆಚ್ಚು. ಬದಲಿಯಾಗುವ ಖಾತೆಯಿದ್ದರೆ ಬಡತಿಯ ಮೇಲೆ ಬದಲಿಯಾಗುವದು. ಆದರೆ ೫ ನೇ ಗುರು ಇದ್ದಾಗ ಆಗುವದಾದರೆ ಮಾತ್ರ ಅನನುಕೂಲ ಸ್ಥಳಕ್ಕೆ ಉಳಿದ ಕಾಲದಲ್ಲಿ ಆದರೆ ಪೂರ್ಣ ಅನುಕೂಲ ಸ್ಥಳಕ್ಕೆ ಆಗುವದು. ಆದರೆ ಕೈಕೆಳಗಿನವರು ಮಾತ್ರ ನೀವು ಎಷ್ಟೊಂದು ದೊಡ್ಡತನದಿಂದ ವರ್ತಿಸಿದರೂ ಅಸಂತುಷ್ಟರೇ ಉಳಿಯುವರು ಮತ್ತು ಯಾವಾಗಲೂ ದೋಷ ತೆಗೆಯುವರು. ಧಂದೆಯುವರಿಗೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರ ವರೆಗೆ ಬಹಳ ಉತ್ಕರ್ಷವಾಗಿ ಅದು ಹಬ್ಬುವದು.

ದಾವೆ, ಖಟ್ಲೆ, ಸ್ಪರ್ಧೆಯ ಕೆಲಸಗಳಲ್ಲಿ ಈ ವರ್ಷ ಬಹಳ ದಗದಗಿಯುದು ಮತ್ತು ವೆಚ್ಚವೂ ಅಂದಾಜಿಗಿಂತ ಬಹಳ ಹೆಚ್ಚು. ಇಷ್ಟು ಮಾಡಿಯೂ ಕೆಲ ಕೆಲಸಗಳಲ್ಲಿ ಶತ್ರುವಿಗೆ ಶರಣುಹೋಗಬೇಕಾಗುವದು. ಅರ್ಧಮರ್ಧ ಕೆಲಸ ನಿಮ್ಮಂತೆ ಆಗುವವು. ನವಂಬರ ೨೦ ರೊಳಗಾಗಿ ಮತ್ತು ಮುಂದೆ ಮಾರ್ಚ ೩೦ ರಿಂದ ಮೇ ೧೫ ಮತ್ತು ಅಗಷ್ಟ ೧೮ ರಿಂದ ಅಕ್ಟೋಬರ ೪ರೊಳಗಾಗಿ ಆಗುವ ನಿರ್ಣಯಗಳು ನಿಮಗೆ ಯಶಸ್ಸನ್ನು ತಂದುಕೊಡುವಂಥವಾಗುವವು ಎಂಬುದು ನಿಃಸಂಶಯ.

ಈ ವರ್ಷ ಹಡೆಯುವ ಸ್ತ್ರೀಯರಿಗೆ ಬಹುಶ: ಗಂಡು ಹುಟ್ಟುವವು. ಆದರೆ ೫ ನೇ ಗುರು ಇದ್ದಾಗ ಅಂದರೆ ಫೆಬ್ರುವರಿ ೨೨ ರೊಳಗಾಗಿ ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರೊಳಗಾಗಿ ಹಡೆಯುವವರ ಪ್ರಸೂತಿ ಸುಲಭವಾಗಿ ಕೂಸು ನಿರೋಗಿಯಿರುವವು. ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರೊಳಗಾಗಿ ಹಡೆಯುವವರು ಬಹಳ ಕಷ್ಟದಿಂದ ಹಡೆಯುವರು ಮತ್ತು ಕೂಸು ಕೂಡ ಅಶಕ್ತ ಹುಟ್ಟುವವು. ಸಪ್ಟಂಬರ ೨೦ ರ ನಂತರ ಹಡೆಯುವವರಿಗಂತೂ ೩-೪ ದಿನ ಬಹಳ ಕಷ್ಟ ಸಹಿಸಬೇಕಾಗುವದು. ಆದರೆ ಕೂಸು ಮಾತ್ರ ಬಹಳ ಸುಂದರ ಸಶಕ್ತ ಮತ್ತು ಮುಂದೆ ಕೀರ್ತಿವಂತನಾಗುವಂತಹದು ಹುಟ್ಟುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೨೨ ರಿಂದ ಎಪ್ರಿಲ ೧೦ ರೊಳಗಾಗಿ ಆಗುವದೊ ಆ ವಿದ್ಯಾರ್ಥಿಗಳು ಒಳ್ಳೆ ಹುಷಾರ ಇದ್ದರೆ ಮಾತ್ರ ಪಾಸಾಗುವರು. ಫೆಬ್ರುವರಿ ೨೦ ರೊಳಗಾಗಿ, ಮತ್ತು ಎಪ್ರಿಲ ೧೦ ರಿಂದ ಸಪ್ಟಂಬರ ೨೦ ರವರೆಗೆ ಪರೀಕ್ಷೆ ಇದ್ದವರು ಬಹುಶಃ ಮೇಲಿನ ವರ್ಗ ಪಡೆಯುವರು. ಸಪ್ಟಂಬರ ೨೦ ರ ನಂತರ ಹುಷಾರ ಇದ್ದರು ಕೂಡ ಹೇಗಾದರೂ ಪಾಸಾಗುವರು.

|| ಶುಭಂ ಭವತು ||



# ವೈಷ್ಣವ ಮತದ ವಿವಿಧ ಸಂಪ್ರದಾಯಗಳು: ಸಾಮ್ಯ, ವೈಷಮ್ಯ

ಲೇಖಕರು: ಡಾ|| ಬಿ. ಎನ್. ಕೃಷ್ಣಮೂರ್ತಿ ಶರ್ಮಾ, ಎಂ. ಎ., ಪಿಎಚ್. ಡಿ.

ವೈಷ್ಣವ ಮತವು ಏಕೇಶ್ವರವಾದಿಯಾದ ಒಂದು ಧಾರ್ಮಿಕ ದರ್ಶನ. ಏಕೇಶ್ವರವಾದವೆಂದರೆ ಒಬ್ಬನೇ ನಿಜವಾದ ದೇವರ ಆರಾಧನೆ. ಅದು ಕ್ರೈಸ್ತ ಮತ್ತು ಇಸ್ಲಾಮು ಧರ್ಮಗಳಂತೆ ಅನ್ಯ ದೇವತೆಗಳ ಅಸ್ತಿತ್ವವನ್ನೇ ನಿರಾಕರಿಸಬಹುದು. ಅಥವಾ ಅದು ತಾರತಮ್ಯಸಹಿತವಾಗಿ ಅನೇಕ ದೇವತೆಗಳನ್ನೊಪ್ಪಿಕೊಂಡು, ಅವರೆಲ್ಲರೂ ಆ ಪರಮಪುರುಷನಿಗೆ ಅಧೀನರೆಂದಾದರೂ ಹೇಳಬಹುದು. ಭಾರತೀಯ ಏಕೇಶ್ವರವಾದವು ಎರಡನೇ ಮಾದರಿಗೆ ಸೇರಿದ್ದು. ಆದರೆ ಬಿಡಿಸಿ ನೋಡಿದರೆ ವೈಷ್ಣವ ಮತದಲ್ಲಿ ಅನ್ಯದೇವತೆಗಳೆಲ್ಲ ತುಂಬ ಉತ್ಕ್ರಾಂತಿ ಹೊಂದಿದ 'ಜೀವ'ರೇ ಆಗಿರುವುದರಿಂದ ದೇವರುಗಳ ಬಹುತ್ವದ ಪ್ರಶ್ನೆಯೇ ಉದ್ಭವಿಸುವದಿಲ್ಲ. ರಾಮಾನುಜಾಚಾರ್ಯರು ಬ್ರಹ್ಮಸೂತ್ರ ಭಾಷ್ಯದಲ್ಲಿ (೧, ೧, ೧) ಹೇಳುವುದನು ನೋಡಿರಿ.

ಆಬ್ರಹ್ಮಸ್ತಂಬಪರ್ಯಂತಾಃ
ಪ್ರಾಣಿನಃ ಕರ್ಮವಶಗಾಃ ||

ಮಧ್ವಾಚಾರ್ಯರೂ ಹೀಗೇ ಹೇಳುತ್ತಾರೆ:

ಜೀವಾ ಬ್ರಹ್ಮಾದಯಃ ಪ್ರೋಕ್ತಾ
ಆತ್ಮೈಕಸ್ತು ಜನಾರ್ದನಃ ||

ವೈಷ್ಣವ ಮತದ ಮೂಲವು ಋಗ್ವೇದದಲ್ಲೇ ಇದೆ. ಋಗ್ವೇದವು ಅನೇಕ ದೇವತೆಗಳಲ್ಲೊಬ್ಬನೆಂದು ವಿಷ್ಣುವನ್ನು ಉಲ್ಲೇಖಿಸಿಲ್ಲ. "ಬಹುವಿನಲ್ಲಿ ಒಂದನ್ನು" ಅನ್ವೇಷಿಸುವ ವೈದಿಕ ಋಷಿಗಳ ಪ್ರಯತ್ನವು ವಿಷ್ಣುವಿನಲ್ಲಿ ಪರಿಸಮಾಪ್ತಿ ಹೊಂದಿದಂತೆ ಕಾಣುತ್ತದೆ. ಋಗ್ವೇದ ಸೂಕ್ತಗಳು ವಿಷ್ಣುವನ್ನು 'ಭುವನಸ್ಯ ಗರ್ಭ'ವೆಂದು ವರ್ಣಿಸುತ್ತವೆ.

ಸಪ್ತಾರ್ಧಗರ್ಭಾ ಭುವನಸ್ಯ ರೇತೋ
ವಿಷ್ಣೋಸ್ತಿಷ್ಠಂತಿ ಪ್ರದಿಶಾ ||
(ಋ. ೧, ೧೬೪, ೩೬)

ಈ ಹೇಳಿಕೆಯನ್ನು

ಏಕಂ ಸತ್ ವಿಪ್ರಾ ಬಹುಧಾ ವದಂತಿ |
(ಋ. ೧, ೧೬೪, ೪೬)

ಎಂಬ ಪ್ರಸಿದ್ಧ ವಾಕ್ಯದಿಂದ ಮುಕ್ತಾಯಗೊಳಿಸಲಾಗಿದೆ. ಒಂದೇ ಸತ್ತನ್ನು (ವಿಷ್ಣು) ಬಲ್ಲವರು ಇಂದ್ರ, ಮಿತ್ರ ಮೊದಲಾದ ಹಲವು ಹೆಸರುಗಳಿಂದ ಕರೆಯುತ್ತಾರೆ ಎಂದು ಹೇಳುವ ಋಗ್ವೇದದ ಈ ವಾಕ್ಯವು ವೈಷ್ಣವ ಮತದ ಸಿದ್ಧಾಂತಕ್ಕೆ ಒಂದು ಮುಖ್ಯ ಪ್ರಮಾಣವಾಗಿದೆ. ಆದರೆ ಮಧ್ವಾಚಾರ್ಯರು ಅದನ್ನು ತಮ್ಮ ಮತದ ಮುಖ್ಯಾಧಾರವಾಗಿ ಮಾಡಿಕೊಳ್ಳುವ ವರೆಗೂ ಅದರ ಮಹತ್ವವನ್ನು ಯಾರೂ ಗಮನಿಸಲಿಲ್ಲ.

ಋಗ್ವೇದದ ಪ್ರಸಿದ್ಧ 'ನಾಸದೀಯ ಸೂಕ್ತ'ವು 'ಸೃಷ್ಟಿಯ ಆದಿಯಲ್ಲಿ ತಮಸ್ಸಿನ ಸಾಗರದಲ್ಲಿ ತನ್ನ ಸತ್ವದಿಂದ ಗಾಳಿಯಿಲ್ಲದೆ ಉಸಿರಾಡುತ್ತಿದ್ದ 'ಆ ಒಂದನ್ನು' (ತತ್ ಏಕಮ್)' ಕುರಿತು ಹೇಳುತ್ತದೆ. 'ಸಾಗರಶಾಯಿ'ಯಾದ ಇದೇ ಮುಂದಿನ ಯುಗದ 'ನಾರಾಯಣ.' ಮ್ಯಾಕ್ಡೊನೆಲ್ಲರಂಥ ಆಧುನಿಕ ವೈದಿಕ ವಿದ್ವಾಂಸರು ಕೂಡ 'ಋಗ್ವೇದದಲ್ಲಿ ವಿಷ್ಣುವಿನ ವ್ಯಕ್ತಿತ್ವವನ್ನು ಸೂಕ್ತಸಂಖ್ಯಾಮಾನದಿಂದ ಗಣಿಸುವುದು ಸರಿಯಲ್ಲ. ಅದು ತೋರಿಕೆಗಿಂತ ಮಹತ್ವದ್ದಾಗಿದೆ' ಎಂದೊಪ್ಪಿದ್ದಾರೆ.* ವಿಷ್ಣುವಿನ ವಿಶೇಷಣಗಳು ವಿಶ್ವೋತ್ಪತ್ತಿ ಕಾರಣ ಮತ್ತು ವಿಶ್ವಸ್ಥಿತಿ ಕಾರ್ಯಗಳ ವಾಚಕವಾಗಿವೆ. ದೈವಭಕ್ತರಾದ ಜನರು ಸುಖವನ್ನನುಭವಿಸುತ್ತಿರುವ ವಿಷ್ಣುಲೋಕದ ಪ್ರಾಪ್ತಿಯು ವೇದಕಾಲದಲ್ಲಿ ಮಾನವನ ಪರಮಧ್ಯೇಯವಾಗಿತ್ತು. (ಕಠೋಪನಿಷತ್ತನ್ನು ನೋಡಿರಿ.) ಐತರೇಯ ಬ್ರಾಹ್ಮಣದಲ್ಲಿ ವಿಷ್ಣುವನ್ನು ದೇವತೆಗಳ ಹಿರಿಯನೆಂದು ಹೇಳಿದೆ:

ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ
ಪರಮಃ |
ತದಂತರಾ ಸರ್ವಾ ದೇವತಾಃ ||

ಐತಿಹಾಸಿಕ ಕಾಲಕ್ಕೆ ಬಂದರೆ, ಕ್ರಿಸ್ತಪೂರ್ವ ೩ನೇ ಶತಕಕ್ಕಾಗಲೇ ಉತ್ತರ ಭಾರತದಲ್ಲಿ ವೈಷ್ಣವ ಮತವು ಉಚ್ಛ್ರಾಯ ಹೊಂದಿತ್ತೆಂಬುದಕ್ಕೆ ಆಧಾರಗಳಿವೆ. ಪತಂಜಲಿಯ ಮಹಾಭಾಷ್ಯದಲ್ಲಿ (ಕ್ರಿ. ಪೂ. ೧೫೦) 'ಭಗವಾನ್ ವಾಸುದೇವನ' ಆರಾಧನೆಯ ಪ್ರಸ್ತಾಪವಿದೆ. ಭಾರತೀಯ ರಾಜನಾದ ಭದ್ರರಾಜನ ಆಸ್ಥಾನದಲ್ಲಿ ಗ್ರೀಕ ಮಹಾರಾಜ ಅಂತಿಯೋಲ್ಕಿಯ ರಾಯಭಾರಿಯಾಗಿದ್ದ ಹೆಲಿಯೋಡೋರಸ್ಸನು ಸ್ವತಃ ಭಾಗವತ ಧರ್ಮವನ್ನು ಸ್ವೀಕರಿಸಿ (ಈಗ ಭಿಲಸಾದಲ್ಲಿರುವ) ಹೆಲಿಯೋಡೋರಸ ಸ್ತಂಭವೆನಿಸಿದ ಗರುಡಗಂಬವನ್ನು ನಡಿಸಿದ್ದನು. ವೈಷ್ಣವ ಧರ್ಮವು ಪರದೇಶದ ಜನರಲ್ಲಿಯೂ ಹಬ್ಬಿ ಅವರನ್ನು ಪಾವನಗೊಳಿಸಿ ಹಿಂದೂ ಧರ್ಮದಲ್ಲಿ ಸೇರಿಸಿಕೊಂಡಿತೆಂದು ಶ್ರೀಮದ್ ಭಾಗವತದಲ್ಲಿ ಉಕ್ತವಾದುದನ್ನು ಇದು ದೃಢೀಕರಿಸುತ್ತದೆ:

ಕಿರಾತ ಹೂಣಾಂಧ್ರ ಪುಲಿಂದ ಪುಲ್ಕಸಾ
ಆಭೀರಕಂಕಾ ಯವನಾಃ ಶಕಾದಯಃ |
ಯೇಽನ್ಯೇ ಚ ಪಾಪಾ ಯದುಪಾಶ್ರಯಾ-
ಶ್ರಯಾತ್
ಶುದ್ಧ್ಯಂತಿ ತಸ್ಮೈ ಪ್ರಭವಿಷ್ಣವೇ ನಮಃ ||

'ಪುರಾಣನೂರು' ಎಂಬ ಕ್ರಿಸ್ತಪೂರ್ವದ ತಮಿಳು ಗ್ರಂಥದಲ್ಲಿ ವಿಷ್ಣುವನ್ನು 'ಗರುಡಧ್ವಜ'ನೆಂದು ಹೇಳಿದೆ. ದಕ್ಷಿಣ ಭಾರತದಲ್ಲಿ ವಿಷ್ಣುಪೂಜೆಯಿತ್ತೆಂದು ಕ್ರಿ. ಶ. ಎರಡನೇ ಶತಮಾನದ 'ಸಿಲಪ್ಪಾಧಿಕಾರಂ' ಗ್ರಂಥವು ಉಲ್ಲೇಖಿಸುತ್ತದೆ. ಅಂದಬಳಿಕ ದಕ್ಷಿಣೋತ್ತರ ಭಾರತಗಳೆರಡರಲ್ಲೂ ಕ್ರಿ. ಪೂ. ಮೂರು ನಾಲ್ಕು ಶತಕಗಳಿಂದಲೇ ವೈಷ್ಣವ ಧರ್ಮ ಪ್ರಚಲಿತವಿತ್ತೆಂದಾಯಿತು. ಅದರ ಇತಿಹಾಸ ದೀರ್ಘವಾಗಿದೆ. ಅದು ಕಾಲಾಂತರದಲ್ಲಿ ಪರಿವರ್ತನೆ ಹೊಂದುತ್ತ ಬಂದಿದೆಯೆಂಬುದು ನಿಜ. ಆದರೆ ಅದು ಸರ್ವಕಾಲಗಳಲ್ಲಿಯೂ ಷಾಡ್ಗುಣ್ಯಗಳೇ ಇರಲಿ, ಅದಕ್ಕೂ ಹೆಚ್ಚಿಗಿರಲಿ, ಸವಿಶೇಷ, ಕಲ್ಯಾಣಗುಣಪರಿಪೂರ್ಣನಾದ ಪರಮಪುರುಷನಲ್ಲಿ ಅವಿಚಲ ನಿಷ್ಠೆಯನ್ನಿಟ್ಟುಕೊಂಡಿದೆ.

ವೇದ ಮತ್ತು ವೇದೋತ್ತರ ಕಾಲಗಳಲ್ಲಿ ವೈಷ್ಣವ ಮತದ ಹಲವು ಧಾರೆಗಳಿದ್ದಂತೆ ಕಾಣುತ್ತದೆ. ಅವೆಲ್ಲವುಗಳ ಇತಿಹಾಸ ಇನ್ನೂ ಸಂಶೋ-

* Vedic Mythology, P. 37.

ಥನೆಯ ವಿಷಯವಾಗಿದೆ. ವೈದಿಕ ಮತ್ತು ಪಾಂಚರಾತ್ರಿಕ ಎಂಬೆರಡು ಅದರ ಮುಖ್ಯ ಉಗಮಗಳೆಂದು ಹೇಳಬಹುದು. ಪಂಚರಾತ್ರ ಸಂಪ್ರದಾಯದ ಮೂಲವಿನ್ನೂ ರಹಸ್ಯವಾಗಿಯೇ ಇದೆ. ಆದರೆ ಪಂಚರಾತ್ರವು ಪೌರುಷೇಯ ಮತ್ತು ಅಪೌರುಷೇಯ ಇವೆರಡೂ ಸಾಹಿತ್ಯಗಳನ್ನೊಳಗೊಂಡಿತ್ತೆಂಬ ಅಂಶವು ಗಮನಾರ್ಹವಾಗಿದೆ. ಮೂಲಶ್ರುತಿ ಅಥವಾ ಏಕಾಯನ ಶಾಖೆಯು ಛಾಂದೋಗ್ಯದಲ್ಲಿಯೂ ಬೇರೆಡೆಯಲ್ಲಿಯೂ 'ವಾಚೋ ವಾಕ್ಯಂ' ಎಂದು ಗೌರವದಿಂದ ಉಲ್ಲೇಖಿಸಲ್ಪಟ್ಟಿದೆ. ಅನೇಕ ಪುರಾತನ ಪಾಂಚರಾತ್ರಿಕ ಗ್ರಂಥಗಳಲ್ಲಿ ಭಗವಂತನ ಆರು ಮುಖ್ಯ ಗುಣಗಳು ಪ್ರಸ್ತಾಪಿಸಲ್ಪಟ್ಟಿವೆ. ವಿಷ್ಣು ಪುರಾಣದಲ್ಲಿ

ಷಣ್ಣಾಂ ಭಗ ಇತೀರಣಾ ।

ಎಂದೂ ಶಾಂಕರ ಗೀತಾಭಾಷ್ಯದಲ್ಲಿ

ಸ ಭಗವಾನ್ ಜ್ಞಾನೈಶ್ವರ್ಯಶಕ್ತಿಬಲ-
ವೀರ್ಯತೇಜೋಭಿಃ ಸದಾ ಸಂಪನ್ನಃ ॥
(೧, ೧)

ಎಂದೂ ರಾಮಾನುಜೀಯ ಗೀತಾಭಾಷ್ಯದ ಟೀಕೆಯಲ್ಲಿ ವೇದಾಂತ ದೇಶಿಕರು

ಸಮಸ್ತಗುಣವೃಂದ ಪ್ರಧಾನತಯಾ ಷಾಡ್ಗು-
ಣ್ಯಸ್ಯ । ತದಾಸಂಖ್ಯಗುಣಸ್ಯಾಪಿ ಷಡೇವ
ಪ್ರಥನೇ ಗುಣಾಃ ಇತ್ಯಾಹುಃ ॥

ಎಂದೂ ಹೇಳಿದ್ದುಂಟು.

ಗ್ರಂಥಲಿಪಿಯಲ್ಲಿರುವ ಒಂದು ಪಲ್ಲವ ಶಾಸನದಲ್ಲಿ ವಿಷ್ಣುವಿನ ದಶಾವತಾರಗಳ ವಿವರಗಳಿವೆ. ಹತ್ತನೇ ಶತಮಾನದವರೆಗೆ ತಮಿಳು ಆಳ್ವಾರ ವೈಷ್ಣವರು ವೈಷ್ಣವ ಮತಕ್ಕೆ ಮಹದುಪಕಾರ ಮಾಡಿದರು. ರಾಮಾನುಜರು ಉಲ್ಲೇಖಿಸಿದ ಪ್ರಾಚೀನ ವೇದಾಂತ ಭಾಷ್ಯಕಾರರಾದ ಬೋಧಾಯನ, ದ್ರಮಿಡ, ಟಂಕ ಮೊದಲಾದವರು ತಮ್ಮ ಸೂತ್ರಗಳಲ್ಲಿ ವೈಷ್ಣವ ಮತದ ಪ್ರಮಾಣಮೂಲಗಳನ್ನು ಸೂಚಿಸಿದ್ದರೆ ಅದರ ಇತಿಹಾಸವು ಹರಿಗಡಿಯದೆ ನಮಗೆ ಲಭ್ಯವಾಗುತ್ತಿತ್ತು.

*

ವೈಷ್ಣವ ಮತದಲ್ಲಿ ಸ್ಪಷ್ಟಭೇದವುಳ್ಳ ವಿವಿಧ ಶಾಖೆಗಳನ್ನು ನಾವು ಕಾಣುವುದು ಮಧ್ಯಯುಗದಿಂದಲೇ. ಆಗ ನಾವು ರಾಮಾನುಜ, ವಿಷ್ಣುಸ್ವಾಮಿ, ನಿಂಬಾರಕ, ಮಧ್ವ, ವಲ್ಲಭ ಮತ್ತು ಚೈತನ್ಯರ ಪಂಥಗಳನ್ನು ಗುರುತಿಸುತ್ತೇವೆ. ವಿಷ್ಣುಸ್ವಾಮಿಯ ಬಗ್ಗೆ ಸರಿಯಾದ ವಿವರಗಳು ದೊರೆತಿಲ್ಲ. ನಿಂಬಾರಕರ ಪಂಥವು ಉತ್ತರ ಭಾರತದಲ್ಲಿ ಜನಪ್ರಿಯವಾಗಿದೆ ಅದರ ಬಗ್ಗೆ ಸಂಸ್ಕೃತದಲ್ಲಿ ನಿಂಬಾರಕರ ಬ್ರಹ್ಮಸೂತ್ರ ಭಾಷ್ಯ, ಅವರ ದಶಶ್ಲೋಕಿ, ಅವರ ಶಿಷ್ಯರಾದ ಕೇಶವ ಕಾಶ್ಮೀರಿ ಮೊದಲಾದವರ ಗ್ರಂಥಗಳೇ ಮೊದಲಾದವುಗಳು ಇವೆ. ಅವರ ಪಂಥವನ್ನು "ದ್ವೈತಾದ್ವೈತ'' ವೆಂದು ಕರೆಯಲಾಗುತ್ತದೆ. ಅವರಲ್ಲಿ ರಾಧಾಕೃಷ್ಣಪೂಜೆಗೂ ಪ್ರಪತ್ತಿಗೂ ಪ್ರಾಧಾನ್ಯವುಂಟು. ಬ್ರಹ್ಮ, ಆತ್ಮಗಳು ಮತ್ತು ಜಡಪ್ರಕೃತಿ ಇವು ಮೂರು ಭಿನ್ನಭಿನ್ನ ಪದಾರ್ಥಗಳೆಂದು ಅದರ ಸಿದ್ಧಾಂತ. ಜಡಪ್ರಕೃತಿ ಮತ್ತು ಜೀವರಾಶಿಮಯವಾದ ಜಗತ್ತು ಪರಮಾತ್ಮನಿಗೆ ಅಧೀನವಾಗಿಯೇ ಇರುತ್ತವೆ; ನಡೆಯುತ್ತವೆ. ಅವಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ಈ ಅರ್ಥದಲ್ಲಿ ಅವು ಏಕೀಭೂತವಾಗಿವೆ. ಇದು ನಿಂಬಾರಕರ ಸಿದ್ಧಾಂತದ ಸಾರ.

ಇವೆಲ್ಲ ವೈಷ್ಣವ ಶಾಖೆಗಳಲ್ಲಿ ಒಂದು ಸಾಮಾನ್ಯ ವಿಚಾರವಿದೆ. ಅದ್ವೈತದ ಮಾಯಾವಾದವನ್ನು ಅವೆಲ್ಲವೂ ನಿರಾಕರಿಸುತ್ತವೆ ಮತ್ತು ವಿಷ್ಣುಸೃಷ್ಟವಾದ ಜಗತ್ತನ್ನು ಸತ್ಯವೆಂದು ಅವು ಒಪ್ಪುತ್ತವೆ. ವೈಷ್ಣವ ಮತದಲ್ಲಿ ದೇವರು (ಅಥವಾ ಬ್ರಹ್ಮವು) ಸೃಷ್ಟಿಕರ್ತನಾದ್ದರಿಂದ ಅವನು ಸಗುಣ ಮತ್ತು ಸವಿಶೇಷನೆಂಬುದು ಒಂದು ಅಸಂದಿಗ್ಧ ಸಿದ್ಧಾಂತ. ('ಕರ್ತೃತ್ವಾತ್ ಸಗುಣಂ ಬ್ರಹ್ಮ' -ಭಾಗವತ). ಆದ್ದರಿಂದಲೇ ಅವನ ವೈಭವಪ್ರತೀಕವಾದ ಈ ಜಗತ್ತೂ ಸತ್ಯವೂ ನಿಜವೂ ಆಗಿರಬೇಕು. 'ಏಕಮೇವಾದ್ವಿತೀಯಂ ಬ್ರಹ್ಮ'ದ ಮೇಲೆ ಮಾಯೆ ಕವಿದುದರಿಂದ ಈ ಜಗತ್ತು ಉಂಟೆಂಬ ಭ್ರಮೆ ನಮಗಾಗುತ್ತದೆಂಬ ಮಾಯಾವಾದವನ್ನು ಎಲ್ಲ ವೈಷ್ಣವ ಶಾಖೆಗಳೂ ನಿರಾಕರಿಸುತ್ತವೆ. ಯಾದವಪ್ರಕಾಶ, ವಲ್ಲಭ ಮೊದಲಾದ ಕೆಲ ವೈಷ್ಣವ ಪಂಥಗಳು ವಿಶ್ವದೇವತಾವಾದಿ (ಅಂದರೆ ಎಲ್ಲವೂ ದೇವರು ಎಂಬ ವಾದ)ಗಳಾಗಿರಬಹುದಾದರೂ ವಿವರ

ವಾದವನ್ನು ಎಲ್ಲರೂ ನಿರಾಕರಿಸುತ್ತಾರೆ. ಮಹಾರಾಷ್ಟ್ರ ಮೊದಲಾದೆಡೆಗಳಲ್ಲಿ ವೈಷ್ಣವ ಭಕ್ತಿ ಮತ್ತು ಅದ್ವೈತವನ್ನು ಎರಕ ಹೊಯ್ಯುವ ಪ್ರಯತ್ನಗಳಾಗಿದ್ದರೂ ವೈಷ್ಣವ ಮತದ ಆಧ್ಯಾತ್ಮಿಕ ದೃಷ್ಟಿಯೂ ಅದ್ವೈತದ್ದೂ ಮೂಲತಃ ಭಿನ್ನ ಮತ್ತು ಪರಸ್ಪರ ವಿರುದ್ಧವಾಗಿರುವುದರಿಂದ ಇಂಥ ಪ್ರಯತ್ನವೆಲ್ಲವೂ ಕೃತಕ ಮತ್ತು ವ್ಯರ್ಥವೆಂದು ತಿರಸ್ಕರಿಸಬೇಕಾಗುವುದು. ವೈಷ್ಣವರು ಸಾಕಾರ ಪರಮಾತ್ಮನನ್ನು ಪೂಜಿಸುವರೆಂಬ ಭಾವನೆಯನ್ನು ಹುಟ್ಟಿಸಲು ಅದ್ವೈತ ಪಂಥವು ಪ್ರಯತ್ನಿಸಿದ್ದುಂಟು. ಆದರೆ ಜನರಂಜಕ ವೈಷ್ಣವ ಧರ್ಮಗಳನ್ನು ಬದಿಗಿಟ್ಟು ಪ್ರಮುಖ ವೈಷ್ಣವ ಪಂಥಗಳನ್ನು ಅವಲೋಕಿಸಿದಲ್ಲಿ, ರಾಮಾನುಜರು ಮತ್ತು ಮಧ್ವರು, ವಿಶೇಷವಾಗಿ ಮಧ್ವರು ಪ್ರತಿಪಾದಿಸಿದ ಬ್ರಹ್ಮಲಕ್ಷಣವು ಈ ಭಾವನೆಗೆ ಆಸ್ಪದವೀಯುವುದಿಲ್ಲ. ಸಗುಣತ್ವ ಮತ್ತು ಸವಿಶೇಷತ್ವ ಎಂಬಿವು ದಾರ್ಶನಿಕ ಕಲ್ಪನೆಗಳಾಗಿದ್ದು ಜನಸಾಮಾನ್ಯದ ಸಾಕಾರತ್ವಕಲ್ಪನೆಗೂ ಅವುಗಳಿಗೂ ಏನೂ ಸಂಬಂಧವಿಲ್ಲ.

*

ಭಾಗವತ ಪುರಾಣದಲ್ಲಿ ಬ್ರಹ್ಮ, ಪರಮಾತ್ಮ ಮತ್ತು ಭಗವಾನ್ ಎಂಬ ಶಬ್ದಗಳು ಸಮಾನಾರ್ಥಕಗಳೆಂದು ಹೇಳಿದೆ. 'ಭಗವಾನ್' ಎಂದರೆ ಭೌತಿಕ ಉಪಾಧಿಗಳಿಂದ ರಹಿತವಾದ ಪರತತ್ವ (ವಿನಾ ಹೇಯೈರ್ಗುಣಾದಿಭಿಃ) ವೆಂದೂ ಅದಕ್ಕೆ 'ಜ್ಞಾನಶಕ್ತಿಬಲೈಶ್ವರ್ಯ' ಮೊದಲಾದ ಸದ್ಗುಣಗಳುಂಟೆಂದೂ ವಿಷ್ಣು ಪುರಾಣದ ಅಭಿಪ್ರಾಯ. ಭಾಗವತ ಸಂಪ್ರದಾಯದಿಂದ ಶಂಕರಾಚಾರ್ಯರು ಉದಾಹರಿಸಿದ ಅತಿ ಪ್ರಾಚೀನ ಏಕಾಯನ ಶ್ರುತಿಗಳು ಕೂಡ ವೈಷ್ಣವ ಧರ್ಮವು ಮೂಲತಃ ಸವಿಶೇಷ, ನಿರನಿಷ್ಟ, ನಿರವದ್ಯ ಮತ್ತು ಜ್ಞಾನ, ವೀರ್ಯ ಮೊದಲಾದ ಗುಣಗಳಿಂದ ಭರಿತನಾದ ಪರಮಾತ್ಮನನ್ನೊಪ್ಪಿತೆಂದು ತೋರಿಸುತ್ತದೆ. ವೈಷ್ಣವ ಪಂಥವು ಪರಮಾತ್ಮನ ಸೃಷ್ಟಿಯಲ್ಲಿ ಉದ್ದೇಶವನ್ನು ಕಂಡಿತಾದರೆ ಮಾಯಾಪ್ರಭಾವದಿಂದ ಉಂಟಾದ ಮಿಥ್ಯಾ ಜಗತ್ತಿನಲ್ಲಿ ಯಾವುದೇ ಉದ್ದೇಶವನ್ನು ಕಾಣಲು ಅದ್ವೈತಿಗಳು ಸಿದ್ಧರಿರಲಿಲ್ಲ. (ಶಂಕರಾಚಾರ್ಯರು 'ನ ಚೇಯಂ ಪರಮಾರ್ಥವಿಷಯಾ ಸೃಷ್ಟಿಶ್ರುತಿಃ' ಎಂಬ ಬ್ರಹ್ಮಸೂತ್ರಕ್ಕೆ ಬರೆದ ಭಾಷ್ಯ ನೋಡಿರಿ.)

ವೇದಕಾಲಾನಂತರ ಪಂಚರಾತ್ರಾಗಮವು ವೈಷ್ಣವ ಪಂಥದ ದರ್ಶನ, ಸೃಷ್ಟಿರಚನಾ ಕಲ್ಪನೆ, ಆಚಾರಗಳಿಗೆ ಹಲವು ರಂಜಕವಾದ ವಿಚಾರಗಳನ್ನು ಸೇರಿಸಿತು. ಅದು ವೈಷ್ಣವ ಧರ್ಮದ ಅಂಗಾಂಗಗಳನ್ನು ಸಂಕೇತ, ತಂತ್ರ, ರಹಸ್ಯ ಮತ್ತು ಅನುಭಾವಗಳ ಅಲಂಕಾರಗಳಿಂದ ಸಿಂಗರಿಸಿತು. ಇದರಲ್ಲಿ ಬಹ್ವಂಶವನ್ನು ಮಾಧ್ವ ಸಂಪ್ರದಾಯದಲ್ಲಿ ಉಳಿಸಿಕೊಳ್ಳಲಾಗಿದೆ. ಲಕ್ಷ್ಮೀದೇವಿಯು ವೈಷ್ಣವ ದೇವತಾಗಣದಲ್ಲಿಯೂ ದೇವತಾಶಾಸ್ತ್ರದಲ್ಲಿಯೂ ಪ್ರಮುಖ ಪಾತ್ರವಹಿಸಿದಳು. ಆದರೆ ಸತ್ವಶಾಲಿ ತತ್ತ್ವಶಾಸ್ತ್ರಗಳಾದ ರಾಮಾನುಜ ಮತ್ತು ಮಾಧ್ವ ಸಂಪ್ರದಾಯಗಳಲ್ಲಿಯೇ ನಾವು ಲಕ್ಷ್ಮೀದೇವಿಯ ಸ್ಥಾನ, ಕಾರ ಮತ್ತು ಸ್ವರೂಪದ ನಿರ್ಣಯವನ್ನು ಕಾಣುತ್ತೇವೆ. ಆಳ್ವಾರರ ತಮಿಳು ವೈಷ್ಣವ ಮತವು ಲಕ್ಷ್ಮೀದೇವಿಯನ್ನು ಹೆಚ್ಚುಕಡಿಮೆ ಮಾತೆಯನ್ನಾಗಿ ಮತ್ತು ಜೀವಿಗಳ ಪರವಾಗಿ ಸಂಧಾನ ನಡೆಸುವ ದೇವತೆಯನ್ನಾಗಿ ಮಾಡಿತ್ತು. ಪ್ರೊ. ದಾಸಗುಪ್ತರು ಅವಳನ್ನು ಅನಾದಿ ದೇವತೆಯೆಂದೂ ದೈವೀಪ್ರೇಮ ಮತ್ತು ಸೃಷ್ಟಿಶಕ್ತಿಯ ಮೂರ್ತಿಯೆಂದೂ ಭಾವಿಸುತ್ತಾರೆ.* ಇದು ಅಷ್ಟು ಸರಿಯಲ್ಲ. ವೇದಾಂತದೇಶಿಕರು ತಮ್ಮ ಗೀತಾ ಟಿಪ್ಪಣಿಯಲ್ಲಿ ಲಕ್ಷ್ಮೀತತ್ವ ಮತ್ತು ವಿಷ್ಣುತತ್ವಗಳಲ್ಲಿ ಐಕ್ಯವಿರುವುದನ್ನು ನಿರಾಕರಿಸಿ ಎರಡೂ ಪೃಥಕ್ ತತ್ವಗಳೆಂದು ಪ್ರತಿಪಾದಿಸಿದ್ದಾರೆ.

ಲಕ್ಷ್ಮಿಗೆ ನಿಶ್ಚಿತವಾದ ಸ್ಥಾನ ನಿರ್ದಿಷ್ಟಪಡಿಸಲ್ಪಟ್ಟದ್ದು ಮಧ್ವಾಚಾರ್ಯರ ಶುದ್ಧ ವೈಷ್ಣವ ಮತದಲ್ಲಿಯೇ. ಅವಳು ಜಡಪ್ರಕೃತಿಯ ಅಭಿಮಾನಿ ದೇವತೆ; ಅವಳೇ ಪರಮಾತ್ಮನ ನಂತರ ಸಕಲ ಸೃಷ್ಟಿಯ ಚೈತನ್ಯತತ್ತ್ವ, ಅವಳು ಪರಮಾತ್ಮನಿಗೆ ಮಾತ್ರ ಕೆಳಗಿನವಳು; ಮತ್ತು ನಿತ್ಯಮುಕ್ತಳು. ಸಕಲ ಸೃಷ್ಟಿಯ ನಿಯಾಮಕಳು. ಋಗ್ವೇದದ ಅಂಭೃಣೀ ಸೂಕ್ತವು ಇದಕ್ಕೆ ಪೂರ್ಣ ಪ್ರಮಾಣವನ್ನೊದಗಿಸಿದೆ.

* Indian Philosophy Vd. III

ವೈದಿಕ ಕರ್ಮಕಾಂಡವನ್ನು ಪರಿವರ್ತಿಸಿ, ನಿಷ್ಕಾಮಕರ್ಮಕ್ಕೆ ಪ್ರಾಧಾನ್ಯವಿರುವ ಭಾಗವತ ಧರ್ಮವನ್ನಾಗಿ ರೂಪುಗೊಳಿಸಲಾಯಿತು. ಉಪನಿಷತ್ತಿನ 'ನೈಷ್ಕರ್ಮ್ಯ'ಕ್ಕೆ ನಿಜವಾದ ಅರ್ಥ 'ನಿಷ್ಕಾಮ ಕರ್ಮ'ವೆಂದು ಸ್ಥಾಪಿಸಿದ ಶ್ರೇಯಸ್ಸು ಭಾಗವತ ಸಂಪ್ರದಾಯಕ್ಕೆ ಸೇರಿದ್ದು. 'ತಂತ್ರಂ ಸಾತ್ವತಮಾಚಷ್ಟೇ ನೈಷ್ಕರ್ಮ್ಯಂ ಕರ್ಮಣಾಂ ಯತಃ' ಎಂದು ಭಾಗವತ ಹೇಳುತ್ತದೆ.

ಮಹಾಭಾರತದಲ್ಲಿ ಪಿಷ್ಟ (ಹಿಟ್ಟಿನ) ಪಶು ಯಜ್ಞವು ಕೃತಯುಗಧರ್ಮವೆಂದು ಉಲ್ಲೇಖವಿದೆ. ಈ ಅಭಿನವ ವ್ಯಾಖ್ಯೆಗೆ ರಾಮಾನುಜರು ತಮ್ಮ ಗೀತಾಭಾಷ್ಯದಲ್ಲಿ ಮನ್ನಣೆ ಕೊಡದೆ ವೇದಗಳನ್ನು 'ತ್ರೈಗುಣ್ಯವಿಷಯ'ಗಳೆಂದು ಹೇಳಿದ್ದಕ್ಕೆ ಸಂಕುಚಿತಾರ್ಥವನ್ನು ಮಾಡಿದರು. ಆದರೆ ವೈಷ್ಣವಾಚಾರ್ಯರಲ್ಲೆಲ್ಲ ಮಧ್ವರೇ ಉಪರಿಶ್ರವಾದಿ ಪ್ರಾಚೀನ ವೈಷ್ಣವರ ಕೃತಯುಗಧರ್ಮವಾದ ಪಿಷ್ಟಪಶು ಯಜ್ಞವನ್ನು ಪುನರುಜ್ಜೀವಿಸಿದರು.

ಭಕ್ತಿಯ ಕಲ್ಪನೆಯೂ ಹೀಗೆಯೇ ಅನೇಕ ರೂಪಾಂತರಗಳನ್ನು ಹೊಂದಿತು. ರಾಮಾನುಜರೂ ಅವರಂತೆ ವಲ್ಲಭಾದಿಗಳೂ ಮೋಕ್ಷವೆಂದರೆ (ಪರಮಾತ್ಮನೊಡನೆ)'ಪರಮಸಾಮ್ಯ'ವೆಂದು ಪ್ರತಿಪಾದಿಸಿದರು. ಆದರೆ ವೈಷ್ಣವ ಮತದ ಮುಖ್ಯ ತತ್ತ್ವಗಳಲ್ಲೊಂದಾದ ಜೀವ-ಪರಮಾತ್ಮರಲ್ಲಿನ ಸನಾತನ ಭೇದದೊಡನೆ ಈ ಸಾಮ್ಯದ ಕಲ್ಪನೆ ಚೆನ್ನಾಗಿ ಹೊಂದಲಿಲ್ಲ. ಸಾಮ್ಯದ ಭಾವನಾತ್ಮಕ ಪ್ರಯೋಜನವೇನೇ ಇರಲಿ, ಮಧ್ವರು ಪ್ರತಿಪಾದಿಸಿದ, ಇಲ್ಲಿಯೂ ಮೋಕ್ಷದಲ್ಲಿಯೂ ಜೀವ ಜೀವ ಮತ್ತು ಜೀವ-ಪರಮಾತ್ಮರ ಸ್ವರೂಪ ತಾರತಮ್ಯದ ಸಿದ್ಧಾಂತವು ಶೇಷತ್ವ (ಅಧೀನತ್ವ)ತತ್ತ್ವಕ್ಕೂ ನಿರ್ವಿವಾದವಾದ ಕರ್ಮಫಲ ಮತ್ತು ಸಾಧನಾತಾರತಮ್ಯದ ಸಿದ್ಧಾಂತಕ್ಕೂ ಹೆಚ್ಚು ಅನುಗುಣವಾಗಿದೆ. ಮೋಕ್ಷದಲ್ಲಿ ಕೂಡ ಮುಕ್ತಜೀವರ ಮತ್ತು ನಿತ್ಯಸೂರಿಗಳ ಸ್ವರೂಪವು ಪರಮಾತ್ಮನ ಇಚ್ಛೆಯನ್ನವಲಂಬಿಸಿದೆಯೆಂದು ವೇದಾಂತ ದೇಶಿಕರು ಒಪ್ಪುತ್ತಾರೆ. (ಮುಕ್ತನಿತ್ಯಯೋರಪಿ ಹಿ ತಾದೃಶಂ ಜ್ಞಾನಾದಿಕಂ ಪರಮಾತ್ಮಸಂಕಲ್ಪಾಧೀನಂ). ರಾಮಾನುಜ ಸಂಪ್ರದಾಯದಲ್ಲಿ 'ನಿತ್ಯಸೂರಿ'ಗಳೆಂಬ ಜೀವ ವರ್ಗವನ್ನು ಅಂಗೀಕರಿಸಲಾಗಿದೆ. ಇದು ಮಧ್ವರು ಪ್ರತಿಪಾದಿಸಿದ ಜೀವರಲ್ಲಿನ ಪರಸ್ಪರ ತಾರತಮ್ಯ ಸಿದ್ಧಾಂತಕ್ಕೆ ಅಪ್ರತ್ಯಕ್ಷ ಮನ್ನಣೆಯೇ ಸರಿ.

*

ವ್ಯಾವಹಾರಿಕ ಕ್ಷೇತ್ರದಲ್ಲಿ ವೈಷ್ಣವ ಸಂಪ್ರದಾಯಗಳಲ್ಲಿರುವ ಭೇದಗಳು, ಅವು ವರ್ಣಾಶ್ರಮ ಪದ್ಧತಿಯನ್ನು ಎಷ್ಟು ಮಟ್ಟಿಗೆ ಅಂಗೀಕರಿಸುತ್ತವೆಂಬದನ್ನು ಅವಲಂಬಿಸುತ್ತದೆ. ಉತ್ತರ ಭಾರತದಲ್ಲಿ ಪ್ರಚುರವಾದ ಚೈತನ್ಯ ಮೊದಲಾದ ಪಂಥಗಳು ಸುಧಾರಕದೃಷ್ಟಿಯನ್ನಿಟ್ಟುಕೊಂಡವುಗಳು. ರಾಮಾನುಜ ಹಾಗು ಮಧ್ವರ ಪ್ರಾಚೀನತರ ಸಂಪ್ರದಾಯಗಳು ಬಿಗಿಯಾದ ಶ್ರೌತ ಸ್ಮಾರ್ತ ವಿಧಿನಿಷೇಧಗಳನ್ನು ಮನ್ನಿಸುವ ಸನಾತನಿ ದೃಷ್ಟಿಯವು. ರಾಮಾನುಜರ ಸಂಪ್ರದಾಯದಲ್ಲಿಯೂ ತೆಂಗಲೆ, ವಡಗಲೆ (ದಕ್ಷಿಣ, ಉತ್ತರ) ಸಂಪ್ರದಾಯಗಳುಂಟು. ಅವು ಆಳ್ವಾರರ ತಮಿಳು ವೈಷ್ಣವ ಮತ ಮತ್ತು ರಾಮಾನುಜ ಹಾಗು ದೇಶಿಕರ ವೇದಾಂತಪದ್ಧತಿಗಳ ಪ್ರತೀಕಗಳಾಗಿದ್ದು ಅವುಗಳೊಳಗಿನ ಭೇದಗಳು ಸ್ಪಷ್ಟಗೋಚರವಾಗುತ್ತವೆ. ಮಾಧ್ವಸಂಪ್ರದಾಯದಲ್ಲಿಯೂ ಅಷ್ಟೊಂದು ಸ್ಫುಟವಾಗಿ ಅಲ್ಲದಿದ್ದರೂ ದಾಸಕೂಟದವರಲ್ಲಿ ಸುಧಾರಕವಾದದ ಅಂಶ ಕಂಡು ಬಾರದೆ ಇಲ್ಲ. ದೇವತಾತಾರತಮ್ಯ, ಆಚಾರ ಮೊದಲಾದವುಗಳಲ್ಲಿ ಮಾಧ್ವ ಸಂಪ್ರದಾಯಕ್ಕೂ ತೆಂಗಲೆಸಂಪ್ರದಾಯಕ್ಕೂ ಕೆಲ ಸಾಮ್ಯಗಳುಂಟು. ಲಕ್ಷ್ಮಿಯ ಸ್ಥಾನಮಾನ, ನಿತ್ಯಸಂಸಾರಿಗಳೆಂಬ ವರ್ಗದ ಜೀವಗಳ ಅಸ್ತಿತ್ವ, ಏಕಾದಶಿ ದಿನ ಶ್ರಾದ್ಧ ಮಾಡದಿರುವುದು ಇವುಗಳನ್ನು ಉದಾಹರಿಸಬಹುದು.

ರಾಮಾನುಜ ಸಂಪ್ರದಾಯವು, ಅದರಲ್ಲಿಯೂ ಆಳ್ವಾರ ಶಾಖೆಯು 'ಪ್ರಪತ್ತಿ'ಗೆ ಮೋಕ್ಷದ ಸುಲಭ ಉಪಾಯವೆಂದು ಮಹತ್ವ ಕೊಟ್ಟಿದೆ. ಇದನ್ನು ಗೀತೆಯ ಅ. ೧೮, ೬೬ ನೇ ಶ್ಲೋಕದಲ್ಲಿ ಹೇಳಿದ ಜಿಜ್ಞಾಸಾದಿ ವೈದಿಕ ಸಾಧನೆಗಳೊಡನೆ ಸರಿಹೊಂದಿಸಲು ರಾಮಾನುಜರು ಪ್ರಯತ್ನಿಸಿ, ಭಕ್ತಿಯೋಗಕ್ಕೆ ಆತಂಕವಾಗಿರುವ ಪೂರ್ವಪಾಪಗಳನ್ನು ತೊಡೆದು ಹಾಕಲು ಜ್ಞಾನಕರ್ಮವೇ ಮೊದಲಾದ ಕಠೋರ ಸಾಧನೆಗಳನ್ನು ಕೈಕೊಳ್ಳಲಾರದ ಬೇರೊಂದು ವರ್ಗದ ಜೀವಗಳಿಗೆ ಪ್ರಪತ್ತಿಯು ಅನ್ವಯಿಸುವುದೆಂದು ಹೇಳಿದರು.

ಚೈತನ್ಯ ಪಂಥವು ಮಾಧ್ವ ಸಂಪ್ರದಾಯದಿಂದಲೇ ಕವಲೊಡೆದದ್ದು. 'ಕವಿ ಕರ್ಣಪೂರ' 'ಬಲದೇವ' ಮತ್ತು 'ರಾಧಾದಾಮೋದರ'ದಲ್ಲಿ ಇದು ಉಲ್ಲೇಖಿಸಲ್ಪಟ್ಟಿದೆ. ಆದರೆ ಅದು ಮಧ್ವಸಂಪ್ರದಾಯದವರು ಹೇಳುವ ಆಚಾರಗಳಿಗೆ ಅಷ್ಟು ಮಹತ್ವ ಕೊಡುವುದಿಲ್ಲ. ಅದರ ದೃಷ್ಟಿ ಸುಧಾರಕವಾದದ್ದು. ಆದರೆ ಅದು ಜ್ಞಾನ ಮತ್ತು ಕರ್ಮಗಳು ಮೇಲ್ತರದ ಸಾಧನಗಳಲ್ಲ ಎನ್ನುತ್ತದೆ:

> ಪ್ರಭು ಕಹೇ ಜ್ಞಾನ ಕರ್ಮ ದೋ ಹೈ ಹೀನ
> ತೋಮರ ಸಂಪ್ರದಾಯೇ ದೇಖಿ ಸೌ ದೇಯಿ ಚಿಹ್ನ !
> (ಚೈತನ್ಯ ಚರಿತಾಮೃತ)

ಅದು 'ಪ್ರೇಮಭಕ್ತಿ'ಯೇ ಪರಮಾತ್ಮನನ್ನೊಲಿಸಲು ಶ್ರೇಷ್ಠತಮ ಮತ್ತು ಉದಾತ್ತತಮ ಉಪಾಯವೆಂದು ಹೇಳುತ್ತದೆ. ಈ ಮಟ್ಟಿಗೆ ಅದು ಮಧ್ವಸಂಪ್ರದಾಯಕ್ಕಿಂತ ಭಿನ್ನವಾಗಿದೆ. ಮಧ್ವಾಚಾರ್ಯರು ಭಾಗವತ ತಾತ್ಪರ್ಯದಲ್ಲಿ (೧೦, ೧೭, ೨೯-೩೬) ಪರಮಾತ್ಮನನ್ನು ಮುಟ್ಟಲು ಪ್ರೇಮಾತ್ಮಕ ಸಾಧನೆಯನ್ನವಲಂಬಿಸುವದರಿಂದಾಗಬಹುದಾದ ಅನರ್ಥಗಳನ್ನು ಉಲ್ಲೇಖಿಸಿ ಅದು ಸಾಮಾನ್ಯರಿಗೆ ತಕ್ಕದ್ದಲ್ಲವೆಂದು ಹೇಳಿದ್ದಾರೆ.

ಕೆಲ ವೈಷ್ಣವ ಪಂಥಗಳು ಭಾವನಾತಿರೇಕಕ್ಕೆಡೆಗೊಟ್ಟು "ದ್ವೇಷಭಕ್ತಿ"ಯೆಂಬುದಕ್ಕೂ ಮನ್ನಣೆ ಕೊಟ್ಟದ್ದುಂಟು. ಮಹಾರಾಷ್ಟ್ರದ ಸಂತತತ್ತ್ವಜ್ಞಾನಿ ಜ್ಞಾನೇಶ್ವರರು ಇಂಥವರಲ್ಲೊಬ್ಬರು. ಮಧ್ವರು ಅದನ್ನು ತೀಕ್ಷ್ಣವಾಗಿ ಖಂಡಿಸಿದ್ದಾರೆ. ಇದೇ ಪ್ರಕಾರ ಮಧ್ವರ ಶುದ್ಧ ವೈಷ್ಣವಪಂಥವು ವಿಷ್ಣುವಿನ ಅವತಾರಗಳಲ್ಲಿ ಪೂರ್ಣ ಮತ್ತು ಅಪೂರ್ಣವೆಂಬದಾಗಿ ಕೆಲವರು ಮಾಡಿದ ಭೇದವನ್ನೂ ನಿರಾಕರಿಸಿದೆ. ಎಲ್ಲ ಅವತಾರಗಳೂ ಪೂರ್ಣವೇ ಎಂಬುದಾಗಿ ಮಧ್ವರು ಬಲವಾಗಿ ಪ್ರತಿಪಾದಿಸಿ

ದರು. ಪರಮಾತ್ಮನ ಅವತಾರಗಳಲ್ಲಿ ಪೂರ್ಣ ಮತ್ತು ಅಂಶ, ಉಚ್ಚ ನೀಚ ಭೇದಮಾಡುವುದು ಅವರಿಗೆಳ್ಳಷ್ಟೂ ಸರಿಬೀಳಲಿಲ್ಲ. ಪರಮಾತ್ಮ ಮತ್ತು ಅವನ ಗುಣಗಳಲ್ಲಿ ಭೇದಮಾಡುವುದು ಕೂಡ ಅತಾತ್ತ್ವಿಕವೆಂದೂ ಅವೆಲ್ಲವೂ ಅವನಲ್ಲಿ ಸೇರಿ ಏಕೀಭೂತವಾಗಿವೆಯೆಂದೂ ಅವರು ಸಾರಿದರು. ಭಾರತೀಯ ತತ್ವವಿಚಾರಕ್ಕೆ ಮಧ್ವರಿತ್ತ ವಿಶಿಷ್ಟ ಕಾಣಿಕೆಯಿದು.

ಮಾಧ್ವ ವೈಷ್ಣವ ಸಂಪ್ರದಾಯದ ಇನ್ನೊಂದು ವೈಶಿಷ್ಟ್ಯವೆಂದರೆ ಭಕ್ತಿಯಲ್ಲಿ ಸಾಧನಾರೂಪ ಮತ್ತು ಸಿದ್ಧಿರೂಪವೆಂದು ಎರಡು ವಿಧಗಳನ್ನೊಪ್ಪಿದ್ದು. ಅನೇಕ ವೈಷ್ಣವ ಪಂಥಗಳಿಗೆ ಭಕ್ತಿಯೆಂಬುದು ಮುಕ್ತಿಯ ಈ ಬದಿಯಲ್ಲಿ, ಮೋಕ್ಷಕ್ಕೆ ಸೋಪಾನವಾಗಿ ಮಾತ್ರ ಇದ್ದರೆ ಮಧ್ವರು ಮೋಕ್ಷಾನಂತರವೂ ಭಕ್ತಿ ಉಳಿಯುವುದೆಂದು ಪ್ರತಿಪಾದಿಸಿ ವೈಷ್ಣವ ಭಕ್ತಿಯ ಚರಮ ಶಿಖರಕ್ಕೇರಿದ್ದಾರೆ. ಮುಕ್ತಿಯಲ್ಲಿಯೂ ಅಂಥ ಭಕ್ತಿಯು ತಾನೇ ತನ್ನ ಫಲವಾಗಿರುತ್ತದೆಂದು ಅವರು ಹೇಳುತ್ತಾರೆ:

ನ ತು ಸಾಧನಭೂತಾ ಸಾ
ಸಿದ್ಧಿರೇವಾತ್ರ ಸಾ ಯತಃ ।

ಇದು ಭಾಗವತ ಪುರಾಣದ ನಿಜವಾದ ತಾತ್ಪರ್ಯಕ್ಕನುಸಾರವಾಗಿಯೇ ಇದೆ:

ಆತ್ಮಾರಾಮಾಶ್ಚ ಮುನಯೋ
ನಿರ್ಗ್ರಂಥಾ ಅಪ್ಯುರುಕ್ರಮೇ ।
ಕುರ್ವಂತ್ಯಹೈತುಕೀಂ ಭಕ್ತಿಂ
ಇತ್ಥಂಭೂತಗುಣೋ ಹರಿಃ ॥

ಆತ್ಮಸಿದ್ಧಿಯನ್ನು ಪಡೆದು ಪ್ರಕೃತಿಬಂಧನಗಳಿಂದ ಮುಕ್ತರಾದ ಮುನಿಗಳು ಕೂಡ ಭಗವಂತನಲ್ಲಿ ಅಹೈತುಕವಾದ ಭಕ್ತಿಯನ್ನು ಮಾಡುತ್ತಾರೆ. ಯಾಕೆಂದರೆ ಹರಿಯ ಗುಣಗಳು ಅಷ್ಟು ಆಕರ್ಷಕವಾಗಿವೆ. ಸಾಯುಜ್ಯಾದಿ ಮುಕ್ತಿಗಳು ದೊರೆತರೂ ಒಲ್ಲದೆ ಭಕ್ತಿಯನ್ನೇ ಮೆಚ್ಚುವ ಮುನಿಗಳೂ ಇರುವರೆಂದು ಅದೇ ಪುರಾಣವು ಹೇಳುತ್ತದೆ: 'ಏಕತ್ವಮಪ್ಯುತ । ದೀಯಮಾನಂ ನ ಗೃಹ್ಣಂತಿ ।' ಸಿದ್ಧಿರೂಪ ಭಕ್ತಿಯೇ ಸರ್ವಶ್ರೇಷ್ಠವೆಂಬುದನ್ನು (ಭಕ್ತಿಃ ಸಿದ್ಧೇರ್ಗರೀಯಸೀ) ಇದು ಒತ್ತಿ ಹೇಳುತ್ತದೆ. ಮಧ್ವಾಚಾರ್ಯರು ಪ್ರತಿಪಾದಿಸಿದ ಈ ಉನ್ನತ ಭಕ್ತಿಯನ್ನು ಉದ್ದಾಮ ಅದ್ವೈತ ವೇದಾಂತಿಗಳಾದ ಶ್ರೀಧರ ಸ್ವಾಮಿಗಳು ತಮ್ಮ ಭಾಗವತ ಟೀಕೆಯಲ್ಲಿ ಒಪ್ಪಿಕೊಂಡು 'ಪಿಬತ ಭಾಗವತಂ ರಸಮಾಲಯಮ್' ಎಂದು ಹೇಳಿದ್ದು ಗಮನಾರ್ಹವಾಗಿದೆ.

ವೈಷ್ಣವ ಮತದ ಬಾಹ್ಯ ಚಿಹ್ನಗಳು ಪಂಥಪಂಥಗಳಲ್ಲಿ ಭಿನ್ನಭಿನ್ನವಾಗಿವೆ. ಆದರೆ 'ಊರ್ಧ್ವಪುಂಡ್ರ' ಧಾರಣೆ ಮಾತ್ರ ಎಲ್ಲರಿಗೂ ಸಮಾನವಾಗಿದೆ. ದಕ್ಷಿಣ ಕನ್ನಡದ ಭಾಗವತ ಸಂಪ್ರದಾಯಾನುಯಾಯಿಗಳೂ ಚೋಳದೇಶದ ಸ್ಮಾರ್ತರಾದ ವಡಮರೂ ಊರ್ಧ್ವಪುಂಡ್ರವನ್ನು ಧರಿಸುತ್ತಾರೆ. ರಾಮಾನುಜ ಸಂಪ್ರದಾಯದವರನ್ನು ಬಿಟ್ಟು ಉಳಿದೆಲ್ಲ ಪಂಥದವರೂ ಗೋಪೀಚಂದನ ಹಚ್ಚಿಕೊಳ್ಳುತ್ತಾರೆ. ತಪ್ತಮುದ್ರಾಧಾರಣವು ರಾಮಾನುಜ ಹಾಗು ಮಧ್ವರ ಅನುಯಾಯಿಗಳಲ್ಲಷ್ಟೇ ಪ್ರಚಲಿತವಾಗಿದೆ. ಇದು ಪಂಚರಾತ್ರೋಕ್ತವಾದ ವೈಷ್ಣವ ದೀಕ್ಷೆಯಾಗಿದ್ದು ಅದಕ್ಕೆ ವೈದಿಕ ಮತ್ತು ಪಾಂಚರಾತ್ರಿಕ ಪ್ರಮಾಣಗಳಿವೆಯೆಂದು ಹೇಳಲಾಗಿದೆ. 'ಅತಪ್ತತನುರ್ನ ತದಾಮೋಽಶ್ನುತೇ.' ವಾದಿರಾಜ ಸ್ವಾಮಿಗಳ ಒಂದು ಗ್ರಂಥದಲ್ಲಿ ಈ ಪದ್ಧತಿಯು ಅದ್ವೈತಿಗಳಲ್ಲಿಯೂ ಕೆಲ ಪಂಗಡಗಳಿಂದ (ಮಾಯಾವಾದ್ಯೈಕದೇಶಿಭಿಃ) ಮತ್ತು ವಿಷ್ಣುಸ್ವಾಮಿ, ನಿಂಬಾರಕರ ಅನುಯಾಯಿಗಳಿಂದ ಅನುಸರಿಸಲ್ಪಡುತ್ತಿದೆಯೆಂದು ಉಕ್ತವಾಗಿದೆ. ನಿಂಬಾರಕರ ಸಂಪ್ರದಾಯದ ಒಂದಾನೊಂದು ಧಾರ್ಮಿಕ ಗ್ರಂಥವು ಪೂರ್ವ ಪಂಜಾಬದ ವಿಶ್ವೇಶ್ವರಾನಂದ ವೈದಿಕ ಸಂಶೋಧನ ಸಂಸ್ಥೆಯಲ್ಲಿದ್ದು ಅದರಲ್ಲಿ ಮುದ್ರಾಧಾರಣ ಪದ್ಧತಿಯನ್ನು ವಿವರಿಸಲಾಗಿದೆ. ವಾದಿರಾಜರ ಹೇಳಿಕೆ ಬೂಟಾಟಿಕೆಯಲ್ಲೆಂದು ಇದು ತೋರಿಸುತ್ತದೆ.

ಜೀವ-ಬ್ರಹ್ಮರ ಸಂಬಂಧದ ನಿಶ್ಚಿತ ಸ್ವರೂಪದ ವಿಚಾರದಲ್ಲಿ ವಿವಿಧ ವೈಷ್ಣವ ಸಂಪ್ರದಾಯಗಳಲ್ಲಿ ಮತಭೇದವುಂಟು. ಕೆಲವು ಭೇದವನ್ನು ಅಂಗೀಕರಿಸಿದರೆ ಮತ್ತೆ ಕೆಲವು 'ಭೇದಾಭೇದ' ವನ್ನು (ನಿಂಬಾರಕರ ಮತ್ತು ವಲ್ಲಭ ಸಂಪ್ರದಾಯಗಳಲ್ಲಿ) ಹೇಳುತ್ತವೆ. ಪ್ರಾಚೀನ ಚಿಂತಕರಾದ ರಾಮಾನುಜ, ಮಧ್ವರಂಥವರು ಜೀವರಲ್ಲಿ ಪಾರಸ್ಪರಿಕ ಮತ್ತು ಜೀವ-ಪರಮಾತ್ಮ ಭೇದವು ಮೂಲಭೂತವೆಂದು ಪ್ರತಿಪಾದಿಸುತ್ತಾರೆ. (ಗೀತಾ ೨, ೧೨) ಐಕ್ಯವಾದವನ್ನು 'ಭಾಮತಿ' ಯಲ್ಲಿ ಕೆಲ ಪಾಂಚರಾತ್ರಿಕರಿಗೆ ಆರೋಪಿಸಲಾಗಿದೆ. 'ಜಗದ್ವ್ಯಾಪಾರವರ್ಜಮ್' ಎಂಬ ಬ್ರಹ್ಮಸೂತ್ರ (೪, ೪, ೧೭) ವು ಮುಕ್ತ ಜೀವರ ಮೇಲೆ ಹೊರಿಸಿದ ಮಿತಿಯನ್ನು ಈ ಐಕ್ಯವಾದಕ್ಕೆ ಹೊಂದಿಸುವುದು ಕಠಿನ. ರಾಮಾನುಜರು ಜೀವ-ಬ್ರಹ್ಮರಲ್ಲಿ 'ವಿಶಿಷ್ಟೈಕ್ಯ' ವನ್ನು ಪ್ರತಿಪಾದಿಸುವರು. ಆದರೆ ವಿಶಿಷ್ಟೈಕ್ಯವು ವಿಶೇಷ್ಯ-ವಿಶೇಷ ಭೇದಕ್ಕೆ ಮೂಲಭೂತ ವಿರೋಧವೊಡ್ಡುವುದಿಲ್ಲ. ಈ ಪ್ರಕಾರ ರಾಮಾನುಜರೂ ಮಧ್ವರಷ್ಟೇ ಇಲ್ಲಿ ಮತ್ತು ಮುಕ್ತಿಯಲ್ಲಿ ಭೇದವುಂಟೆಂದು ವಾದಿಸುವವರಾಗಿದ್ದಾರೆ. ಈ ಸಂಗತಿಯನ್ನು ಅನೇಕ ಆಧುನಿಕ ಪಂಡಿತರು ಸರಿಯಾಗಿ ಗಮನಿಸಿದಂತಿಲ್ಲ. ಮಧ್ವ ಸಂಪ್ರದಾಯವು ಜೀವ-ಬ್ರಹ್ಮರ ಅಭೇದ್ಯ ಸಂಬಂಧದ ಸ್ವರೂಪವನ್ನು ತಿಳಿಸಲು 'ಬಿಂಬ ಪ್ರತಿಬಿಂಬ ಭಾವ' ಎಂಬ ಹೊಸ ಪರಿಭಾಷೆಯನ್ನು ಸೃಷ್ಟಿಸಿಕೊಂಡಿದೆ. ಇದರಿಂದ ಉಭಯರಲ್ಲಿ ಸೇವ್ಯ-ಸೇವಕ ಭಾವವನ್ನಷ್ಟೇ ಹೇಳಿ ತೃಪ್ತಿಹೊಂದದೆ, ಅವರ ಸಂಬಂಧದಲ್ಲಿ ಮೂಲಭೂತ ಸಾಮರಸ್ಯವನ್ನು ಸಾಧಿಸಿದಂತಾಗಿದೆ. (ಮಧ್ವಾಚಾರ್ಯರ 'ತತ್ತ್ವೋದ್ಯೋತ' ಕ್ಕೆ ಬರೆದ ಜಯತೀರ್ಥರ ಟೀಕೆಯಲ್ಲಿ 'ತತ್ತ್ವಮಸಿ' ಸೂತ್ರದ ವಿವರಣೆ ನೋಡಿರಿ).

ವೈಷ್ಣವ ಧರ್ಮದ ವಿವಿಧ ಪಂಥಗಳ ಅಭ್ಯಾಸದಿಂದ ಅವುಗಳ ತುಲನಾತ್ಮಕ ಯೋಗ್ಯತೆಯನ್ನು ಕಂಡುಕೊಳ್ಳಬಹುದಾಗಿದೆ.

---

## ಉದಯೋನ್ಮುಖ ತಾರೆ

# ಶಶಿಕಲಾ

**ಮೂವತ್ತಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದರೂ ಶಶಿಕಲೆಗೆ ಈ ವರೆಗೂ ನಾಯಿಕೆಯ ಪಾತ್ರ ದೊರೆತಿರಲಿಲ್ಲ. ಅವಳ 'ಗರತಿತನ'ವೂ ಇದಕ್ಕೊಂದು ಕಾರಣ. ಆದರೆ ಈಚೆಗೆ ಅವಳ ಗ್ರಹಗತಿಯೂ ಉಚ್ಚ ಸ್ಥಾನಕ್ಕೆ ಬಂದಂತೆ ಕಾಣುತ್ತದೆ. . . . .**

ಸಂದರ್ಶಕರು: ಶ್ರೀ. ಕೆ. ಗೋಪಾಲಕೃಷ್ಣ ಹೆಗಡೆ

ಶಶಿಕಲೆಯ ಚಲಚ್ಚಿತ್ರ ಜೀವನದಲ್ಲಿ ಸೋಲೆಂಬ ಸೂರ್ಯ-ಚಂದ್ರ ಗ್ರಹಣಗಳಾಗಿವೆ. ಆದರೆ ಈ ಶಕ್ತಿಪೂರ್ಣ ತಾರೆ ತಾನು ನಿರ್ಭಾಗ್ಯೆ, ಅದೃಷ್ಟ ಹೀನೆಯೆಂದು ಇದುವರೆಗೂ ಬಗೆದಿಲ್ಲ. ಹಾಗೆ ನಿರಾಶಾವಾದಿಯಾಗಿರುತಿದ್ದರೆ ಶಶಿಕಲೆಯ ಕತೆಯೆ ನಮಗೆ ಕೇಳಲು ಸಿಗುತ್ತಿದ್ದಿಲ್ಲ. ಸುಮಾರು ಮೂವತ್ತಕ್ಕೂ ಮಿಕ್ಕಿದ ವಾಕ್ಪಟಗಳಲ್ಲಿ ಅಭಿನಯಿಸಿದರೂ ಇವಳ ಭಾಗ್ಯಚಕ್ರ ಬದಲಾಗಿಲ್ಲವೆಂದರೆ, ಅವಳ ಬಾಳಿನ ಚಿತ್ರವನ್ನು ಕಂಡು ಯಾರೂ ಸಹತಪಿಸಬೇಕು.

ಬಾಲ್ಯದಲ್ಲೇ ರೂಪರಂಗಕ್ಕೆ ಬಂದಿದ್ದರೂ ಆಕೆ ಇಂದಿಗೂ ಅಗ್ರಗಣ್ಯ ತಾರೆಯರ ಅಂತಸ್ತಿಗೆ ಏರಿಲ್ಲ, ಮುಟ್ಟಿಲ್ಲ ಎನ್ನುವ ಬದಲು ಅವಳನ್ನು ದೂರದೃಷ್ಟಿಯಿಲ್ಲದ ಸಿನಿಮಾ ನಿರ್ಮಾಣ, ನಿರ್ದೇಶನ ಮತ್ತು ಪ್ರದರ್ಶನ ಪಂಗಡದವರು ಗಣನೆಯಲ್ಲಿ ತಂದಿಲ್ಲ ಎನ್ನುವುದು ಸಮಂಜಸ.

ಮೆಹಬೂಬರ 'ಅಂದಾಜ್' ಚಿತ್ರದ ದೆಸೆಯಿಂದಾಗಿ ನರ್ಗೀಸ ನಾಡಿನಲ್ಲೆಲ್ಲಾ ನವ-ನೀತೆಯೆನಿಸಿದಳು. ಶಾಂತಾರಾಮರ 'ಶಕುಂತಲಾ' ಕೃತಿಯಿಂದಾಗಿ ಜಯಶ್ರೀ ವಿಜಯಭೇರಿ ಬಡಿದಳು. 'ಬರ್ಸಾತ್' ವಾಕ್ಪಟದ ಮೂಲಕ ನಿಮ್ಮಿ ನಾಟ್ಯರಾಣಿಯಾದಳು! ನಿಮ್ಮ ಶಶಿಕಲೆಯೂ ಹಾಗಾಗಬಹುದಿತ್ತು. ಆದರೆ ಆಗಗೊಡಲಿಲ್ಲ-ಉದ್ಯಮದ ಹುಳುಕುಗಳು. ಇದು ಅವಳ ದುರದೃಷ್ಟ!

'ಬರ್ಸಾತ್' ಚಿತ್ರದ ಕಾರ್ಯಾರಂಭವಾದಾಗ 'ನಿಮ್ಮಿ' ಯನ್ನು ಪಡೆಯುವ ಮೊದಲು ನಿಮ್ಮ ನಚ್ಚಿನ-ಮೆಚ್ಚಿನ ನಟ ನಿರ್ದೇಶಕ ರಾಜಕಪೂರ ಶಶಿಕಲೆಯ ಸಂದರ್ಶನ ಪಡೆಯದೆ ಹತಾಶನಾದನೆಂಬ ಸತ್ಯಕತೆಯನ್ನು ನೀವು ಬಲ್ಲಿರಾ? ಶಶಿಯೇ ತನಗೆ ಬೇಕಾದ ಪರಿಪೂರ್ಣ ನಟಿಯೆಂದು ಸಂಕಲ್ಪಿಸಿ, ಸಂಬಂಧಪಟ್ಟ ಬಲ್ಲ ತಜ್ಞರೊಡನೆ ವಿಚಾರ ಮಾಡಿ ನಿರ್ಧರಿಸಿ ಆತ ಅವಳ ಮನೆ ಬಾಗಿಲಿಗೆ ತನ್ನ ಗಾಡಿಯೋಡಿಸಿದ್ದ—ಕರಾರು ಪತ್ರಕ್ಕೆ ಸಹಿ ತರಲೆಂದು. 'ರಾಜ ನಿಮ್ಮನ್ನು ಕಾಣಬಂದಿರುವ' ನೆಂದು ತನ್ನ ಚಾಲಕನೊಡನೆ ಆಕೆಗೆ ತಿಳಿಹೇಳುವ ಕರೆಕಳುಹಿಸಿದ. ಆದರೆ ಶಶಿಕಲೆ ಆ ಆಹ್ವಾನಕ್ಕೆ ಮರುಳಾಗಲಿಲ್ಲ. ತನ್ನ ಪತಿದೇವನಾಗಲಿ ಪಿತನಾಗಲಿ ಇಲ್ಲದೆ ಏಕಾಕಿಯಾಗಿ, ಏಕಾಂತದಲ್ಲಿ ಪರಪುರುಷನಿಗೆ ತಾನು ಸಂದರ್ಶನಕೊಡಲಾರೆನೆಂದು ನಿರಾಕರಿಸಿದ ಆದರ್ಶ ಭಾರತೀಸುತೆ ಶಶಿಕಲೆ. ಆಗಲೇ ದಿಗ್ದರ್ಶಕ-ನಿರ್ಮಾಪಕನಾದ ರಾಜಕಪೂರನಿಗೆ ಅಸಹನೀಯ ಅಪಮಾನವಾಯಿತು! ಕೊನೆಗಾತ ಶಶಿಕಲೆಗೆಂದೇ ಮೀಸಲಾದ ಪಾತ್ರವನ್ನು ನಿಮ್ಮಿಗೆ ಕೊಟ್ಟು ಕುಣಿಸಿದ. ಈ ಘಟನೆಯೂ ಶಶಿಕಲೆಯ ದುರ್ಭಾಗ್ಯವಲ್ಲವೇ? ಇಲ್ಲದಿದ್ದರೆ ಅವಳ ಭವಿಷ್ಯವಿಂದು ಬದಲಾಗುತ್ತಿತ್ತು.



ಶಶಿಕಲೆಯೀಗ ಇಪ್ಪತ್ತೊಂಭತ್ತರನ್ನು ಸೇರಲಿದ್ದರೂ ಕಿಶೋರಿಯಂತೆಯೇ ಗೋಚರಿಸುತ್ತಾಳೆ. ಆಕೆಯ ಜನ್ಮಸ್ಥಳ ಸೊಲ್ಲಾಪುರ. ಹುಟ್ಟಿದ್ದು: ತಾ. ೩-೮-೧೯೩೨ ರಂದು. ಅನಂದರಾವ್ ಜವಳಕರ ಎಂಬ ಬಟ್ಟೆವ್ಯಾಪಾರಿಗಳ ಪುತ್ರಿ. ಅಲ್ಲಿನ ಸರಸ್ವತೀ ಮಂದಿರ ಹಾಯಿಸ್ಕೂಲದಲ್ಲಿ ಆಕೆಯ ಪ್ರಾಥಮಿಕ ಶಿಕ್ಷಣ ನಡೆಯಿತು. ಬಳಿಕ ಮುಂಬಯಿಗೆ ಬಂದಳಾಕೆ. ಬಾಲ್ಯದಿಂದಲೂ ಅವಳಿಗೆ ಚಲಚಿತ್ರವೆಂದರೆ ಪಂಚಪ್ರಾಣ. ತಾನೂ ಒಬ್ಬ ನಟಿಯಾಗಬೇಕೆಂಬ ಮಹತ್ವಾಕಾಂಕ್ಷೆ ಆಕೆಯನ್ನು ಪದೇಪದೇ ಕಾಡುತ್ತಿತ್ತು. ಮುಂಬಯಿಯ ಪರೇಳದ ಮಧ್ಯಮ ವರ್ಗದ 'ಚಾಳ' ಒಂದರಲ್ಲಿ ಅವಳ ವಸತಿಯಿತ್ತು. ಮುಂದೊಂದು ದಿನ ಅವಳು ನಾಲ್ಕನೆಯ ತರಗತಿಯಲ್ಲಿ ಓದುತ್ತಿರುವಾಗಲೇ ನೆರೆಮನೆಯಾಕೆಯೊಬ್ಬಳು ನಟಿಯಂತಿರುವ ಶಶಿಕಲೆಯನ್ನು ಚಿತ್ರಾಲಯಕ್ಕೆ ಕೊಂಡೊಯ್ದು ಪರಿಣಾಮವಾಗಿಯೇ ಅವಳ ಚಿತ್ರಮಯ ಬಾಳಿಗೆ ಪ್ರಾರಂಭವಾಯಿತು.

ಶಶಿಯನ್ನು ಬಾಲನಟಿಯೆಂದು ರಜತ ಪರದೆಗೆ ಎಳೆತಂದು ಕುಣಿಸಿದ ಶ್ರೇಯಸ್ಸು, ಈಗ ಪಾಕಿಸ್ತಾನದಲ್ಲಿರುವ ಸುಪ್ರಸಿದ್ಧ ದಿಗ್ದರ್ಶಕ ಶೌಕತ್ ಹುಸೇನರಿಗೆ ಸಲ್ಲಬೇಕು. ಚೊಕ್ಕ ಚಿಕ್ಕ ದುಂಡುಮಲ್ಲಿಗೆಯಂತಿದ್ದ ಶಾಲಾಬಾಲಕಿ ಶಶಿಕಲೆಯನ್ನು ಕಂಡು ಹುಸೇನರು ಆನಂದಪರವಶರಾಗಿದ್ದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ತಾವು ರಚಿಸುತ್ತಿದ್ದ 'ಜೀನತ್' ಚಿತ್ರದಲ್ಲಿ ಆಕೆಗೊಂದು ಪುಟ್ಟ ಪಾತ್ರವನ್ನು ಕೊಟ್ಟು 'ಮುಂದೊಂದು ದಿನ ತಾರಾಮಣಿಯಾಗು' ಎಂಬ ಆಶೀರ್ವಾದದಿಂದ ಅಭಿನಯದ ಅವಕಾಶವನ್ನು ಕಲ್ಪಿಸಿಕೊಟ್ಟರು.

ಆ ಬಳಿಕ ಈ ಪುಟ್ಟಮ್ಮಣ್ಣಿ ಅನೇಕಾನೇಕ ಚಿತ್ರಗಳಲ್ಲಿ ಸಣ್ಣದೊಡ್ಡ ಪಾತ್ರಗಳನ್ನು ಆಡಿರುತ್ತಾಳೆ. ಜುಗ್ನೂ, ಧೋಲಿ, ಪಗಡಿ, ಗರ್ಲ್ಸ್ ಸ್ಕೂಲ್, ಪ್ರೀತಕಾ-ಗೀತ, ರೂಪಿಯಾ, ನಜಾರೆ, ಆಖ್ರಿ-ಪೈಗಾಮ್, ಟೀಂಚ್, ಜಲತರಂಗ, ಸರ್ಕಾರ್, ರಾಜರಾನೀ, ಅಜೀಬ್ ಲಡ್ಕೀ, ಅರಝೂ, ಶರ್ತ, ಮದ್-ಮಸ್ತ್, ಜೀವನಜ್ಯೋತಿ, ಸುರಂಗ, ಸಂಗಮ, ಚಾಚಾ ಚೌಧರಿ, ತೀನ ಬತ್ತಿ ಚಾರ್ ರಾಸ್ತಾ' - ಇತ್ಯಾದಿ, ಇತ್ಯಾದಿ ಇನ್ನೆಷ್ಟೋ ಚಿತ್ರಗಳಿವೆ.

ದಿಗ್ದರ್ಶಕ ವ್ಹಿ. ಶಾಂತಾರಾಮರ 'ತೀನ ಬತ್ತಿ ಚಾರ ರಾಸ್ತಾ' ಪ್ರಹಸನದಲ್ಲಿ ಈಕೆಗೆ ಮರಾಠಿ ಮದುವಣಗಿತ್ತಿಯ ಪಾತ್ರವನ್ನು ಕೊಟ್ಟದ್ದರೂ ಮಹಾರಾಷ್ಟ್ರದ ಮಹಿಳೆಯೆನ್ನಿಸಿದೀಕೆ ಆ ವಾಕ್ಪಟದಲ್ಲಿ ಮಾತನಾಡಿದುದೆಂದರೆ ಬರೇ ನಾಲ್ಕು ಮರಾಠೀ ಮಾತುಗಳನ್ನು ಮಾತ್ರ. ಮರಾಠಿ, ಈಕೆಯ ಮನೆಯ ಮಾತು, ಮಾತೃಭಾಷೆಯಾಗಿದ್ದರೂ ಇದುವರೆಗೆ ಒಂದೇ ಒಂದು ಮರಾಠಿ ಚಿತ್ರದಲ್ಲಿ ಆಕೆ ಭಾಗವಹಿಸಿಲ್ಲ.

ಶಶಿಕಲೆಯ ಚಲಚಿತ್ರ ವೃತ್ತಿಯ ಮೊದಲ ದಿನಗಳಲ್ಲಿ ಅವಳ ಪಿತಾಮಹರು ಆಕೆಯ ಅಂಗರಕ್ಷಕರಾಗಿದ್ದರು! ಈಗ ಆ ಕೆಲಸವನ್ನು ಅವಳ ಪ್ರಿಯತಮ ನಿರ್ವಹಿಸುತ್ತಾರೆ. ಇವಳೀಗ ಓಂಪ್ರಕಾಶ ಸೈಗಾಲರೆಂಬ ಮುಂಬಯಿಯ ಪ್ರಸಿದ್ಧ ವ್ಯಾಪಾರಿಯ ಧರ್ಮಪತ್ನಿ. ಈಕೆ ಪರೇಳದಲ್ಲಿ ವಾಸಿಸುತ್ತಿದ್ದ ನಿವಾಸಮಂದಿರದ ಬಳಿಯಲ್ಲೇ ಸೈಗಾಲರೂ ವಾಸವಿದ್ದರು. ಅವರ ಸ್ನೇಹವಾಯಿತು. ಈ ಸಮಾಗಮದ ಫಲವಾಗಿ ಕೊನೆಗೆ ಇವರೀರ್ವರೊಳಗೆ 'ಸಾವಧಾನ' ವಾಯಿತು. ಚಿತ್ರಪ್ರಪಂಚದಲ್ಲಿ ಈ ಮನೋಹರ ಮುಗ್ಧೆಯನ್ನು ಸೆರೆಹಿಡಿಯಲು, ಮದುವೆಯಾಗಲು ಕಾತರಿಸಿದ ಜನವಿಲ್ಲವೆಂದಿಲ್ಲ. ಎಷ್ಟೋ ಮಂದಿ ನೇರಾದ ಮಾರ್ಗದಿಂದ ನಿರಾಶರಾಗಿದ್ದರು. ಶಶಿಗೂ ರೂಪರಾಜ್ಯದ ಹೃದಯೇಶ್ವರ ಬೇಡವಾಗಿದ್ದ. ಕಾರಣ,

'ಈ ನಾರೀಶ್ವರರು ಹೆಣ್ಣನ್ನು ಅಥವಾ ಅವಳ ಹೃದಯವನ್ನು ವಿವಾಹವಾಗಲು ಬಯಸುವುದಿಲ್ಲ; ಅವರ ಹಸಿದ ಕಣ್ಣಕಿಡಿಗಳು ಬರೇ ಕೌಮಾರ್ಯ, ತಾರುಣ್ಯ ಮತ್ತು ತಮ್ಮ ಮದ-ಲಾಲಸೆ ಚಪಲತೆಗಳನ್ನು ತೀರಿಸುವ ಸಾಧನವೆಂಬೀ ದೃಷ್ಟಿಯಿಂದ' ಎಂದು ಆಕೆಯ ಅಂಬೋಣ. ಹೀಗಾಗಿ ಸಿನೆಮಾಮನ್ಮಥರೆಲ್ಲ ಹೊಡೆದ ಹೂಬಾಣಗಳು ವ್ಯರ್ಥವಾದವು.

ಅರೆಗಳಿಗೆಯೂ ಬಿಡುವಿಲ್ಲದ ಇಂದಿನ ನಟನಾ ಸಾಮ್ರಾಜ್ಯದಲ್ಲಿ ತಾರೆಯರಿಗೆ ಪತಿಪೂಜೆ-ಪಿತೃಸೇವೆ ಮಾಡುವ ಅವಕಾಶವೆಲ್ಲಿದೆ? ಶಶಿಕಲೆ ಅದಕ್ಕೊಂದು ಅಪವಾದ. ಆಕೆ ನಟಿಯಿದ್ದಾಗ್ಯೂ ಪರಿಪೂರ್ಣ ಗೃಹಿಣಿ. ಇವಳ ಸುರಸ-ಸಂಸಾರ ದಾಂಪತ್ಯದ ಪುಣ್ಯಫಲವಾಗಿ ಆಕೆಗೊಂದು ಪುತ್ರೀರತ್ನವಾಗಿದೆ.

ಗೃಹಕೃತ್ಯಗಳಲ್ಲಿ ಅವಳಿಗೆಷ್ಟು ಶ್ರದ್ಧೆಯಿದೆಯೋ ಅಷ್ಟೇ ಅಭಿಮಾನ ಆಕೆಗೆ ತನ್ನ ಚಿತ್ರವೃತ್ತಿಯಲ್ಲಿದೆ. ತನಗಿದುವರೆಗೂ ತಾನು ಬಯಸಿದಂತಹ ಭೂಮಿಕೆ ಸಿಗಲಿಲ್ಲವೆಂದು ಸಿನೆಮಾದ ಮೇಲೆ ಸೇಡು ತೀರಿಸಿಕೊಳ್ಳುವಷ್ಟು ಶುಂಠಿಯಲ್ಲ. 'ನಾನಿನ್ನೂ ನಟಿಯೆನ್ನಿಸಿಕೊಳ್ಳುವಷ್ಟು ನಿಸ್ಸೀಮೆಯಾಗಿಲ್ಲ' ವೆಂದು ಹೇಳುವದಕ್ಕೂ ಆಕೆಗೆ ಅಳುಕಿಲ್ಲ. ಆದರೆ ತಾನು ಮುಂದೊಂದು ದಿನ ಖಂಡಿತ ತಾರಾಗ್ರಣಿಯಾಗಬೇಕೆಂದು ದುಡಿದು ದಣಿಯಲು ಹಿಂಜರಿಯುವದಿಲ್ಲ. ಅಂತಹ ಸಹಜ ಬಯಕೆ ಅವಳಲ್ಲಿದೆ. ಅದಕ್ಕಾಗಿ ಅನವರತ ಹೆಣಗಾಡಲು ಅವಳು ಸಿದ್ಧ. ಇದೊಂದು ಹಟಮಾರಿತನದ ದೆಸೆಯಿಂದಾದರೂ ಅವಳು ಧ್ರುವತಾರೆಯಾಗಿ ಮೆರೆಯದಿರಳು.



ನಟಾಗ್ರೇಸರ ಅಶೋಕ ಕುಮಾರ ದಿಗ್ದರ್ಶಿಸುವ 'ಸಮಾಜ' ಚಿತ್ರದಲ್ಲಿ ಆಕೆಗೆ ಅವನೊಡನೆ ಅಭಿನಯಿಸುವ ಪ್ರಮುಖ ಭೂಮಿಕೆಯನ್ನು ಕೊಡಲಾಗಿದೆ. ಬಂಗಾಲದ ಅಭಿನಯಾಚಾರ್ಯ ಅಭಿಭಟ್ಟಾಚಾರ್ಯನ ಜೊತೆಯಲ್ಲಿ 'ಪರಿಚಯ' ಎಂಬ ಚಿತ್ರದಲ್ಲಿ ಆಕೆ ನಟಿಸುತ್ತಾಳೆ. ಜೆ. ಜೆ. ಫಿಲ್ಮ್ಸದವರ ಈ ಕಾಣಿಕೆಯನ್ನು ಪ್ರಸಿದ್ಧ ದಿಗ್ದರ್ಶಕ ಸತ್ಯೇನ್ ಬೋಸರು ವಹಿಸಿಕೊಂಡಿರುತ್ತಾರೆ. ಆಸ್ಪಿಯವರ ದಿಗ್ದರ್ಶನದಲ್ಲಿ 'ಡಾಕೂ' ಎಂಬ ಚಲಚಿತ್ರದಲ್ಲಿ ಶಮ್ಮೀ ಕಪೂರನೊಡನೆ ಕಾಣಿಸಿಕೊಳ್ಳುತ್ತಾಳೆ. ಸುಪ್ರಸಿದ್ಧ ರಾಜಾ ಪರಾಂಜಪೆಯವರ 'ಡಾಕ್ಟರ್ ವಿಶ್ರಾಮ'ದಲ್ಲೂ ಅಭಿನಯಿಸುತ್ತಾಳೆ ಶಶಿಕಲೆ. ಈ ಮೇಲೆ ಹೇಳಿದ ಎಲ್ಲಾ ಚಿತ್ರಗಳ ತಯಾರಿ ಈಗಾಗಲೇ ಮುಗಿಯುತ್ತ ಬಂದು ಅವೆಲ್ಲ ಒಂದು ದಿನ ಒಮ್ಮೆಲೆ ತೆರೆಗೆ ಬಂದು ಬೆಳಗಲಿವೆ. ಆಗ ಶಶಿಯ ಹೆಸರು ಮಿಂಚಲಿದೆ; ಮಿನುಗಲಿದೆ.

ಇನ್ನು ಮುಂಬರುವ ಚಿತ್ರಗಳಲ್ಲಿನ ಕರಾರುಗಳಿಗೂ ಆಕೆಗೆ ಕೊರತೆಯಿಲ್ಲ. ಪಿ. ಎನ್. ಆರೋರಾ ಇವರ ಎರಡು ಚಿತ್ರಪಟಗಳಲ್ಲೂ ಪಾತ್ರವಿದೆ. 'ಹೂರೆ ಅರಬ' ಮತ್ತು 'ಸಿತಾರ' ಎಂಬೀ ಎರಡು ವಾಕ್ಚಿತ್ರಗಳಲ್ಲಿ ಪ್ರದೀಪಕುಮಾರ ಮತ್ತು ಇನ್ನೊಬ್ಬ ನಟನೊಡನೆ ನಟಿಸುವ ನಾಗ್ದಾನವಿತ್ತಿರುತ್ತಾಳೆ. ದ್ವಾರಕಾ ಖ್ಹೋಸಲರ ದಿಗ್ದರ್ಶಿಸುವ 'ತಾಜ್ ಮತ್ತು ತಲ್ವಾರ್' ಎಂಬುದರಲ್ಲೂ ಪಾತ್ರವಿದೆ. ಕಲಾಕಾರ ಚಿತ್ರದವರ 'ಗಂಗಾ ಜಮುನಾ' ದಲ್ಲಿ ಶೇಖರನೊಟ್ಟಿಗೆ ನಟನೆಯಿದೆ. ಸಂತೋಷಿಯವರ 'ಹಾಹಾ ಹಿಹೀ ಹುಹೂ' (ಎಷ್ಟೊಂದು ಚೆಲುವಿನ ಹೆಸರು!) ಚಿತ್ರದಲ್ಲಿ ಪ್ರಾಮುಖ್ಯ ಪಾತ್ರವಿದೆ. ಪಿ. ಆರ್. ಚಿತ್ರದವರ 'ಬಹೂ' ಎಂಬುದರಲ್ಲೂ ಪ್ರಮುಖ ಭೂಮಿಕೆಯಿದೆ. ಇದುವರೆಗೆ ಶಶಿಕಲೆಗೆ ಪ್ರಥಮ ಭೂಮಿಕೆಯನ್ನು ಕೊಡುವ ಪರಿಪಾಠವೇ ದಿಗ್ದರ್ಶಕರಿಗಿಲ್ಲವಿತ್ತು. ಅಕ್ಕಪಕ್ಕದ ಕಿರಿಯ ಪಾತ್ರಗಳಲ್ಲೇ ಆಕೆಗೆ ಸಂತೃಪ್ತಿಯಾಗ




ಅವಳು: 'ಈಗೇನಾರೆ ಚಪಾತಿಗೆ ನೋಡಾ ಮುತ್ತತಾವೇನು? ಹಿಟ್ಟನೊಳಗೇ ಡಿಡಿಟ ಹಾಕಿಬಿಟ್ಟೇನಿ!'

ವೇಕಿತ್ತು. ಆದರೆ ಈಗೀಗ ಅವಳಲ್ಲಿ ಉದಯೋನ್ಮುಖ ತಾರೆಯ ಲಕ್ಷಣಗಳನ್ನು ಕಂಡು ಎಲ್ಲರೂ ಕರೆಯುತ್ತಾರೆ.

ನಮ್ಮ ನಟನಟಿಯರ ಚಲಚಿತ್ರ ನಿರ್ಮಾಣದ ಹುಚ್ಚು ಮಾತ್ರ ಶಶಿಕಲೆಗೂ ಹಿಡಿದಿದೆ. ಈಕೆಯೂ ನಿರ್ಮಾತ್ರಿಯಾಗಲಿದ್ದಾಳೆ. ಪ್ರಸಿದ್ಧ ನಟ ದೇವ ಆನಂದನೊಟ್ಟಗೆ ತಾನೂ ನಟಿಸಿ ತನ್ನದೇ ಆದ ಒಂದು ನೋಜಿನ ಚಿತ್ರವನ್ನು ತಯಾರಿಸುವಳಂತೆ. ಹೆಸರು : 'ಇಧರ್ ಮಕಾನ್ ; ಉಧರ್ ದುಕಾನ್.'

ಶಶಿಕಲೆ ಸೋಮಾರಿಯಲ್ಲ ; ಕಾರ್ಯದಕ್ಷೆ. ಅವಳಿಗೆ ಮಾತು ಬೇಕಿಲ್ಲವಾದರೂ ಓದು ತುಂಬಾ ಬೇಕೆನಿಸುತ್ತದೆ. ಆಕೆ ಮೂರು ನಾಲ್ಕು ಭಾಷೆಗಳಲ್ಲಿ ಓದು ಬರಹ ಬಲ್ಲವಳಾಗಿದ್ದರೂ ಆಂಗ್ಲ ಭಾಷೆಗಿನ್ನೂ ಮರುಳಾಗಿಲ್ಲ. ಹಾಗೆಂದು ಚನ್ನಾಗಿ ಮಾತನಾಡುತ್ತಾಳೆ ಇಂಗ್ಲೀಷನಲ್ಲಿ. ಅವಳ ಸರಸ್ವತೀಆರಾಧನೆ ಹಿಂದೀ ಕತೆ— ಕಾದಂಬರಿಗಳಲ್ಲಿ. ವಂಗಪುಂಗವ ಶರತ್‌ಚಂದ್ರ ಚಟರ್ಜಿಯವರ ಕಾದಂಬರಿಗಳೆಂದರೆ ತುಂಬಾ ಪ್ರೇಮ. ಆ ಸಾಹಿತ್ಯ ಕ್ಷೇತ್ರದಲ್ಲಿ ಅವಳು ತುಂಬಾ ಸುತ್ತಾಡಿರುತ್ತಾಳೆ. 'ಶರತ್ ಬಾಬುಗಳ ಯಾವ ಕಾದಂಬರಿಯನ್ನು ನೀನು ಅತ್ಯುತ್ತಮವೆಂದು ಪರಿಗಣಿಸುವೆ?' ಎಂದುದಕ್ಕೆ 'ಅವರು ಬರೆದುದರಲ್ಲಿ ಯಾವುದಲ್ಲ?' ಎಂದು ನನಗೇ ಕೇಳಿದಳು. ಹೌದು ; ಬಂಗಾಲದ ಈ ಸಾಹಿತ್ಯ ಕೇಸರಿಯೊಡನೆ ಸ್ಪರ್ಧಿಸುವ ಯಾವ ಕಾದಂಬರಿಕಾರ ನಮ್ಮ ನವಭಾರತದಲ್ಲಿ ಹುಟ್ಟಿರುತ್ತಾನೆ? ಕವೀಂದ್ರ ರವೀಂದ್ರರ ಸಾಹಿತ್ಯಸಾಗರದಲ್ಲೂ ಅವಳು ಸಾಕಷ್ಟು ತೇಲಿ ಸುಖಾನುಭವವನ್ನು ಪಡೆದಿರುತ್ತಾಳೆ. ಅವರ 'ಆಂಖ್ ಕೀ ಕಿರಕಿರೀ' ಯನ್ನು ಬಹಳ ಮೆಚ್ಚುವಳಂತೆ. ಆದರೆ ಶರತ್ ಬಾಬುಗಳೆಂದರೆ ಆದರ ಬಹಳ.

ಮರಾಟಿಚಿತ್ರಗಳಲ್ಲಿ ನಟಿಸಿರದಿದ್ದರೂ ಈಕೆ ತುಂಬಾ ಮರಾಟಿ ಚಿತ್ರ ಮಂದಿರಗಳಿಗೆ ಹೋಗುತ್ತಾಳೆ. ಹಿಂದೀ ಕೃತಿಗಳನ್ನು ಕಾಣಬಯಸುವುದಿಲ್ಲವೆಂದಿಲ್ಲ. ಹಿಂದಿಗಿಂತಲೂ ಹೆಚ್ಚು ಇಂಗ್ಲೀಷ ಚಿತ್ರಗಳನ್ನು ಮೋಹಿಸುತ್ತಾಳೆ. ಆಕೆ ಇತ್ತೀಚೆಗೆ ಕಂಡ ವಾಕ್ಪಟದಲ್ಲಿ (ಮರಾಠಿ) 'ಪೇಡಗಾಂವಚೆ ಶಹಾಣೆ' ಎಂಬುದು ಉತ್ತಮ ಕಲಾಕೃತಿಯಂತೆ.

ಶಶಿ ಸದಾಕಾಲ ಪಾಠದಲ್ಲೇ ಮಗ್ನಳಾಗಿರುವುದಿಲ್ಲ. ಅವಳ ದಿನಚರಿಯಲ್ಲಿ ಆಟಕ್ಕೂ ಸಾಕಷ್ಟು ಗಮನವಿದೆ. ಸೌಂದರ್ಯವನ್ನು ಕಾಪಾಡಿಕೊಳ್ಳಲು ಈಜಿಗಿಂತ ಉತ್ತಮ ವ್ಯಾಯಾಮ ಮಗುದೊಂದಿಲ್ಲವಂತೆ. ಈಜಾಟದಲ್ಲೂ ಪ್ರವೀಣೆ ಈಕೆ. ಬ್ಯಾಡ್‌ಮಿಂಟನ್ ಕ್ರೀಡೆಯಲ್ಲೂ ತುಂಬಾ ಆಸಕ್ತಿಯಿದೆ, ಮಾತ್ರವಲ್ಲ ಆಗಾಗ್ಗೆ ಆಡುತ್ತಿರುತ್ತಾಳೆ. ಪ್ರತಿ ದಿನ ಸ್ವಲ್ಪ ಅವಕಾಶವನ್ನಾದರೂ ಕಲ್ಪಿಸಿಕೊಂಡು ತುಸು ದೂರ ಕಾಲ್ನಡೆಯುತ್ತಾಳೆ. ಇವೊಂದಕ್ಕೂ ಸಮಯ ಸಿಗದಾಗ ತನ್ನ ಗಾಡಿಯೋಡಿಸುತ್ತಾಳೆ. ಸ್ಟೂಡಿಯೋದಿಂದ ಮನೆಗೆ— ಮನೆಯಿಂದ,ಡ್ರಾಯಿವ್ಹರನಿದ್ದಾಗ್ಯೂ ಕೆಲವೊಮ್ಮೆ ಸ್ಟೂಡಿಯೋವಿಗೆ, ತಾನೇ ಮೋಟರಿಸುತ್ತಾಳೆ. ಅವಳೊಡನೆ ಹೊಸ 'ಬ್ಯೂಕ್' ಗಾಡಿಯಿದೆ. ಬೇಸರ ಕಾಡಿದಾಗ ಗಂಡನನ್ನು ಕಟ್ಟಿಕೊಂಡು ಪುಣೆಗೋ ಮಹಾಬಳೇಶ್ವರಕ್ಕೋ ವಿಹಾರ ಹೋಗುತ್ತಾಳೆ. ಒಂದೆರಡು ದಿನದ ವಿಶ್ರಾಂತಿಯ ಬಳಿಕ ಹಿಂದಿರುಗೋಣವಾಗುತ್ತದೆ.

ಶಶಿಕಲೆ ಗೃಹಣಿ. ಆದುವೆ ಅವಳನ್ನು ನೂರಾರು ಪ್ರಶ್ನೆ ಪರಡಿಗಳಿಂದ ಕಾಡುವುದು ನನಗೆ ವಿಹಿತವೆನಿಸಲಿಲ್ಲ. ಆದರೂ ಒಂದೆರಡು ಸಮಸ್ಯಾತ್ಮಕ ಪ್ರಶ್ನೆಗಳನ್ನು ಕೇಳಬೇಕೆಂದು ಕುತೂಹಲ ನನ್ನನ್ನು ಕೆರಳಿಸಿತು.

'ಪ್ರಧಾನಿ ನೆಹರೂರವರಿಗೆ ದೆಹಲಿಯ ಸಾವಿರಾರು ಮಂದಿ ಮಹಿಳೆಯರು ಸಹಿಯಿಕ್ಕಿ ಸಲ್ಲಿಸಿದ 'ಬಿನ್ನಹ' (Appeal) ದ ಸಂಗತಿ ನಿನಗೆ ಗೊತ್ತಿದೆ ತಾನೆ. ಇಂದಿನ ಚಲಚಿತ್ರಗಳು ಬಾಲ-ಬಾಲಕಿಯರ, ಯುವಜನಾಂಗದ, ಸಮಾಜದ ನೈತಿಕ ಅಧಃಪತನಕ್ಕೆ ಕಾರಣ ಮಾತ್ರವಲ್ಲ; ಕೊಲೆಗಡಕತನ ಮುಂತಾದ ಹೇಯ ಕೃತ್ಯಗಳಿಗೆ ಸಾಧನ-ಸಂಚಯಗಳಾಗಿವೆಯೆಂಬ ಆರೋಪಕ್ಕೆ ನೀನೇನು ಹೇಳಬಲ್ಲೆ?'

ಮರುಕ್ಷಣದಲ್ಲೇ ಮರುತ್ತರ ಬಂತು. 'ಮಕ್ಕಳನ್ನು ತಿದ್ದಿ ಸರಿ ದಾರಿಗೆ ತರುವುದು ತಂದೆ

ತಾಯಿಗಳ ಆದ್ಯ ಕರ್ತವ್ಯ. ಯಾವುದೋ ಒಂದೆರಡು ಹೊಲಸು ಚಿತ್ರಗಳಿಂದಾಗಿ ಬಾಲಪ್ರಪಂಚಕ್ಕೆ ಕುಸು ಹಾನಿಯಾಗಿರಬಹುದು. ಆದರೆ ಚಲಚ್ಚಿತ್ರಗಳೆಲ್ಲಾ ಮಕ್ಕಳನ್ನು ನೀತಿಬಾಹಿರರನ್ನಾಗಿ ಮಾಡುತ್ತವೆ, ಕೆಟ್ಟ ದಾರಿಗೆ ಎಳೆಯುತ್ತವೆ ಎಂಬುದು ಶುದ್ಧ ತಪ್ಪು. ಜವಾಬ್ದಾರಿಯುಳ್ಳ ರಕ್ಷಕರು ತಮ್ಮ ಮಕ್ಕಳು ಸಿನೆಮಾದಿಂದಾಗಿ ಕೆಟ್ಟು ಹೋದರೆಂದು ನಮ್ಮ ಮೇಲೆ ಅಪವಾದ ಹೊರಿಸಲಾರರು. ಈಗ ಬದಲಕಾಲಾಗಿದೆ. ಮೊದಲಿನಂತೆ ಸಿಕ್ಕಾಪಟ್ಟೆ ಸಿಕ್ಕಿದ ಕತೆಯನ್ನೋ, ಸನ್ನಿವೇಶವನ್ನೋ ನಾಟ್ಯವನ್ನೋ ನೃತ್ಯವನ್ನೋ ತುಂಬಿಸಿ ಚಿತ್ರರಚಿಸುವಂತಿಲ್ಲ. ದಿಗ್ದರ್ಶಕರು ಸ್ವೇಚ್ಛಾವರ್ತಿಗಳಾಗಿ ಬೇಜವಾಬ್ದಾರಿಯಿಂದ ವರ್ತಿಸುವಂತಿಲ್ಲ. ಈ ಪಥದಲ್ಲಿ ರೂಪರಂಗದ ಕಾರ್ಯಕಲಾಪಗಳಲ್ಲಿ ತುಂಬಾ ಸುಧಾರಣೆಗಳಾಗಿವೆ. ಪ್ರಗತಿಯಾಗುತ್ತಲಿದೆ.' ಎಂಬ ಆಶಾವಾದದ ಚಿತ್ರವನ್ನು ನನ್ನ ಮುಂದೊಡ್ಡಿದಳಾಕೆ. ಅದಲ್ಲದೆ 'ನಿರ್ದೇಶಕನ ಅನುಜ್ಞೆಯಂತೆ ಚಾಚೂ ತಪ್ಪದೆ ಕೊಟ್ಟ ಪಾತ್ರವನ್ನು ನಿರ್ವಹಿಸುವ ತಾರೆಯರಿಗೂ 'ಈ ಸಮಸ್ಯೆಗೂ ಏನೂ ಸಂಬಂಧವಿಲ್ಲ ; ಒಂದು ವೇಳೆ ನಟಿಯರಿಗೆ ತಮ್ಮ ನಟನೆ ಕೀಳ್ಮಟ್ಟದ ವಿಲಾಸಿಗಳ ತೃಪ್ತಿಗಾಗಿ ಎಂದು ಮೊದಲೇ ತಿಳಿದು ಬಂದರೆ ಅಂತಹ ಚಿತ್ರಗಳಲ್ಲಿ ತಾವು ಭಾಗವಹಿಸುವುದಿಲ್ಲ' ವೆಂಬುದನ್ನು ತಿಳಿಸಿ, ಕೊಟ್ಟ ಪಾತ್ರವನ್ನು ನಿರಾಕರಿಸಬಹುದು, ಎಂಬ ಸಂಗತಿಯನ್ನು ತಿಳಿಸಿದಳು.

"ಅದಿರಲಿ. ಚಲಚಿತ್ರದ ಉದ್ದಿಷ್ಟ ಬರೇ ಜನರ ಮನೋರಂಜನೆ ಮಾತ್ರವೇ ಅಥವಾ ಇದರ ಮೂಲಕ ಧಾರ್ಮಿಕ, ನೈತಿಕ, ಶೈಕ್ಷಣಿಕ, ಸಮಾಜ ಸುಧಾರಕ ಮುಂತಾದ ನಾಡಿನ ಮಹಾಕಾರ್ಯ ಯೋಜನೆಗಳಿಗೆ ಸಹಕಾರಿಯಾಗಬಲ್ಲುದೇ ? ನಮ್ಮ ಚಲಚಿತ್ರೋದ್ಯಮ ಅಂತಹ ಯಾವ ಪಥದಲ್ಲಿ ಮುನ್ನಡೆಯುತ್ತಿದೆ ?'

ಈ ಪ್ರಶ್ನೆಯೂ ಕಬ್ಬಿಣದ ಕಡಲೆ. ವಿದೇಶೀಯರಂತೆ ನಮ್ಮ ಉದ್ಯಮ ಅಂಕೆಸಂಖ್ಯೆಗಳಲ್ಲಿ ಬೆಳೆದಿರುವುದಾದರೂ ಜೀವನಕಲೆಯ ನಿರ್ದಿಷ್ಟ ದೃಷ್ಟಿಯಿಂದ ನಾವೇನೂ ಬೆಳೆಸಲಿಲ್ಲ, ಮುಂದುವರಿದಿಲ್ಲ. ಆದರೆ ಈಗ ಹೊಸ ಹೊಸ ಯತ್ನ-ಪ್ರಯತ್ನಗಳಾಗುತ್ತಿವೆ. ಮಕ್ಕಳಿಗಾಗಿ ಚಿತ್ರ-ಧಾರ್ಮಿಕ-ಶೈಕ್ಷಣಿಕ - ಸಾಧು ಸಂತರ ಚರಿತ್ರೆ - ಸಾಹಸಮಯ - ಸಂಗೀತಮಯ - ಮನೋರಂಜಕ - ಮನೋವಿಶ್ಲೇಷಣಾತ್ಮಕ - ಹಾಸ್ಯ ಪ್ರಧಾನ - ಮುಂತಾದ ಅನೇಕ ಚಿತ್ರಗಳು ಆಗುತ್ತಲಿವೆ.

ಶಶಿಯನ್ನು ನಾನು ಸಂದರ್ಶಿಸಿದುದು ಆಕೆಯ ಸಾಯಾನಿನ ( Sion ) ಮನೆಯಲ್ಲಿ. ಮನೆಯಲ್ಲೂ ಆಡಂಬರವಿಲ್ಲ. ಶುಭ್ರವಾದ ಬೆಳ್ಳಗಿನ ಸಿಲ್ಕಿನ ಸೀರೆಯನ್ನುಟ್ಟು ಗುಲಾಬಿ ಬಣ್ಣದ ರವಕೆ ತೊಟ್ಟು ಆಕೆಯನ್ನು ಕಂಡಾಗ ಇವಳಾರು ತಾರೆಯೇ ಕುಲೀನ ಗೃಹಿಣಿಯೇ ಎಂದು ವಿಸ್ಮಯವಾಗಬೇಕು.

ಶಶಿಕಲೆಯ ಇದುವರೆಗಿನ ಕಲಾಜೀವನ ಕೃಷ್ಣಪಕ್ಷದ ಚಂದ್ರನ ಕಲೆಗಳಿಗೆ ಹೋಲಿಸಬಹುದು. ಪ್ರೇಕ್ಷಕರಾಗಲಿ, ನಿರ್ದೇಶಕರಾಗಲಿ, ಯಾರೇ ಇರಲಿ, ನಿಸರ್ಗದಲ್ಲಿ ಅವರಿಗೆ ನಂಬುಗೆ ಇದೆಯೆಂದಾದರೆ ಶುಕ್ಲಪಕ್ಷ ಬಂದೇ ತೀರಬೇಕು. ಶಶಿಕಲೆ ಸೂರ್ಯನಂತೆ ಜಾಜ್ವಲ್ಯಮಾನನಾಗಿ ಪ್ರಕಾಶಿಸದಿದ್ದರೂ ಚಂದ್ರನಂತೆ ಮಂದಹಾಸದಿಂದ ಬೆಳಗಲಿರುವಳೆಂಬುದು ಖಂಡಿತ. ಈಗಾಗಲೇ ಆಕೆ ಅಮೇರಿಕದ ಹಾಲಿವುಡ್ಡಿನ ಜಗದ್ವಿಖ್ಯಾತ ನಟ ಸಾಬುವಿನೊಡನೆ ನಟಿಸುವ ಸಂದರ್ಭವನ್ನು ಗಳಿಸಿಕೊಂಡಿರುತ್ತಾಳೆ. ಇಂತಹ ನಟನೊಡನೆ ಅಭಿನಯಿಸುವ ಸೌಭಾಗ್ಯ ಭಾರತೀಯರಿಗೆ ಸಿಕ್ಕಿದವರಲ್ಲಿ ಶಶಿಕಲೆ ಮೊದಲಿನವಳು. ಅವಳ ಗೆಲವಿನ ಭವಿಷ್ಯಪೂರ್ಣ ಲಕ್ಷಣ ಚಿಹ್ನೆಗಳು ಈಗ ಕಂಡು ಬರುತ್ತವೆ. ಆದುದರಿಂದ ಈ ಸಂದರ್ಭದಲ್ಲಿ ಅವಳಿಗೆ ಶುಭ ಕೋರಿ ಅವಳ ಆಶಾಮಯ ಜೀವನ ನೆರವೇರಲಿ ಎಂದು ಈ ಪರಿಚಯ ಮುಗಿಸಲೇ ?

# ಭಾಸ ಕವಿಯ

# ವರ್ಣನೆಗಳ ಸೊಬಗು

**ನಮ್ಮ ಕವಿಗಳಲ್ಲಿ ಅತಿ ಪ್ರಾಚೀನನೆಂದು ಹೇಳಬಹುದಾದ ಭಾಸನು ಎಷ್ಟೋ ವಿಷಯಗಳಲ್ಲಿ ಇತರ ಮಹಾಕವಿಗಳಿಗಿಂತ ಶ್ರೇಷ್ಠನು. ಅವನಂತೆ ಸರಳ ಸೌಂದರ್ಯದ ಆರಾಧಕರು ಪುರಾಣಗಳಲ್ಲಷ್ಟೇ ಸಿಗುತ್ತಾರೆ. ರಂಗದ ಮೇಲೆ ಪರಿಣಾಮಕಾರಿಯಾಗಬಹುದಾದ ನಾಟಕಗಳ ರಚನೆಯಲ್ಲಿ ಅವನನ್ನು ಸರಿದೂಗಿದವರಿಲ್ಲ. ಅವನ ವರ್ಣನೆಗಳು ಅತ್ಯುತ್ತಮವಾಗಿವೆ.**

ಲೇಖಕರು: ಶ್ರೀ. ವ್ಹಿ. ಎಸ್. ಹೊಸಕೋಟಿ, ಎಂ. ಎ.,

ನಮ್ಮ ಭಾರತ ದೇಶವು ಪ್ರಾಚೀನ ಕಾಲದಿಂದಲೂ ನಾಟ್ಯಕಲೆಯ ನೆಲೆವೀಡು. ನಾಟಕ ಪ್ರಪಂಚದಲ್ಲಿಯೇ ಗಣ್ಯತೆಯನ್ನು ಪಡೆದ ನಾಟಕಕಾರರು ರಮಣೀಯವಾದ, ಚಿತ್ತಾಕರ್ಷಕವಾದ, ನವರಸ ಪರಿಪೂರ್ಣವಾದ, ಸಂತೋಷಜನಕವಾದ ನಾಟಕಗಳನ್ನು ರಚಿಸಿರುವರು. ಈ ಕೃತಿಗಳು, ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಜನಿಸಿ ಕೀರ್ತಿವೆತ್ತ ನಾಟಕಕಾರರ, ವಿವಿಧ ಭಾಷೆಗಳಲ್ಲಿಯ ನಾಟ್ಯ ಗ್ರಂಥಗಳಿಗೆ ಸಮಾನವೆಂದಾಗಲಿ ಇಲ್ಲವೆ ಬಹು ಭಾಗಗಳಲ್ಲಿ ಮಿಗಿಲೆಂದಾಗಲಿ ಹೇಳಬಹುದು. ಈ ಕವೀಶ್ವರರು ಗತಿಸಿಹೋಗಿ ಎಷ್ಟೋ ಶತಮಾನಗಳಾಗಿದ್ದರೂ ಅವರ ನವರಸಪೂರ್ಣ ಕೃತಿಗಳು ಈಗಲೂ ನಮ್ಮ ಹೃದಯವನ್ನು ಆನಂದಗೊಳಿಸುವವು. ಅವರು ಕೃತಿರೂಪದಲ್ಲಿ ಅಜರಾಮರರೆಂದು ಹೇಳಬಹುದು.

ಭರತವರ್ಷದಲ್ಲಿ ನಾಟ್ಯವು ಶಾಸ್ತ್ರವೆಂದೇ ಬಹು ಪುರಾತನ ಕಾಲದಿಂದಲೇ ಗಣಿಸಲ್ಪಟ್ಟಿದೆ. ಭರತಾಚಾರ್ಯರು ಅಥವಾ ಭರತಮುನಿಗಳು ನಾಟ್ಯ ಶಾಸ್ತ್ರದ ಆದ್ಯ ಪ್ರವರ್ತಕರು. ಅವರು ರಚಿಸಿದ ನಾಟ್ಯಶಾಸ್ತ್ರವು ಇಂದಿಗೂ ಸರ್ವಮಾನ್ಯವಾಗಿದೆ. ಈ ಶಾಸ್ತ್ರವನ್ನು ಅನುಸರಿಸಿ ನಾಟ್ಯಕೃತಿಗಳನ್ನು ರಚಿಸಿದ ಕವಿವರ್ಯರಲ್ಲಿ ಭಾಸಕವಿಯು ಶ್ರೇಷ್ಠನೆಂದು ಹೇಳಬಹುದು. ಈ ಕವಿಯ ಗ್ರಂಥಗಳನ್ನು ಶೋಧಿಸಿ ಪ್ರಸಿದ್ಧಿಪಡಿಸಿದ ಯಶಸ್ಸು ತ್ರಿವೇಂದ್ರಮ್ ಸಂಸ್ಕೃತ ಗ್ರಂಥ ಮಾಲೆಯ ಪ್ರವರ್ತಕರಾಗಿದ್ದ ಮಹಾಮಹೋಪಾಧ್ಯಾಯ ಟಿ. ಗಣಪತಿ ಶಾಸ್ತ್ರಿಗಳಿಗೆ ಸಲ್ಲುವದು. ಅವರು ಪ್ರಕಾಶಿಸಿದ ಭಾಸ ಕವಿಯ ಹದಿಮೂರು ನಾಟ್ಯಕೃತಿಗಳಲ್ಲಿ 'ಸ್ವಪ್ನ ವಾಸವದತ್ತ' ನಾಟಕವು ಶ್ರೇಷ್ಠವಾದದ್ದು. ಈ ಎಲ್ಲ ನಾಟಕಗಳಲ್ಲಿ ಗ್ರಂಥಕಾರನ ಹೆಸರು ದೊರೆಯುವದಿಲ್ಲ. ಆದ್ದರಿಂದ ಈ ಕೃತಿಗಳ ನಿರ್ಮಾತೃವಿನ ವಿಷಯವಾಗಿ ವಿವಾದವಿದೆ. ಆಂತರಿಕ ಮತ್ತು ಬಾಹ್ಯ ಪ್ರಮಾಣಗಳನ್ನು ವಿಶದಪಡಿಸಿ, ಈ ಹದಿಮೂರು ಕೃತಿಗಳು ಮಹಾಕವಿ ಭಾಸನವೇ ಎಂದು ಶ್ರೀ ಗಣಪತಿ ಶಾಸ್ತ್ರಿಗಳು ಸಿದ್ಧಪಡಿಸಿದ್ದಾರೆ. ಈ ಕೃತಿಗಳ ಸಹಜ ಮನೋಹಾರಿತ್ವ ಮೊದಲಾದ ಗುಣಗಳನ್ನು ನೋಡಿ, ಭಾಸನು ಅದ್ವಿತೀಯ ಕವಿಯೆಂದು ವಿಮರ್ಶಕರಾದ ಪಾಶ್ಚಾತ್ಯ ಮತ್ತು ಪೌರಸ್ತ್ಯ ವಿದ್ವಾಂಸರು ನಿರ್ಣಯಿಸಿದ್ದಾರೆ. ಈ ಕವಿಯ ಕೃತಿಗಳ ಪ್ರಭಾವವು ಅನಂತರ ಪ್ರಸಿದ್ಧಿಗೆ ಬಂದ ಕವಿಗಳ ಜಗನ್ಮಾನ್ಯ ಕೃತಿಗಳಲ್ಲಿ ಕಂಡು ಬರುತ್ತದೆ.

ಕವಿಯ ಗ್ರಂಥಗಳ ಕರ್ತೃತ್ವದ ಬಗ್ಗೆ ಇರುವ ವಿವಾದವು ಅವನ ಕಾಲದ ವಿಷಯವಾಗಿಯೂ ಇರುವದು. ಇದಕ್ಕೆ ಮೂಲ ಕಾರಣವೆಂದರೆ ಕವಿಯು ತನ್ನ ಯಾವ ಗ್ರಂಥಗಳಲ್ಲಿಯೂ ತನ್ನ ವಿಷಯವಾದ ಚರಿತ್ರೆಯನ್ನು ನಿರೂಪಿಸಿರುವದಿಲ್ಲ. ಆದ್ದರಿಂದ ಅವನ ಕಾಲವಿಷಯವಾಗಿ ನಿಶ್ಚಿತವಾದ ಉಲ್ಲೇಖವನ್ನು ಮಾಡಲು ಶಕ್ಯವಿಲ್ಲದಾಗಿದೆ. ಭಾಸನ ವಿಷಯವಾಗಿ ಇತರ ಗ್ರಂಥಕಾರರು ಉಲ್ಲೇಖಿಸಿದ ಆಧಾರಗಳನ್ನೂ ಅವನ ಕೃತಿಗಳಲ್ಲಿ ದೊರೆಯಬಹುವಾದ ಆಧಾರಗಳನ್ನೂ ಮುಖ್ಯವಾಗಿ ಅವಲಂಬಿಸಬೇಕಾಗಿದೆ. ಈ ಪ್ರಮಾಣಗಳನ್ನು ವಿಮರ್ಶಿಸಿ ಕವಿಯ ಕಾಲವನ್ನು ನಿರ್ಣಯಿಸುವ ವಿಷಯದಲ್ಲಿ ಪಂಡಿತರಲ್ಲಿ ಐಕಮತ್ಯವು ಕಂಡುಬರುವದಿಲ್ಲ. ಹಲವು ವಿದ್ವಾಂಸರು ಈತನು ಅಶ್ವಘೋಷನ ನಂತರ ಮತ್ತು ಕಾಳಿದಾಸನ ಪೂರ್ವದಲ್ಲಿ ಇದ್ದನೆಂದು ಅಭಿಪ್ರಾಯಪಡುತ್ತಾರೆ. ಕೆಲವರು ಅವನು ಇವರಿಗಿಂತಲೂ ಪೂರ್ವಿಕನೆಂದು ಹೇಳುವರು. ಗ್ರಂಥಸ್ಥ ಆಧಾರಗಳ ಮೇಲಿಂದಲೇ ಕಾಲನಿರ್ಣಯವನ್ನು ಮಾಡಬೇಕಾದ ಸಂದರ್ಭಗಳಲ್ಲಿ ನಿಶ್ಚಿತವಾಗಿ ಇಂಥ ಕಾಲವೇ ಎಂದು ಹೇಳಲು ಸಾಧ್ಯವಾಗುವದಿಲ್ಲ. ಗ್ರಂಥಸ್ಥ ಆಧಾರಗಳಿಂದ ಹೊರಡುವ ತರ್ಕವಿತರ್ಕಗಳು ಭಿನ್ನವಾಗಿಯೂ ಪರಸ್ಪರ ವಿರುದ್ಧವಾಗಿಯೂ ಇರಬಹುದು. ಆದ್ದರಿಂದ ಸಾಮಾನ್ಯವಾಗಿ ಎಲ್ಲ ಪಂಡಿತರು ಒಪ್ಪುವ ವಿಷಯಗಳನ್ನು ಸ್ವೀಕರಿಸುವದು ಉತ್ತಮ. ಕಾಳಿದಾಸನು ಕ್ರಿ. ಶ. ಪೂರ್ವದಲ್ಲಿ ಮೂರನೆ ಶತಮಾನದಿಂದ ಒಂದನೇ ಶತಮಾನದೊಳಗಿನ ಕಾಲದಲ್ಲಿದ್ದನೆಂದು ಗ್ರಹಿಸಿದರೆ ಭಾಸನು ಕ್ರಿ. ಶ. ಪೂರ್ವದಲ್ಲಿ ಐದನೇ ಶತಮಾನದಿಂದ ಮೂರನೇ ಶತಮಾನದ ಕಾಲಾವಧಿಯಲ್ಲಿ ಇದ್ದನೆಂದು ಹೇಳಲು ಯಾವ ಅಭ್ಯಂತರವೂ ಇರುವದಿಲ್ಲ.



ವಿವಾದಾತ್ಮಕ ವಿಷಯಗಳಾದ ಕವಿಯ ಕಾಲ ಮತ್ತು ಗ್ರಂಥಕರ್ತೃತ್ವ ಮೊದಲಾದವುಗಳನ್ನು ಬಿಟ್ಟು ನಮಗೆ ದೊರೆತ ಕೃತಿಗಳು ಭಾಸನವೇ ಎಂದು ಸ್ವೀಕರಿಸಿ ವಿಮರ್ಶಾತ್ಮಕ ದೃಷ್ಟಿಯಿಂದ ಅವುಗಳನ್ನು ಪರಿಶೀಲಿಸಿದಲ್ಲಿ, ಕವಿಯ ಬುದ್ಧಿಮತ್ತೆ, ಚಾತುರ್ಯ, ಪಾಂಡಿತ್ಯ, ರಸನಿರ್ಮಾಣ ಕೌಶಲ್ಯ, ವರ್ಣನೆಗಳ ರಮಣೀಯತೆ, ಯುಕ್ತ ಶಬ್ದಪ್ರಯೋಗ ಮೊದಲಾದ ಗುಣಗಳು ಒಡೆದು ಕಾಣುತ್ತವೆ. ಈ ವಿವಿಧ ಗುಣಗಳನ್ನು ಒಂದೊಂದಾಗಿ ಸೋದಾಹರಣವಾಗಿ ನಿರೂಪಿಸಬಹುದು. ಪ್ರಸ್ತುತ ಲೇಖನದಲ್ಲಿ ಕವಿಯ ವರ್ಣನೆಗಳ ರಮಣೀಯತೆ, ಸರಳತೆ, ರಸಗಾಂಭೀರ್ಯಗಳನ್ನು ಉದಾಹರಣೆಗಳನ್ನು ನಿರೂಪಿಸಿ, ಬೇರೆ ಕವಿಗಳ ವರ್ಣನೆಗಳನ್ನು ಉದಾಹರಿಸಿ ಹೋಲಿಸಿ ಸ್ಥಾಪಿಸಲು ಪ್ರಯತ್ನಿಸಲಾಗಿದೆ. ಕೆಲವು ವರ್ಣನೆಗಳು ಕವಿಯ ವೈಶಿಷ್ಟ್ಯವನ್ನು ವ್ಯಕ್ತಪಡಿಸುತ್ತವೆ. ಕವಿಯ ವರ್ಣನೆಗಳಲ್ಲಿ ಕಂಡು ಬರುವ ನಿಸರ್ಗರಮಣೀಯತೆಯೂ ಪದ ಲಾಲಿತ್ಯವೂ ಸರಳತೆಯೂ ಹೃದಯಂಗಮವಾಗಿವೆ. ಭಾಸಕವಿಯ ನಾಟಕಗಳ ಸೌಂದರ್ಯವೂ ಹೃದಯಂಗಮತೆಯೂ ಅವುಗಳಲ್ಲಿ ಮನೋವೇಧಕವಾಗಿ ಚಿತ್ರಿಸಲ್ಪಟ್ಟ ಲೋಕಸ್ಥಿತಿಯ ಯಥಾಭೂತ ಶಬ್ದಚಿತ್ರಗಳನ್ನು ಅವಲಂಬಿಸಿವೆ.

ಭಾಸ ಕವಿಯ ನಾಟಕಗಳನ್ನು ವಿಮರ್ಶಿಸುವಾಗ, ಕವಿಯ ನಿರ್ಮಾಣಶಕ್ತಿಯ ಅವಸ್ಥಾ ವಿಶೇಷಗಳನ್ನನುಲಕ್ಷಿಸಿ ನಾಟಕಗಳನ್ನು ವಿಭಾಗಿಸಬೇಕು. ಎಲ್ಲ ನಾಟಕಗಳನ್ನು ಒಂದೇ ಕಕ್ಷೆಯಲ್ಲಿ ಸೇರಿಸಲಾಗದು. ಪ್ರಥಮಾವಸ್ಥೆಯಲ್ಲಿ ನಿರ್ಮಿತವಾದ ನಾಟಕಗಳು, ಮಧ್ಯಮಾವಸ್ಥೆಯಲ್ಲಿ ನಿರ್ಮಿತವಾದವುಗಳು, ಮತ್ತು ಪರಿಪಕ್ವ ಅವಸ್ಥೆಯಲ್ಲಿ ರಚಿತವಾದವುಗಳು, ಎಂಬ ಮೂರು ಕಕ್ಷೆಗಳನ್ನು ನಿರ್ಮಿಸಿ, ನಂತರ ಒಂದೊಂದು ಕಕ್ಷೆಯಲ್ಲಿ ಸೇರ್ಪಡೆ ಹೊಂದಿದ ನಾಟಕಗಳನ್ನು ವಿಮರ್ಶಿಸಬೇಕು. ಪ್ರತಿಮಾ, ಸ್ವಪ್ನವಾಸವದತ್ತ, ಚಾರುದತ್ತ ಮತ್ತು ಅವಿಮಾರಕ ಈ ನಾಲ್ಕು ನಾಟಕಗಳು ಕವಿಯ ನಿರ್ಮಾಣಶಕ್ತಿಯ ಪರಿಣತಾವಸ್ಥೆಯಲ್ಲಿ ರಚಿತವಾದವುಗಳೆಂದು ಹೇಳಬಹುದು. ಇವುಗಳಲ್ಲಿ ಸ್ವಪ್ನವಾಸವದತ್ತ ನಾಟಕವು ಕವಿಯ ಕೃತಿರತ್ನ (Master Piece) ವಾಗಿದೆ. ಈ ನಾಟಕದಲ್ಲಿ ಕಂಡುಬರುವ ಕಾವ್ಯಗುಣಗಳೂ ಸಂವಿಧಾನಚಾತುರ್ಯವೂ ರಸಪರಿಪೋಷಣೆಯೂ ನಾಟ್ಯಪ್ರಯೋಗದಲ್ಲಿಯ ವೈಚಿತ್ರ್ಯ ಸಂಪಾದನೆಯೂ ರಮ್ಯವಾದ ಯಥಾಸ್ಥಿತ ವರ್ಣನೆಗಳೂ ಮುಖ್ಯವಾಗಿವೆ. ವರ್ಣನೆಗಳ ಜೊತೆಯಲ್ಲಿಯೇ ಅಲಂಕಾರಗಳನ್ನೂ ಕವಿಸಮಯವನ್ನೂ ರಸಪೋಷಣೆಯನ್ನೂ ಹೆಣೆದಿದ್ದಾನೆ.

ಈ ನಾಟಕಗಳ ರಮಣೀಯತೆಯೂ ರಸಾತ್ಮಕ ದೃಶ್ಯಗಳಿಂದ ಸ್ಥಗಿತನಾಗದ ಸಂವಿಧಾನಗಳ ಅವಿಚ್ಛಿನ್ನ ಪರಂಪರೆಯಲ್ಲಿದೆ. ಪ್ರೇಕ್ಷಕರ ಚಿತ್ತವು ಎಡೆಬಿಡದೆ ತೋರಿಸಲ್ಪಡುವ ಚಿತ್ರಗಳಿಂದ ಮುಗ್ಧವಾಗುವದು. ಪ್ರೇಕ್ಷಕರ ಔತ್ಸುಕ್ಯ ಭಂಗವು ನಾಟಕಸಮಾಪ್ತಿಯ ವರೆಗೂ ಆಗುವದಿಲ್ಲ. ನಾಟಕಗಳಲ್ಲಿಯ ನಾಯಕ ನಾಯಿಕೆ ಧೀರೋದಾತ್ತರಿರುವರು. ಇವರೆಲ್ಲರೂ ಅಲೌಕಿಕ ಪುರುಷರಾಗಿರದೆ, ಪ್ರಪಂಚದಲ್ಲಿ ಪ್ರತಿನಿತ್ಯ ಕಾಣುವ ವ್ಯಕ್ತಿಗಳಂತೆ ಇರುವರು. ಇವರು ಆಚರಿಸುವ ಕೃತಿಗಳು ಸಹ ಅಲೌಕಿಕವಾಗಿರುವದಿಲ್ಲ. ಈ ರೀತಿಯಾಗಿ ಕವಿಯು ಸುಂದರವಾಗಿರುವ ಮತ್ತು ಜೀವನಕ್ಕೆ ಹೊಂದಿಕೊಂಡಿರುವ ಪಾತ್ರರನ್ನು ನಿರ್ಮಿಸುವಲ್ಲಿ ಜಯಶೀಲನಾಗಿದ್ದಾನೆ. ಇವನ ನಾಟಕಗಳ ಭಾಷೆ, ಶಬ್ದಪ್ರಯೋಗ ಮತ್ತು ಪಾತ್ರರಲ್ಲಿ ವ್ಯಕ್ತವಾಗುವ ಮಾನಸಿಕ ಹಿನ್ನೆಲೆಯ ವಿಷಯವಾಗಿ, ಸುದೀರ್ಘವಾಗಿ ಚರ್ಚೆ ಮಾಡಬಹುದು. ರಂಗಭೂಮಿಗೆ ಯೋಗ್ಯವಾದ ಇಂತಹ ಕೃತಿಗಳನ್ನು ರಚಿಸಿದ ಕವಿಯು ಕವಿಗಳಲ್ಲಿ ಶ್ರೇಷ್ಠನೆಂದೇ ಹೇಳಬೇಕು. ಆದ್ದರಿಂದಲೇ ವಿಮರ್ಶಕರಾದ ಪಾಶ್ಚಿಮಾತ್ಯ ಪಂಡಿತರು ಇವನ ಕೃತಿಗಳನ್ನು ಬಹಳವಾಗಿ ಹೊಗಳಿದ್ದಾರೆ. ರಂಗಭೂಮಿಗೆ ಯೋಗ್ಯವಾಗಿ ನಾಟ್ಯಪ್ರಯೋಗಕ್ಕೆ ಅನುಗುಣವಾದ ಈ ನಾಟಕಗಳನ್ನು ಎಲ್ಲ ನಾಟ್ಯಕೃತಿಗಳಲ್ಲಿ ಶ್ರೇಷ್ಠವೆಂದು ಘಂಟಾಘೋಷವಾಗಿ ಕೊಂಡಾಡಿದ್ದಾರೆ. ಭವಭೂತಿ ಮತ್ತು ಕಾಳಿದಾಸ ಮೊದಲಾದ ನಾಟಕಕಾರರ ಕೃತಿಗಳು ವಾಙ್ಮಯದ ದೃಷ್ಟಿಯಿಂದ ಉತ್ತಮವಿದ್ದರೂ ಇವನ ಕೃತಿಗಳಂತೆ ರಂಗಭೂಮಿಯ ಮೇಲೆ ಅಭಿನಯಿಸಲು ಯೋಗ್ಯವಾದವುಗಳಿಲ್ಲ. ಅವು ಅತಿಮಾನುಷ ವ್ಯಾಪಾರಗಳಿಂದ ಮತ್ತು ವರ್ಣನೆಗಳಿಂದ ಕೂಡಿದ್ದು, ಸಾಮಾನ್ಯ ಪ್ರೇಕ್ಷಕರಿಗೆ ಅರ್ಥವಾಗದ ಗಹನ ಮತ್ತು ಕಠಿನ ಶಬ್ದಘಟಿತ ಭಾಷೆಯಲ್ಲಿ ರಚಿಸಲ್ಪಟ್ಟಿವೆ. ಆದ್ದರಿಂದ ರಂಗಭೂಮಿಯ ಮೇಲೆ ತಂದರೆ, ಸಾಮಾನ್ಯ ಪ್ರೇಕ್ಷಕರು ಆ ಕೃತಿಗಳಲ್ಲಿಯ ಅರ್ಥಗಾಂಭೀರ್ಯ, ಶಬ್ದಜೋಡಣೆಯ ಸೌಂದರ್ಯ, ವರ್ಣನೆಗಳ ವೈಚಿತ್ರ್ಯ, ಪದಲಾಲಿತ್ಯ, ರಸಪ್ರಾಚುರ್ಯ ಮೊದಲಾದ ಗುಣಗಳನ್ನು ಗ್ರಹಿಸಲು ಶಕ್ತರಾಗುವದಿಲ್ಲ. ಪಂಡಿತನಲ್ಲದವನು ಆ ನಾಟಕಗಳ ಯೋಗ್ಯತೆಯನ್ನು ಕಂಡುಹಿಡಿಯಲಾರನು. ಆ ಕೃತಿಗಳ ಅಭಿನಯದಿಂದ ದೊರೆಯುವ ಸುಖವೂ ಅವನಿಗೆ ದೊರೆಯಲಾರದು. ಭಾಸನ ಕೃತಿಗಳು ಹಾಗಿರದೆ, ಸಾಮಾನ್ಯ ಪ್ರೇಕ್ಷಕನಿಗೂ ಆನಂದವನ್ನುಂಟು ಮಾಡಬಹುದಾದ, ಸರಳ ಭಾಷೆ, ವರ್ಣನೆ, ರಸ, ಅಲಂಕಾರಾದಿ ಗುಣಗಳಿಂದ ತುಂಬಿ ತುಳುಕುತ್ತವೆ.

ಮಹಾ ಕಾವ್ಯಗಳಾದ, ರಾಮಾಯಣ ಮತ್ತು ಮಹಾಭಾರತಗಳಲ್ಲಿ ಕಂಡುಬರುವ ಭಾಷೆಯ ಸರಳತೆ ಇವನ ನಾಟಕಗಳಲ್ಲಿ ಕಂಡುಬರುವದು. ಆ ಮಹಾಕಾವ್ಯಗಳ ಪ್ರಭಾವವು ಆ ಕೃತಿಗಳ ಮೇಲೆ ಹೆಚ್ಚಾಗಿದೆ. ಸುದೀರ್ಘವಾದ ವರ್ಣನೆಗಳನ್ನು ಕವಿಯು ಉದ್ದೇಶಪೂರ್ವಕವಾಗಿಯೇ ಬಿಟ್ಟಂತೆ ತೋರುವದು. ಅಂತಹ ವರ್ಣನೆಗಳಿಗೆ ಯೋಗ್ಯವಿರುವ ಪ್ರಸಂಗಗಳಲ್ಲಿ ಸಹ ಕವಿಯು ವರ್ಣನೆಗಳನ್ನು ಮಾಡದಿರುವದೇ ಈ ಊಹೆಗೆ ಪೋಷಕವಾಗಿದೆ. ಅವನ ವಾಕ್ಸರಣಿಯು ಬಹಳ ಸುಲಭವಾಗಿದೆ. ದೀರ್ಘ ಸಮಾಸಗಳನ್ನು ತನ್ನ ನಾಟಕಗಳಲ್ಲಿ ಕವಿಯು ಎಲ್ಲಿಯೂ ಉಪಯೋಗಿಸಿರುವದಿಲ್ಲ. ಸಮಾಸಗಳ ಉಪಯೋಗವು ಭಾಷೆಗೆ ಶೋಭೆಯನ್ನು ತರುವಂತಹದು. ಆದರೆ ದೀರ್ಘವಾದ ಸಮಾಸಗಳಿಂದ ಘಟಿತವಾದ ಭಾಷೆಯು ಪಂಡಿತರಿಗೂ ಅರ್ಥ ಮಾಡಿಕೊಳ್ಳಲಿಕ್ಕೆ ಕಠಿಣವೆನಿಸುವದು. ಕವಿಯು ಕಲ್ಪನೆಗಿಂತಲೂ ಯಥಾಸ್ಥಿತ ಸಂಗತಿಗಳಿಗೆ ಮಹತ್ವವನ್ನು ಕೊಟ್ಟಿರುವನು. ಸುಲಲಿತವಾದ ಶಬ್ದಚಿತ್ರಗಳನ್ನು ಕವಿಯು ಸುಸ್ಪಷ್ಟವಾಗಿ ರಚಿಸಿರುವನು. ಚಮತ್ಕೃತಿ, ಕಲ್ಪನೆ, ಮೊದಲಾದವುಗಳು ಅವನ ವರ್ಣನೆಗಳಲ್ಲಿ ಕಂಡುಬರುವದಿಲ್ಲ. ಇಂತಹ ವರ್ಣನೆಗಳು ನಮಗೆ ಬೇರೆ ನಾಟಕಗಳಲ್ಲಿ ದೊರೆಯುವದು ದುಷ್ಕರ. ಶೂದ್ರಕ ಮತ್ತು ಶ್ರೀಹರ್ಷ ಇವರ ಕೃತಿಗಳಲ್ಲಿ ಚಮತ್ಕಾರಿಕವಾದ ಕಲ್ಪನಾಯುಕ್ತ ವರ್ಣನೆಗಳನ್ನು ಕಾಣಬಹುದು. ಸಂಭಾಷಣೆಯು ಸಹ ಕೃತ್ರಿಮವಾಗಿಯೇ ಕಾಣುವದು. ಭಾಸನ ಕೃತಿಗಳಲ್ಲಿ ಸಂಭಾಷಣೆಯು ಕೃತ್ರಿಮವಾಗಿರದೆ, ನಮ್ಮ ನಿತ್ಯಜೀವನದಲ್ಲಿ ಕಾಣುವ ಸಂಭಾಷಣೆಯಂತೆಯೇ ಸುಲಭವೂ ಪ್ರಸಂಗಗಳಿಗೆ ಯೋಗ್ಯವೂ ಆಗಿರುವನು.



ಕವಿಯ ವರ್ಣನೆಗಳು, ಸುಲಲಿತವಾಗಿಯೂ ಸ್ವಾಭಾವಿಕವಾಗಿಯೂ ಇರುವವೆಂದು ಈ ಮೊದಲೇ ಹೇಳಲಾಗಿದೆ. ಆ ವಿಷಯವನ್ನೇ ಉದಾಹರಣೆಗಳಿಂದ ಸ್ಪಷ್ಟವಾಗಿ ತೋರಿಸಲು ಪ್ರಯತ್ನಿಸಲಾಗಿದೆ. ಪ್ರತಿಮಾ ನಾಟಕದ ಐದನೇ ಅಂಕದಲ್ಲಿಯ ಎರಡನೆಯ ಶ್ಲೋಕವು ಈ ಪ್ರಕಾರವಾಗಿದೆ:—

'ಭ್ರಮತಿ ಸಲಿಲಂ ವೃಕ್ಷಾವರ್ತೇ ಸಫೇನ-
ಮವಸ್ಥಿತಮ್
ತೃಷಿತಪತಿತಾ ನೈತೇ ಕ್ಲಿಷ್ಟಂ ಪಿಬಂತಿ
ಜಲಂ ಖಗಾಃ।

ಸ್ಥಲಮಭಿಪತಂತ್ಯಾದ್ರಾಃ ಕೀಟಾ ಬಿಲೇ
ಜಲಪೂರಿತೇ

ನವವಲಯಿನೋ ವೃಕ್ಷಾ ಜಲಕ್ಷಯರೇಖಯಾ॥

ಈ ಶ್ಲೋಕದಲ್ಲಿ ಕವಿಯ ವರ್ಣನೆಯ ಸ್ವಾಭಾವಿಕತೆಯನ್ನು ಕಾಣಬಹುದು. ಸೀತೆಯು ಗಿಡಗಳಿಗೆ ನೀರೆರೆದುಹೋದ ಸ್ವಲ್ಪವೇಳೆಯಲ್ಲಿಯೇ ಗಿಡಗಳ ಮೂಲ ಪ್ರದೇಶವು ಹೇಗೆ ಕಾಣುವದೆನ್ನುವದನ್ನು ಕವಿಯು ರಾಮನ ಮಾತಿನಲ್ಲಿ ವರ್ಣಿಸಿರುವನು. 'ಬುರುಗಿನಿಂದ ಕೂಡಿದ ನೀರು ಗಿಡದ ಪಾತಿಯಲ್ಲಿ ತಿರುಗುತ್ತಿರುವದು. ನೀರಡಿಸಿದ ಪಕ್ಷಿಗಳು ಸಹ ಆ ನೀರನ್ನು ಕುಡಿಯುವದಿಲ್ಲ. ನೆಲದೊಳಗಿನ ಗುದ್ದುಗಳು ನೀರಿನಿಂದ ತುಂಬಿರುವದರಿಂದ, ಸಣ್ಣ ಹುಳಗಳು ಮೇಲೆ ಬರುತ್ತವೆ. ನೀರು ನೆಲದೊಳಗೆ ಇಂಗಿದ್ದರಿಂದ ಉಂಟಾದ ಗೆರೆಯಿಂದ ಆ ಗಿಡಗಳು ಹೊಸ ಪಾತಿಯ ರೇಖೆಯುಳ್ಳಂತೆಕಾಣುತ್ತವೆ.' ಇಂತಹ ಸುಂದರವಾದ ಶಬ್ದಚಿತ್ರವನ್ನು ಸುಲಭ ಶಬ್ದಗಳಲ್ಲಿ ಸ್ವಾಭಾವಿಕವಾಗಿಯೇ ಚಿತ್ರಿಸಿದ ಕುಶಲತೆಯು ಭಾಸನ ವರ್ಣನೆಗಳ ವೈಶಿಷ್ಟ್ಯವಾಗಿದೆ. ಇವನ ವರ್ಣನೆಯನ್ನೂ ಇತರ ಕವಿಗಳ ವರ್ಣನೆಗಳನ್ನೂ ತುಲನಾತ್ಮಕ ದೃಷ್ಟಿಯಿಂದ ಪರಿಶೀಲಿಸಿ, ಈ ಕವಿಯ ವರ್ಣನೆಗಳ ಸೊಬಗನ್ನು ಕಂಡುಹಿಡಿಯಬಹುದು. 'ಅಭಿಷೇಕ' ನಾಟಕದಲ್ಲಿ ಚಂದ್ರವರ್ಣನೆ ಇರುವದು. ರಾವಣನು ಈ ರೀತಿಯಾಗಿ ವರ್ಣಿಸಿರುವನು:—

'ರಜತರಚಿತದರ್ಪಣಪ್ರಕಾಶೈಃ
ಕರನಿಕರೈಃ ಹೃದಯಂ ಮಮಾಭಿಪೀಡ್ಯ ।
ಉದಯತಿ ಗಗನೇ ವಿಜೃಂಭಮಾಣಃ
ಕುಮುದವನಪ್ರಿಯಬಾಂಧವಃ ಶಶಾಂಕಃ ॥

'ಬೆಳ್ಳಿಯ ಕನ್ನಡಿಯಂತೆ ಪ್ರಕಾಶವುಳ್ಳ, ಕಮಲದ ವನಗಳಿಗೆ ಬಾಂಧವನಾದ, ಚಂದ್ರನು ತನ್ನ ಕಿರಣಗಳ ಸಮೂಹದಿಂದ ನನ್ನ ಹೃದಯವನ್ನು ಪೀಡಿಸಿ ಬಹಳ ಆಢ್ಯತೆಯಿಂದ ಉದಯ ಹೊಂದುತ್ತಿರುವನು.' ಕವಿವರ್ಯ ಕಾಲಿದಾಸನು ರಚಿಸಿದ 'ವಿಕ್ರಮೋರ್ವಶೀಯ' ನಾಟಕದಲ್ಲಿಯೂ ಚಂದ್ರನ ವರ್ಣನೆಯನ್ನು ಕಾಣಬಹುದು. ಪುರೂರವ ಅರಸನು ಚಂದ್ರನನ್ನು ಈ ಪ್ರಕಾರ ವರ್ಣಿಸಿರುತ್ತಾನೆ:—

'ರವಿಮಾವಿಶತೇ ಸತಾಂ ಕ್ರಿಯಾಯೈ
ಸುಧಯಾ ತರ್ಪಯತೇ ಪಿತೄನ್ ಸುರಾಂಶ್ಚ ।
ತಮಸಾಂ ನಿಶಿ ಮೂರ್ಛತಾಂ ನಿಹಂತ್ರೇ ।
ಹರಚೂಡಾನಿಹಿತಾತ್ಮನೇ ನಮಸ್ತೇ ॥'

'ಸಜ್ಜನರ ಧರ್ಮಕ್ರಿಯೆಗಳಿಗೆ ಸಹಾಯವಾಗುವದಕ್ಕೆ ಸೂರ್ಯನನ್ನು ಪ್ರವೇಶಿಸುವ, ಪಿತೃಗಳನ್ನು ಮತ್ತೂ ದೇವತೆಗಳನ್ನು ಅಮೃತದಿಂದ ಸಂತೋಷಗೊಳಿಸುವ, ರಾತ್ರಿಯಲ್ಲಿ ಎಲ್ಲೆಡೆಯಲ್ಲಿಯೂ ವ್ಯಾಪಿಸುವ ಕತ್ತಲೆಯನ್ನು ನಾಶಗೊಳಿಸುವ, ಶಂಕರನ ಜಡೆಯಲ್ಲಿ ನೆಲಸಿದ ನಿನಗೆ ನಮಸ್ಕಾರವು.' ಕವಿತಿಲಕರ ಈ ವರ್ಣನೆಗಳನ್ನು ಪರಿಶೀಲಿಸಿದರೆ ಭಾಸಕವಿಯ ವರ್ಣನೆಗಳ ಚಮತ್ಕೃತಿಯು ಕಂಡುಬರದಿರದು. ಭಾಸನು ಚಂದ್ರನ ಯಥಾಸ್ಥಿತ ವರ್ಣನೆಯನ್ನು ಸುಲಭವಾದ ಉಪಮೆಯನ್ನು ಕೊಟ್ಟು ಹೃದಯಂಗಮವಾಗುವಂತೆ ವರ್ಣಿಸಿರುವನು. ಕಾಲಿದಾಸನು ತನ್ನ ಕಲ್ಪನಾ ಸಾಮರ್ಥ್ಯವನ್ನೂ ಪುರಾಣಗಳ ಜ್ಞಾನವನ್ನೂ ತೋರ್ಪಡಿಸಿ, ಚಮತ್ಕೃತಿಯ ಇಂದ್ರಜಾಲವನ್ನು ಮೆರೆದಿದ್ದಾನೆ. ಪರ್ವಕಾಲದಲ್ಲಿ ಚಂದ್ರನು ಸೂರ್ಯನಿಂದ ಒಡಗೂಡಿ ಪಿತೃಕಾರ್ಯಗಳಿಗೆ ಸಹಾಯಕನಾಗುವನೆಂದು ವರ್ಣಿಸಿರುವನು. ಅದರಂತೆಯೇ ದೇವತೆಗಳನ್ನು ಮತ್ತು ಪಿತೃದೇವತೆಗಳನ್ನು ಅಮೃತದಿಂದ ತಣಿಸುವ ಮತ್ತು ಶಂಕರನ ಜಡೆಯನ್ನೇರಿದ, ಪೌರಾಣಿಕ ಸಂಗತಿಗಳನ್ನು ಕವಿಯು ತನ್ನ ವರ್ಣನೆಗಳಲ್ಲಿ ಬೆರಸಿರುವನು. ಭಾಸಕವಿಯು ಈ ತರಹದ ಚಮತ್ಕೃತಿ ಮತ್ತು ಕಲ್ಪನೆಗಳ ಸಹಾಯವಿಲ್ಲದೆ ಸುಂದರವಾದ ವರ್ಣನಾತ್ಮಕ ಚಿತ್ರವನ್ನು ಚಿತ್ರಿಸಿರುವದು ಅವನ ವರ್ಣನೆಗಳ ಮತ್ತು ವರ್ಣನಾಸಾಮರ್ಥ್ಯದ ಉತ್ಕೃಷ್ಟತೆಯ ದ್ಯೋತಕವು. ಒಂದೇ ವಸ್ತುವಿನ ಅಥವಾ ಕೃತಿಗಳ ವರ್ಣನೆಗಳನ್ನು ಬೇರೆ ಬೇರೆ ಕವಿಗಳ ಕೃತಿಗಳಲ್ಲಿ ಕಾಣಬಹುದು. ಪ್ರತಿಮಾ ನಾಟಕದಲ್ಲಿ ಭಾಸನು ರಥದ ವೇಗವನ್ನು ವರ್ಣಿಸಿರುವನು:

' ದ್ರುಮಾ ಧಾವಂತೀವ ದ್ರುತರಥಗತಿಕ್ಷೀಣ
ವಿಷಯಾ
ನದೀವೋದ್ವೃತ್ತಾಂಬುರ್ನಿಪತತಿ ಮಹೀ
ನೇಮಿವಿವರೇ ॥
ಅರವ್ಯಕ್ತಿರ್ನಷ್ಟಾ ಸ್ಥಿತಮಿವ ಜವಾಚ್ಚಕ್ರ
ವಲಯಮ್ ॥
ರಜಶ್ಚಾಶ್ವೋದ್ಧೂತಂ ಪತತಿ ಪುರತೋ ನಾನು
ಪತತಿ ॥

( ಅಂಕ ೩, ಪದ್ಯ ೨ )

' ರಥದ ತೀವ್ರಗತಿಯಿಂದ ತಮ್ಮ ಸ್ಥಳವು ತೋರದಂತಾದ ಗಿಡಗಳು ಓಡುತ್ತಿರುವಂತೆ ಕಾಣುವವು. ಭೂಮಿಯು ( ದಾರಿಯಲ್ಲಿಯ ಧೂಳಿಯು) ಚಕ್ರದ ಪರಿಘದಿಂದ ನಿರ್ಮಿತವಾದ ವಿವರದಲ್ಲಿ, ನದಿಯು ಏರಿ ಬರುವ ನೀರಿನ ಕೆಳಗೆ ಇಳಿಯುವಂತೆ ಇಳಿಯುತ್ತಿರುವದು. ಗಾಲಿಯ ಹಲ್ಲುಗಳು ಕಾಣದಂತಾಗಿವೆ. ವೇಗದಿಂದ ಚಕ್ರದ ವಲಯುವು ಸ್ಥಿರವಾದಂತೆ ಕಾಣುವದು. ಕುದುರೆಗಳ ಖುರದಿಂದ ಹೊರಟ ಧೂಳು ಮುಂದೆ ತೂರಿಕೊಳ್ಳುವದು, ಹಿಂದೆ ಕಾಣಲಾರದು' ಕಾಲಿದಾಸನ 'ವಿಕ್ರಮೋರ್ವಶೀಯ' ನಾಟಕದಲ್ಲಿಯೂ ರಥದ ವೇಗದ ವರ್ಣನೆಯನ್ನೇ ಕಾಣಬಹುದು.

"ಅಗ್ರೇಯಾಂತಿ ರಥಸ್ಯ ರೇಣುಪದವೀ
ಚೂರ್ಣೀಭವಂತೋ ಘನಾಃ
ಚಕ್ರಭ್ರಾಂತಿರರಾಂತರೇಷು ಜನಯತ್ಯನ್ಯಾಮಿ-
ವಾರಾವಲೀಮ್ ।
ಚಿತ್ರನ್ಯಸ್ತಮಿವಾಚಲಂ ಹಯಶಿರಸ್ಯಾಯಾಮ
ವಚ್ಚಾಮರಂ
ಯಷ್ಟ್ಯಗ್ರೇ ಚ ಸಮಂ ಸ್ಥಿತೋ ಧ್ವಜಪಟಃ
ಪ್ರಾಂತೇ ಚ ವೇಗಾನಿಲಾತ್ ।

(ಅಂಕ ೧. ಪದ್ಯ ೫)

' ಪುಡಿಯಾಗುತ್ತಿರುವ ಮೋಡಗಳು ರಥದ ಎದುರಿನಲ್ಲಿ ಧೂಳಿಯಂತೆ ಹಾರುತ್ತಿವೆ. ಚಕ್ರಗಳ ಭ್ರಮಣವು ಹಲ್ಲುಗಳ ನಡುವೆ ಬೇರೆ ಹಲ್ಲುಗಳನ್ನು ನಿರ್ಮಿಸಿದಂತೆ ಕಾಣುವದು. ಕುದುರೆಗಳ ತಲೆಯ ಮೇಲಿನ ಚಾಮರಗಳು ಚಿತ್ರಲಿಖಿತದಂತೆ ನಿಶ್ಚಲವಾಗಿರುವವು. ವಾಯುವೇಗದಿಂದ ಧ್ವಜಪಟವು ಸ್ತಂಭದ ತುದಿಗೆ ಸಮನಾಗಿ ನಿಂತಿರವದು.' ಇವೆರಡು ವರ್ಣನೆಗಳಲ್ಲಿ ಏಕರೂಪತೆಯು ಕಂಡು ಬರುವದು. ಭಾಸಕವಿಯ ಕಲ್ಪನಾಶಕ್ತಿಯು ಗೂಢವಾಗಿದ್ದು ಇಚ್ಛಿಸಿದಾಗ ಪ್ರಜ್ವಲಿಸಬಹುದೆನ್ನುವದು ಇದರಿಂದ ವ್ಯಕ್ತವಾಗುವದು. ಕಲ್ಪನಾಸಾಮರ್ಥ್ಯದಲ್ಲಿ ಈ ಕವಿಯು ಇತರ ಕವಿಗಳಿಗೆ ಯಾವ ವಿಧದಲ್ಲಿಯೂ ಕಡಿಮೆಯವನಲ್ಲ. ಸುಂದರವಾದ ಸರಳ ಶಬ್ದಗಳಲ್ಲಿ ಕವಿಯು ಮನೋವಿಕಾರಗಳನ್ನು ಸಹ ವರ್ಣಿಸಬಲ್ಲನು. ಇಂಥ ವರ್ಣನೆಗಳು 'ಸ್ವಪ್ನವಾಸವದತ್ತ' 'ಮಧ್ಯಮವ್ಯಾಯೋಗ,' 'ಪ್ರತಿಮಾ' ಮೊದಲಾದ ನಾಟಕಗಳಲ್ಲಿ ಕಾಣಬಹುದು. ಸುಂದರವಾದ ಮತ್ತು ಸರಳವಾದ ಭಾಷೆಯಲ್ಲಿ, ಇಂತಹ ಎಲ್ಲ ದೃಷ್ಟಿಯಿಂದಲೂ ಅದ್ಭುತವಾದ ಮತ್ತು ಸುಂದರವಾದ ಕೃತಿಗಳನ್ನು ಕವಿಯು ಶ್ರಮವಿಲ್ಲದೆ ರಚಿಸುವನೆಂಬುದು ಒಡೆದು ಕಾಣುವದು. ಇಂತಹ ಕವಿಸಮ್ರಾಟನ ಕೃತಿ-ರತ್ನಗಳನ್ನು ಯಾವ ಸಾಹಿತ್ಯ ಪ್ರೇಮಿಯೂ ಅವಲೋಕಿಸಿ ಆನಂದಿಸದೆ ಇರಲಾರನು.



## ಪತ್ರಿಕೆ ಮಾರುವವನು

# ವಿಜ್ಞಾನಿಶ್ರೇಷ್ಠನಾದುದು

## (ಮೈಕಲ್ ಫೆರಾಡೆಯ ಜೀವನ)

**ವಾರಕ್ಕೆರಡು ಬಾರಿ ರೊಟ್ಟಿಸಿಗುವುದೂ ಕಷ್ಟವಾದ ಬಾಲ್ಯಜೀವನ ನಡೆಸಿದ ಮೈಕಲ್ ಫೆರಾಡೆ ಹತ್ತೊಂಭತ್ತನೆ ಶತಮಾನದ ಪ್ರಮುಖ ವಿಜ್ಞಾನಿಗಳಲ್ಲೊಬ್ಬನು. ಇವನ ಚರಿತ್ರವು ಅದ್ಭುತವು ಮತ್ತು ಅತ್ಯಂತ ಸ್ಫೂರ್ತಿದಾಯಕವಾದುದು . . .**

ಲೇಖಕರು : ಪ್ರೊ. ವೆಂಕೋಬಾಚಾರ್ಯ ಉಪಾಧ್ಯಾಯ, ಎಂ. ಎಸ್‌ಸಿ.

---

೧೯ನೆಯ ಶತಮಾನದ ಪ್ರಮುಖ ಪ್ರಯೋಗ-ನಿಷ್ಠ ತತ್ವಜ್ಞಾನಿಗಳಲ್ಲಿ ಒಬ್ಬರಾದ ಮೈಕಲ್-ಫೆರಾಡೆಯವರು ಇಂಗ್ಲೆಂಡಿನ ಸರೆ (Surrey) ಪ್ರಾಂತದಲ್ಲಿರುವ ನೆವಿಂಗಟನ್ (Newington) ಎಂಬ ಊರಿನಲ್ಲಿ ೧೭೯೧ ನೆಯ ಸಪ್ಟಂಬರ್ ೨೦ ನೆಯ ತಾರೀಖಿನ ದಿವಸ ಒಂದು ಬಡ ಮನೆತನದಲ್ಲಿ ಜನ್ಮ ತಾಳಿದರು. ಇವರು ತಮ್ಮ ತಾಯಿ ತಂದೆಗಳಿಗೆ ಮೂರನೆಯ ಮಕ್ಕಳಾಗಿದ್ದರು. ಇವರ ತಂದೆ ಕಮ್ಮಾರರು. ಅವರು ಯಾವಾಗಲೂ ಬೇನೆಯಿಂದ ಬಳಲುತ್ತಿದ್ದುದರಿಂದ ಮನೆಯಲ್ಲಿದ್ದವರಿಗೆ ಹೊಟ್ಟೆತುಂಬ ಅನ್ನ ಸಿಕ್ಕುತ್ತಿರಲಿಲ್ಲ. ಫೆರಾಡೆಯವರಿಗೆ ವಾರಕ್ಕೊಮ್ಮೆ ಒಂದೆರಡು ರೊಟ್ಟಿಗಳು ಸಿಕ್ಕುತ್ತಿದ್ದವು. ಅದನ್ನೇ ಅಪರೂಪಮಾಡಿಕೊಂಡು ಅವರು ಒಂದು ವಾರವನ್ನು ಕಳೆಯಬೇಕಾಗುತ್ತಿತ್ತು. ಇಂಥ ಬಡಸ್ಥಿತಿಯಲ್ಲಿಯೂ ಫೆರಾಡೆಯವರ ತಂದೆತಾಯಿಗಳು ಅವರನ್ನು ಶಾಲೆಗೆ ಕಳುಹಿಸಿದರು. ಶಾಲೆಯಲ್ಲಿ ಅವರು ಓದಲು ಬರೆಯಲು ಕಲಿತರಲ್ಲದೆ ಗಣಿತದ ಅಭ್ಯಾಸವನ್ನೂ ಮಾಡಿಕೊಂಡರು.

ಮನೆಯ ಪರಿಸ್ಥಿತಿ ದಿನದಿನಕ್ಕೆ ಕೆಡತೊಡಗಿದ್ದರಿಂದ ಫೆರಾಡೆಯವರು ಹನ್ನೆರಡನೆಯ ವಯಸ್ಸಿನಲ್ಲಿಯೇ ಒಬ್ಬ ಪುಸ್ತಕವ್ಯಾಪಾರಿಯ ಹತ್ತರ ಕೆಲಸಕ್ಕೆ ನಿಂತುಕೊಂಡರು. ತಮ್ಮ ಯಜಮಾನನಿಂದ ವರ್ತಮಾನಪತ್ರಗಳನ್ನು ತೆಗೆದುಕೊಂಡು ಅವುಗಳನ್ನು ಮಾರಾಟ ಮಾಡುವುದು ಅವರ ನಿತ್ಯದ ಕೆಲಸವಾಗಿತ್ತು. ಒಂದೊಂದು ವೇಳೆ ಅವರಿಗೆ ಬಹಳ ದೂರದವರೆಗೆ ನಡೆದುಕೊಂಡು ಹೋಗಬೇಕಾಗುತ್ತಿತ್ತು. ಮುಂಜಾವದಲ್ಲಿ ವರ್ತಮಾನಪತ್ರಗಳು ಮಾರಾಟವಾಗದಿದ್ದರೆ ಅವರಿಗೆ ಸಂಜೆಯ ಸಮಯದಲ್ಲಿ ಕೂಡ ಅಲೆದಾಡಬೇಕಾಗುತ್ತಿತ್ತು. ಇಷ್ಟು ದುಡಿದರೂ ಅವರಿಗೆ ಕೈತುಂಬ ಹಣ ಸಿಕ್ಕುತ್ತಿರಲಿಲ್ಲ. ಒಂದೆರಡು ವರ್ಷಗಳವರೆಗೆ ಇದೇ ಕೆಲಸದಲ್ಲಿ ಕಾಲಕಳೆದರು. ಅನಂತರ ಅವರು ಅದೇ ಅಂಗಡಿಯಲ್ಲಿ ಪುಸ್ತಕ ಮುಂತಾದುವುಗಳಿಗೆ ರಟ್ಟು ಹಾಕುವ (Binding) ಕೆಲಸದಲ್ಲಿ ನೇಮಿಸಲ್ಪಟ್ಟರು. ಅನೇಕ ಗ್ರಾಹಕರಿಂದ ಬೇರೆ ಬೇರೆ ತರದ ಪುಸ್ತಕಗಳು ಅವರ ಹತ್ತಿರ ರಟ್ಟು ಹಾಕಿಸುವುದಕ್ಕೆ ಬರತೊಡಗಿದುವು. ಈ ಸಮಯದಲ್ಲಿ ಅವರು ಪುಸ್ತಕಗಳನ್ನು ಹೊಲಿದು ರಟ್ಟು ಹಾಕುವದಲ್ಲದೆ ಓದಲೂ ಪ್ರಾರಂಭಿಸಿದರು. ವಿಜ್ಞಾನಕ್ಕೆ ಸಂಬಂಧಪಟ್ಟ ಕೆಲವು ಪುಸ್ತಕಗಳು ಅವರ ಮನಸ್ಸನ್ನು ಆಕರ್ಷಿಸಿದುವು. ಅವರು ಇಂಥ ಪುಸ್ತಕಗಳನ್ನು ಓದಿ ಜ್ಞಾನವನ್ನು ಕೂಡ ಸಂಪಾದಿಸಿದರು.

ಗ್ರಾಹಕರ ಸಂಗಡ ಫೆರಾಡೆಯವರು ವರ್ತಿಸುವ ರೀತಿ, ಮಾತಿನ ಚಪಲತೆ, ವಿಜ್ಞಾನದಂಥ ಕಠಿಣ ವಿಷಯದಲ್ಲಿ ಅವರಿಗಿದ್ದ ಅಭಿರುಚಿ ಮತ್ತು ಅಭಿಮಾನವನ್ನು ಕಂಡು ಗ್ರಾಹಕರಲ್ಲಿ ಒಬ್ಬರಾದ ಮಿ. ಡ್ಯಾನ್ಸ್ (Mr. Dance) ಅವರಿಗೆ ಬಹಳ ಆಶ್ಚರ್ಯವಾಯಿತು. ಫೆರಾಡೆಯವರು ರಾತ್ರಿ ಬಹಳ ವೇಳೆಯವರೆಗೆ ಕೆಲಸ ಮಾಡುತ್ತಿದ್ದರು. ಅವರು ಆಗಲೇ ಪ್ರಯೋಗಗಳನ್ನು ನಡೆಸಿರುವುದನ್ನು ಕಂಡು ಡ್ಯಾನ್ಸ್ ಅವರಿಗೆ ಆನಂದವುಂಟಾಯಿತು. ಇವರು ರಾಯಲ್ ಸಂಸ್ಥೆ (Royal Institution) ಯಲ್ಲಿ ನಡೆಯುತ್ತಿರುವ ಸರ್ ಡೇವಿ (Sir Davy) ಯವರ ಭಾಷಣಗಳನ್ನು ಕೇಳುವುದಕ್ಕಾಗಿ ಫೆರಾಡೆಯವರಿಗೆ ನಾಲ್ಕಾರು ತಿಕೀಟುಗಳನ್ನು ಕೊಟ್ಟರು. ಇದರಿಂದ ಫೆರಾಡೆಯವರಿಗೆ ಒಂದು ದೊಡ್ಡ ಆಸ್ತಿ ಸಿಕ್ಕಿದಷ್ಟು ಆನಂದ ಉಂಟಾಯಿತು.

ಅಂದಿನಿಂದ ಫೆರಾಡೆಯವರು ಸರ್ ಡೇವಿಯವರ ಭಾಷಣಗಳನ್ನು ತಪ್ಪದೇ ಕೇಳಲು ಪ್ರಾರಂಭಿಸಿದರು. ಸರ್ ಡೇವಿಯವರು ಆಗಿನ ಕಾಲದಲ್ಲಿ ಮಹಾ ಘನತೆ ಪಡೆದ ವಿಜ್ಞಾನಿಗಳಲ್ಲಿ ಒಬ್ಬರಾಗಿದ್ದರು. ಫೆರಾಡೆಯವರು ಡೇವಿಯವರ ಭಾಷಣಗಳ ಸಾರಾಂಶವನ್ನು ತೆಗೆದುಕೊಳ್ಳುತ್ತಿದ್ದರಲ್ಲದೆ ಮನೆಗೆ ಬಂದಮೇಲೆ ಅವುಗಳ ಸಹಾಯದಿಂದ ಭಾಷಣಗಳನ್ನು ವಿಶದವಾಗಿ ಬರೆದೂ ಇಡುತ್ತಿದ್ದರು ಇದರಿಂದ ಅವರ ಮನಸ್ಸು ವಿಜ್ಞಾನದ ಕಡೆಗೆ ಹೆಚ್ಚು ಒಲಿಯತೊಡಗಿತು. ನೌಕರಿಯಲ್ಲಿ ಅವರಿಗಿದ್ದ ಉತ್ಸಾಹ ದಿನಶಃ ಕಡಿಮೆ ಆಗತೊಡಗಿತು. ತಾವು ಕೈಕೊಂಡ ಕೆಲಸವನ್ನು ಬಿಟ್ಟು ವಿಜ್ಞಾನ ವಿಷಯವನ್ನು ಅಭ್ಯಸಿಸಬೇಕೆಂದು ಬಹಳ ಪ್ರಯತ್ನಪಟ್ಟರು. ಇದೇ ಮೇರೆಗೆ ಸರ್ ಡೇವಿಯವರಿಗೆ ಒಂದು ಕಾಗದವನ್ನು ಬರೆದು, ಅದರಲ್ಲಿ ವಿಜ್ಞಾನದ ವಿಷಯವಾಗಿ ತಮಗಿದ್ದ ಅಭಿರುಚಿಯನ್ನು ವ್ಯಕ್ತಪಡಿಸಿ, ಸಮಯ ಸಾಧಿಸಿದಾಗ ತಮ್ಮನ್ನು ಅವರ ನೇತೃತ್ವದಲ್ಲಿ ಕೆಲಸಮಾಡಲು ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡರು. ಅಲ್ಲದೆ ಕಾಗದದ ಜೊತೆಗೆ ಸರ್ ಡೇವಿಯವರ ಭಾಷಣಗಳ ಬಗ್ಗೆ ಬರೆದ ಎಲ್ಲ ವರದಿಯನ್ನು ಕಳುಹಿಸಿಕೊಟ್ಟರು.

ಸರ್ ಡೇವಿಯವರು ಫೆರಾಡೆಯವರ ಕಾಗದವನ್ನು ಓದಿಕೊಂಡು, ಅವರು ಕಳುಹಿಸಿದ ಭಾಷಣಗಳ ಸಂಗ್ರಹಗಳನ್ನು ನೋಡಿ ಬಹಳ ಸಂತೋಷಪಟ್ಟರು. ವಿಜ್ಞಾನದ ವಿಷಯವಾಗಿ ಈ ಯುವಕನಲ್ಲಿದ್ದ ಅಸಾಧಾರಣ ಪಾಂಡಿತ್ಯವನ್ನು ಕಂಡುಕೊಂಡು ಕ್ರಿ. ಶ. ೧೮೧೩ ರಲ್ಲಿ ಡೇವಿಯವರು ಫೆರಾಡೆಯವರನ್ನು ರಾಯಲ್ ಸಂಸ್ಥೆಯಲ್ಲಿ ತಮ್ಮ ಕೈಕೆಳಗೆ ಒಂದು ವಾರಕ್ಕೆ ೨೫ ಶಿಲಿಂಗುಗಳ ವೇತನದ ಮೇಲೆ 'ಲ್ಯಾಬ್. ಅಸಿಸ್ಟಂಟ' Lab. Assistant ) ಮಾಡಿಕೊಂಡರು. ಇಲ್ಲಿ ಅವರು ಡೇವಿಯವರು ಮಾಡುತ್ತಿದ್ದ ಸಂಶೋಧನೆಗಳಲ್ಲಿ ಸಹಾಯಕರಂತೆ ಕೆಲಸ ಮಾಡಲು ಪ್ರಾರಂಭಿಸಿದರು.

ಈ ರೀತಿಯಾಗಿ ರಾಯಲ್ ಸಂಸ್ಥೆಯೊಂದಿಗೆ ಅವರ ಸಂಬಂಧ ದಿನದಿನಕ್ಕೆ ಬೆಳೆಯತೊಡಗಿತು. ಅವರು ಆಗ ಸರ್ ಡೇವಿಯವರ ಜೊತೆಗೆ ರಸಾಯನ ಶಾಸ್ತ್ರಜ್ಞರಿಗೆ ಅತಿಸ್ಫೋಟಕ ಶಕ್ತಿಯುಳ್ಳ ಸಂಯುಕ್ತವೆಂದು ಕಂಡುಬಂದ ನೈಟ್ರೋಜನ್ ಟ್ರೈಕ್ಲೋರೈಡ (Nitrogen trichloride)ನ ಸಂಶೋಧನೆಯಲ್ಲಿ ತೊಡಗಿದ್ದರು. ಈ ಸಂಶೋಧನೆಯಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಅವರ ಜೀವನವು ಸದಾ ಅಪಘಾತಕ್ಕೆ ಗುರಿಯಾಗಿರುತ್ತಿತ್ತು. ಆದರೆ ನಿರಂತರವಾದ ಮುಂಜಾಗ್ರತೆ ಮತ್ತು ಕಾರ್ಯಕೌಶಲ್ಯದಿಂದ ಇಂಥ ಅತಿ ಅಸ್ಥಿರವಾದ ಸಂಯುಕ್ತ ವಸ್ತುವಿನ ಅನೇಕ ಸ್ಫೋಟಗಳಲ್ಲಿ ಯಾವ ತೆರದ ಅಘಘಾತವು ಸಂಭವಿಸಲಿಲ್ಲ.

ಅದೇ ವರ್ಷ ಸರ್ ಡೇವಿಯವರು ಫೆರಾಡೆಯವರನ್ನು ತಮ್ಮ ಜೊತೆಯಲ್ಲಿ ಕಾರ್ಯದರ್ಶಿಯನ್ನಾಗಿ ಮಾಡಿಕೊಂಡು ಪರದೇಶಕ್ಕೆ ಹೋಗುವುದಾಗಿಯೂ ಮರಳಿಬಂದ ಮೇಲೆ ಮತ್ತೆ ಸಂಸ್ಥೆಯ ಸಂಶೋಧನೆಯ ಕಾರ್ಯಭಾರವನ್ನು ವಹಿಸುವುದಾಗಿಯೂ ತಿಳಿಸಿದರು. ಡೇವಿಯವರ

ಜೊತೆಯಲ್ಲಿ ಫೆರಾಡೆಯುವರು ಹದಿನೆಂಟು ತಿಂಗಳುಗಳ ವರೆಗೆ ಇಡಿ ಭೂಖಂಡವನ್ನು ಸುತ್ತಿದರು ಮತ್ತು ಈ ಅವಧಿಯಲ್ಲಿ ತಮ್ಮ ಪ್ರವಾಸದ ದಿನಚರಿಯನ್ನು ಬರೆಯುತ್ತಿದ್ದರು. ಅದರಲ್ಲಿ ಪ್ರವಾಸದಲ್ಲಿ ತಮಗೆ ಹೊಳೆದ ಹೊಸ ವಿಚಾರಗಳನ್ನು ಮಂಡಿಸುತ್ತಿದ್ದರು.

ಪ್ರವಾಸದಲ್ಲಿ ಡೇವಿಯುವರ ಹೆಂಡತಿಯು ಈ ತರುಣ ವಿಜ್ಞಾನಿಯೊಂದಿಗೆ ಅವನನ್ನು ಒಬ್ಬ ಸೇವಕನಂತೆ ಭಾವಿಸಿ ವರ್ತಿಸಿದಳು. ಅದರಿಂದ ಒಮ್ಮೊಮ್ಮೆ ಅವರಿಗೆ ಉಳಿದ ನೌಕರರ ಜೊತೆಯಲ್ಲಿ ಕುಳಿತು ಊಟ ಮಾಡುವ ಪ್ರಸಂಗ ಬಂದುದುಂಟು. ಆದರೆ ಫೆರಾಡೆಯುವರು ಏನನ್ನೂ ದೂರು ಹೇಳದೆ ಇದೆಲ್ಲವನ್ನು ಸಹನಶೀಲತೆ ಮತ್ತು ಗಾಂಭೀರ್ಯದಿಂದ ಸಹಿಸಿಕೊಂಡು ಹೋದರು.

ಕ್ರಿ. ಶ. ೧೮೧೬ ರಲ್ಲಿ ಫೆರಾಡೆಯುವರು ಕಾಸ್ಟಿಕ್ ಲೈಮಿ ( Caustic lime ) ನ ಒಂದು ಮಾದರಿಯ ವಿಶ್ಲೇಷಣಮಾಡಿ ವಿಜ್ಞಾನ ಕ್ಷೇತ್ರದಲ್ಲಿ ತಮ್ಮ ಮೊದಲನೆಯ ಕಾಣಿಕೆಯನ್ನು ಸಲ್ಲಿಸಿದರು. ಅಲ್ಲದೆ 'ಸಿಟಿ ಫಿಲಸಾಫಿಕಲ್ ಸೊಸೈಟಿ' (City Philosophical Society)ಯಲ್ಲಿ 'ಪದಾರ್ಥದ ಗುಣಧರ್ಮಗಳು' (Properties of matter) ಎಂಬ ವಿಷಯದ ಮೇಲೆ ತಮ್ಮ ಮೊದಲನೆಯ ಭಾಷಣ ಮಾಡಿದರು. ಅನಂತರ ಕ್ರಿ. ಶ. ೧೮೨೦ ರ ವರೆಗೆ ತಮ್ಮ ಸಂಶೋಧನೆಗಳನ್ನು ಮುಂದುವರಿಸಿ ಅನೇಕ ಪ್ರಬಂಧಗಳನ್ನು 'ವಿಜ್ಞಾನದ ತ್ರೈಮಾಸಿಕ ಪತ್ರಿಕೆ' (Quarterly Journal of Science) ಎಂಬ ಪತ್ರಿಕೆಯಲ್ಲಿ ಪ್ರಕಟಿಸಿದರು. ಇದೇ ವೇಳೆಯಲ್ಲಿ ಅವರು ಮಿಸ್ Sarat Barnard ರೊಡನೆ ವಿವಾಹ ಮಾಡಿಕೊಂಡರು.

ಕ್ರಿ. ಶ. ೧೮೨೩ ರಲ್ಲಿ 'ಅನಿಲಗಳ ಸಾಂದ್ರೀಕರಣ' (Condensation of the gases) ಎಂಬ ವಿಷಯದ ಮೇಲೆ ಒಂದು ಪ್ರಬಂಧವನ್ನು ಪ್ರಕಟಿಸಿ, ಎಲ್ಲಕ್ಕೂ ಮೊದಲು ಕ್ಲೋರಿನ್ ಅನಿಲ (Chlorine gas) ವನ್ನು ದ್ರವರೂಪದಲ್ಲಿ ಮಾರ್ಪಡಿಸಿದರು. ಅನಂತರ ಅನೇಕ ಅನಿಲಗಳನ್ನು ದ್ರವರೂಪದಲ್ಲಿ ಮಾರ್ಪಡಿಸುವ ಪ್ರಯತ್ನಗಳಲ್ಲಿ ಸಫಲರಾದರು. ಕ್ಲೋರೀನಿನ ವಿಷಯವಾಗಿ ಅಭ್ಯಾಸಮಾಡಿ ಕಾರ್ಬನಿ (Carbon) ನ ಎರಡು ಹೊಸ ಕ್ಲೋರೈಡುಗಳನ್ನು ಕಂಡುಹಿಡಿದರು. ಜಾನ್ ಡಾಲ್ಟನ್ ಅವರಿಂದ ಸೂಚಿಸಲ್ಪಟ್ಟ 'ಅನಿಲಗಳ ವ್ಯಾಪ್ತಿ' (Diffusion of gases) ಯ ವಿಷಯವಾಗಿ ಪ್ರಯೋಗಗಳನ್ನು ನಡೆಸಿದರು. ಉಕ್ಕಿನ ಮಿಶ್ರಲೋಹ (Alloy) ಗಳ ವಿಷಯದಲ್ಲಿ ಸಂಶೋಧನೆಗಳನ್ನು ನಡೆಸಿ ಆಪ್ಟಿಕಲ್ ಗಾಜಿ (Optical glass) ನ ಬಗೆಬಗೆಯ ಹೊಸ ಪ್ರಕಾರಗಳನ್ನು ತಯಾರಿಸಿದರು.

ಇದೇ ಸಮಯದಲ್ಲಿ ಎಣ್ಣೆಯ ಅನಿಲಗಳ ಸಾಂದ್ರೀಕರಣದಿಂದ ಉಂಟಾಗುವ ವಸ್ತು (The Products of the condensed oil-gas) ಗಳ ವಿಷಯವಾಗಿ ಸಂಶೋಧನೆ ನಡೆಸಿ, ಬೆಂಜೀನ (Benzene) ನ್ನು ಕಂಡುಹಿಡಿದರು. ಈಗಲೂ ಇದೇ ಬೆಂಜೀನಿನಿಂದ ಪ್ರಾರಂಭಮಾಡಿಕೊಂಡು ಅನೇಕ ತರದ ಬಣ್ಣಗಳನ್ನು ತಯಾರಿಸಲಾಗುತ್ತಿದೆ.

ಕ್ರಿ. ಶ. ೧೮೨೯ ರಲ್ಲಿ ಫೆರಾಡೆಯುವರು ನೌಕಾಶಾಖೆಯ ಶಾಸ್ತ್ರೀಯ ಸಲಹೆ ಸಮಿತಿಯ ಸದಸ್ಯ (Member of the Scientific Advising Committee of the Admiralty) ರೆಂದು ನೇಮಿಸಲ್ಪಟ್ಟರು. ಮತ್ತು ಕೊನೆಯವರೆಗೂ ಆ ಸಮಿತಿಯ ಸದಸ್ಯರಾಗಿ ಕೆಲಸಮಾಡಿದರು.

ಅವರ ಜೀವನದ ಮಹತ್ವದ ಕಾರ್ಯವು ಕ್ರಿ. ಶ. ೧೮೩೧ ರಲ್ಲಿ ಪ್ರಾರಂಭವಾಯಿತು. ವಿದ್ಯುತ್ ಶಕ್ತಿಯ ವಿಷಯವಾಗಿ ಅನೇಕ ಸಂಶೋಧನೆಗಳನ್ನು ನಡೆಸಿದರು. ಅಯಸ್ಕಾಂತ (Magnet) ದ ಸುತ್ತುಮುತ್ತಲು ತಂತಿಯು ಬಹು ಬೇಗ ಚಲಿಸುತ್ತದೆಂದೂ ಅಯಸ್ಕಾಂತದಿಂದ ಪ್ರಕಾಶಿತವಾಗುತ್ತದೆಂದೂ ವಿದ್ಯುತ್‌ಪ್ರವಾಹವು ತಂತಿಯೊಳಗೆ ಪ್ರವೇಶಿಸುವ ಸಮಯದಲ್ಲಿ ಬಹಳ ಪ್ರಬಲವಾಗಿರುತ್ತದೆಂದೂ ಅಯಸ್ಕಾಂತ ಬಲದ ಕ್ಷೇತ್ರ (Field of Magnetic Force) ವನ್ನು ಬಿಟ್ಟುಕೊಡುತ್ತದೆಂದೂ ಮತ್ತು ಪ್ರವಾಹವು ತಂತಿಯ ಒಂದು ಕೊನೆಯಿಂದ ಮತ್ತು ಅಭಿಮುಖವಾದ ಕೊನೆಯಿಂದ ಯಾತಾಯಾತವಾಗಿ ಹರಿಯುತ್ತದೆಂದೂ ಫೆರಾಡೆಯುವರು ಕಂಡುಹಿಡಿದರು. ಈ ಪ್ರಯೋಗವನ್ನು ಅವರು ಮೊದಲು ಮಾಡಿ ತೋರಿಸಿದಾಗ ಒಬ್ಬ ಹೆಣ್ಣುಮಗಳು ಇದರಿಂದ ಏನು ಉಪಯೋಗ ಎಂದು ಕೇಳಿದಳಂತೆ. ಅದಕ್ಕೆ ಫೆರಾಡೆಯುವರು ಆ ಹೆಣ್ಣುಮಗಳಿಗೆ 'ಹೊಸದಾಗಿ ಈಗ ತಾನೆ ಜನ್ಮತಾಳಿದ ಕೂಸಿನಿಂದ ಏನು ಉಪಯೋಗ?' ಎಂದು ಉತ್ತರ ಕೊಟ್ಟರಂತೆ.

ಈ ರೀತಿಯಾಗಿ ಒಂದು ಸುರಳಿಯಲ್ಲಿ ಅಯಸ್ಕಾಂತವನ್ನು ಚಲಿಸಿದರೆ, ಅದರಲ್ಲಿ ವಿದ್ಯುತ್ ಪ್ರವಾಹ ಪ್ರೇರಿತವಾಗುವುದೆಂದು ಅವರು ತೋರಿಸಿಕೊಟ್ಟರು. ಈ ವಿಷಯವನ್ನು ಕಂಡುಹಿಡಿದ ನಂತರವೇ ವಿದ್ಯುಚ್ಛಕ್ತಿ ಪ್ರಪಂಚದ ಕೈಗಾರಿಕೆಗಳ ಮೇಲೆ ತನ್ನ ಪ್ರಭಾವ ಬೀರಲು ಸಾಧ್ಯವಾಯಿತು. ಈ ಶೋಧನೆಯಿಂದಲೆ ಪ್ರಪಂಚದಲ್ಲಿ ಎಲ್ಲೆಲ್ಲೂ ಬೇಕಾದ ವಿದ್ಯುಚ್ಛಕ್ತಿಯನ್ನು ಡೈನಮೊ ಎಂಬ ವಿದ್ಯುಜ್ಜನಕದಿಂದ ಹೇರಳವಾಗಿ ಒದಗಿಸಲು ಸಾಧ್ಯವಾಯಿತು.

ಕ್ರಿ. ಶ. ೧೮೩೬ರಲ್ಲಿ ಫೆರಾಡೆಯವರು 'ಟ್ರನಿಟಿ ಹೌಸಿನ ಸೈಂಟಫಿಕ್ ಎಡ್ವೈಜರ (Scientific Adviser to the Trinity House) ಎಂದು ನೇಮಿಸಲ್ಪಟ್ಟರು. ಅನೇಕ ವರ್ಷಗಳವರೆಗೆ ಈ ಸಂಸ್ಥೆಯಲ್ಲಿ ದುಡಿದು ಅವರು ನಾನಾವಿಧದಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿದರು. ವಿಜ್ಞಾನಕ್ಷೇತ್ರದಲ್ಲಿ ಅವರು ಸಲ್ಲಿಸಿದ ಸೇವೆಗಾಗಿ ಕೇಂಬ್ರಿಜಿನ ಫಿಲಸಾಫಿಕಲ್ ಸೊಸೈಯಿಟಿ ಅವರನ್ನು ಗೌರವಿಸಿತು. ಅಮೇರಿಕೆ ಮತ್ತು ಯುರೋಪಗಳಲ್ಲಿದ್ದ ಅನೇಕ ಸಂಸ್ಥೆಗಳು ಅವರಿಗೆ ಬಿರುದುಗಳನ್ನು ಕೊಟ್ಟು ಗೌರವಿಸಿದುವು.

ರಾಯಲ್ ಸಂಸ್ಥೆಯು ಅವರಿಗೆ 'ಫೆಲೋಶಿಪ್' ಕೊಟ್ಟು ಗೌರವಿಸಿತು. ಅಲ್ಲದೆ ವರ್ಷಕ್ಕೆ ೩೦೦ ಪೌಂಡುಗಳನ್ನು ವರ್ಷಾಶನರೂಪದಲ್ಲಿ ಅವರಿಗೆ ಕೊಡಲಾಯಿತು.

ಕ್ರಿ. ಶ. ೧೮೫೮ ರಲ್ಲಿ ಇಂಗ್ಲೆಂಡಿನ ರಾಣಿಯವರು ಅವರು ಮಾಡಿದ ಸಂಶೋಧನೆಗಳನ್ನು ಪ್ರಶಂಸಿಸಿ ಅವರಿಗೆ ವಾಸಮಾಡಲು ಹ್ಯಾಂಪ್‌ಟನ್ ಕೋರ್ಟ ಗ್ರೀನ (Hampton Court Green) ನಲ್ಲಿ ಒಂದು ಮನೆಯನ್ನು ಕೊಟ್ಟರು. ಇಲ್ಲಿಯೇ ಅವರು ತಮ್ಮ ಕೊನೆಯ ದಿನಗಳನ್ನು ಕಳೆದರು.

ವಯಸ್ಸು ಹೆಚ್ಚಾದ ಮೂಲಕ ಅವರ ಮನಸ್ಸಿನ ಸ್ವಾಸ್ಥ್ಯವು ಮೊದಲಿನಂತೆ ಉಳಿಯಲಿಲ್ಲ. ಅದು ಕ್ರಮೇಣ ಕ್ಷೀಣವಾಗುತ್ತ ನಡೆಯಿತು. ದಿನವೂ ಹೆಚ್ಚಾಗುತ್ತಿದ್ದ ದೇಹದ ಅಶಕ್ತತೆಯ ಕಾರಣದಿಂದ ಅವರು ತಮ್ಮ ವಿವಿಧ ಕಾರ್ಯಕಲಾಪಗಳನ್ನು ಒಂದೊಂದಾಗಿ ಬಿಟ್ಟುಕೊಡತೊಡಗಿದರು. ಹ್ಯಾಂಪ್‌ಟನ್ ಕೋರ್ಟನಿಂದ ಅವರು ಕ್ವಚಿತ್ತಾಗಿ ಹೊರಬೀಳುತ್ತಿದ್ದರು. ಅವರ ಗೆಳೆಯರೊಬ್ಬರು ಒಮ್ಮೆ ಅವರ ಯೋಗಕ್ಷೇಮದ ಬಗ್ಗೆ ವಿಚಾರಿಸಿದಾಗ ಅವರು 'ಕೊನೆಯ ಯಾತ್ರೆಗಾಗಿ ಕಾದಿದ್ದೇನೆ' ಎಂದು ಉತ್ತರವನ್ನು ಕೊಟ್ಟುದುಂಟು.

ಕ್ರಿ. ಶ. ೧೮೬೭ನೆಯ ಅಗಸ್ಟ್ ೨೫ ರಂದು ಅವರು ಸುಖಾಸೀನರಾಗಿ ಅಧ್ಯಯನದಲ್ಲಿ ಇದ್ದಾಗ ಮರಣಕ್ಕೆ ಮುಂಚಿನ ಯಾವ ವಿಕಾರವೂ ಇಲ್ಲದೆ ಶಾಂತ ರೀತಿಯಿಂದ ಪರಲೋಕಕ್ಕೆ ತೆರಳಿದರು. ಅವರ ಅಂತಿಮ ಸಂಸ್ಕಾರವು ಕ್ಲಿಪ್ತ ರೀತಿಯಲ್ಲಿ ನಡೆಯಿತು. ಅವರ ಇಚ್ಛೆಯ ಮೇರೆಗೆ ಅವರಿಗಾಗಿ "Highgate Cemetry ಸ್ಮಶಾನ" ದಲ್ಲಿ ಸಾದಾ ಕಲ್ಲಿನ ಒಂದು ಸಣ್ಣ ಗೋರಿಯನ್ನು ಕಟ್ಟಲಾಯಿತು. ಹೀಗೆ ಈ ಸಣ್ಣ ಗೋರಿಯು ಜಗತ್ತಿನ ಪ್ರಖ್ಯಾತ ಮತ್ತು ಪ್ರಯೋಗನಿಷ್ಠ ತತ್ತ್ವಜ್ಞಾನಿಗಳಾದ ಅವರಿಗೆ ವಿಶ್ರಾಮಧಾಮವಾಗಿ ಪರಿಣಮಿಸಿತು.

ಸರ್ ಹಂಪ್ರಿ ಡೇವಿಯವರು ಫೆರಾಡೆಯವರಲ್ಲಿ ವಿಜ್ಞಾನದ ವಿಷಯವಾಗಿ ಅಭಿರುಚಿಯನ್ನು ಹುಟ್ಟಿಸಿ ಪ್ರೋತ್ಸಾಹಿಸಿದ್ದರಿಂದಲೆ ಫೆರಾಡೆಯವರು ವಿಜ್ಞಾನಕ್ಷೇತ್ರದಲ್ಲಿ ಅದ್ಭುತ ಸಂಶೋಧನೆಗಳನ್ನು ನಡೆಸಿ ಪ್ರಖ್ಯಾತ ವಿಜ್ಞಾನಿಯೆಂದು ಹೆಸರು ಪಡೆದರು. ಆದುದರಿಂದ ಸರ್ ಡೇವಿಯವರ ಮುಖ್ಯ ಸಂಶೋಧನೆಗಳಲ್ಲಿ ಫೆರಾಡೆಯವರಂಥ ಮೇಧಾವಿಗಳನ್ನು ಕಂಡುಹಿಡಿದುದು ಅತಿ ಮುಖ್ಯ ಸಂಶೋಧನೆಗಳಲ್ಲಿ ಒಂದಾಗಿದೆ ಎಂದು ಹೇಳಿದರೆ ಏನೂ ಅತಿಶಯೋಕ್ತಿಯಾಗಲಾರದು.

ಕರ್ನಾಟಕದ

# ಔದ್ಯೋಗಿಕ ಅಭಿವೃದ್ಧಿ

**ಕರ್ನಾಟಕದ ಆರ್ಥಿಕ ಉದ್ಧಾರ ಹಿಂದುಳಿಯಲು ಅಲ್ಲಿನ ಜನರಲ್ಲಿ ಸಾಹಸಪ್ರವೃತ್ತಿಯ ಕೊರತೆ ಮಾತ್ರ ಕಾರಣವಲ್ಲ. ಇಲ್ಲಿ ಉದ್ಯೋಗಗಳ ಬೆಳವಣಿಗೆಗೆ ಹಲವಾರು ತೊಡಕುಗಳಿರುವುದೂ ಕಾಣಿಸುತ್ತದೆ.**

ಲೇಖಕರು: ಶ್ರೀ ಮಾಧವ ಕೌಜಲಗಿ, ಬಿ. ಕಾಮ್.

ಕರ್ನಾಟಕದ ಔದ್ಯೋಗಿಕ ಸುಧಾರಣೆಯ ಬಗ್ಗೆ ಮಾತಾಡುವದು ಇನ್ನೂ ಆಲಮಟ್ಟಿ ಜಂಗಮರ ಮಾತಾಗಿದೆ. ಇಲ್ಲಿ ಕರ್ನಾಟಕವೆಂದರೆ ಮುಂಬೈ ಕರ್ನಾಟಕ ಮಾತ್ರವೆಂದು ತಿಳಿಯಬೇಕು. ಈ ಭಾಗದಲ್ಲಿ ಈ ವರೆಗೂ ಹೇಳಿಕೊಳ್ಳುವಂತಹ ಯಾವ ದೊಡ್ಡ ಕಾರಖಾನೆಯೂ ಇಲ್ಲ. ಪರ ಪ್ರಾಂತದಿಂದ ಇಲ್ಲಿ ಬಂದವರು 'ನಿಮ್ಮಲ್ಲಿ ಏನು ನೋಡಬೇಕು?' ಎಂದು ಕೇಳಿದರೆ 'ವಿಜಾಪುರದ ಗೋಳಗುಮಟ ನೋಡಿರಿ' ಎಂದು 'ಹುಬ್ಬಳ್ಳಿಯ ಸಿದ್ಧಾರೂಢ ಮಠ ನೋಡಿರಿ' ಎಂದು 'ನಿಮ್ಮಲ್ಲಿ ಏನು ಕೊಂಡುಕೊಳ್ಳಬೇಕು?' ಎಂದು ಕೇಳಿದರೆ 'ಧಾರವಾಡದ ಅವಲಕ್ಕಿ, ಸಿರಸಿಯ ಹಾಲಡಕಿ ತಕ್ಕೊಳ್ಳಿರಿ' ಎಂದು ಹೇಳುವದಿಷ್ಟೇ ನಮ್ಮ ಪಾಲಿಗಿದೆ. ಕರ್ನಾಟಕದ ಜನರಿಗೆ ಒಕ್ಕಲತನ ಹಾಗೂ ನೌಕರಿ ಇವೆರಡೇ ಮುಖ್ಯ ಜೀವನಾಧಾರಗಳು. ಜನರು ಸ್ವಭಾವತಃ ಸ್ವಲ್ಪ ಅಲ್ಪಸಂತೋಷಿಗಳು. ಜಾಣತನವು ಸಾಕಷ್ಟಿದ್ದರೂ ಜಿಗಟುತನ ಕಡಿಮೆ. ಆದಷ್ಟು ನಿರಾಯಾಸವಾಗಿ ಜೀವನ ಸಾಗಿಸಬೇಕೆಂಬ ಮನೋವೃತ್ತಿಯುಳ್ಳವರು. ಇಲ್ಲಿಯ ಜನರ ಯೋಗ್ಯತೆಯು ಪರಪ್ರಾಂತದಲ್ಲಿಯೇ ಮನ್ನಣೆ ಪಡೆಯಬೇಕು. ಇಲ್ಲಿಯ ಭೂಮಿಯಲ್ಲಿ ಅದು ನಾಟಬಾರದೆಂಬ ಶಾಪವಿದ್ದಂತೆ ತೋರುತ್ತದೆ. ಈ ಭಾಗದಲ್ಲಿ ಔದ್ಯೋಗಿಕ ಬೆಳವಣಿಗೆಗೆ ಸಾಕಷ್ಟು ಪ್ರಕೃತಿಯ ಅನುಕೂಲತೆ ಇದ್ದರೂ ಅದಕ್ಕೆ ತಕ್ಕ ಸಂಘಟನಾ ಶಕ್ತಿ (Entrepreneurship) ಇಲ್ಲದ್ದರಿಂದ ಹಾಗೂ ಗುಜರಾತಿ, ಮರಾಠಿ ಹಾಗೂ ಕನ್ನಡ ಪ್ರದೇಶಗಳಿಂದ ಕೂಡಿದ ಮುಂಬಯಿ ಪ್ರಾಂತದ ಒಂದು ಚಿಕ್ಕ ಮೂಲೆಯಲ್ಲಿ ಈ ಜಿಲ್ಲೆಗಳು ಇದ್ದುಕೊಂಡಿರುವದರಿಂದ ಸಹಜವಾಗಿ ಇದು ದೇಶದ ದೊಡ್ಡ ಯೋಜನೆಗಳ ನಕಾಶೆಯಲ್ಲಿ ಕಾಣುವದಿಲ್ಲ.

ಆದರೆ ಕರ್ನಾಟಕದ ಔದ್ಯೋಗಿಕ ಬೆಳವಣಿಗೆಗೆ ಅದರ ಜನರ ಸ್ವಭಾವದೋಷದ ಹೊರ್ತಾಗಿ ಇತರ ಕಾರಣಗಳಾವವು, ಅದನ್ನು ಸರಕಾರವು ಲಕ್ಷಹಾಕಿದರೆ ಎಷ್ಟರ ಮಟ್ಟಿಗೆ ಸುಧಾರಿಸಬಲ್ಲದು ಎಂಬುದನ್ನು ವಿವೇಚಿಸುವದೇ ಈ ಲೇಖನದ ಮುಖ್ಯ ಉದ್ದೇಶ.

## ಹಣದ ಕೊರತೆ ಹಾಗು ಕರಭಾರ

ಕರ್ನಾಟಕದಲ್ಲಿ ಮೇಲಿಂದ ಮೇಲೆ ಬರಗಾಲ ಬಿದ್ದು, ಜನಸಂಖ್ಯೆ ಹೆಚ್ಚಾದಂತೆ, ತುಂಡು ಹೊಲಗಳು ಹೆಚ್ಚಾಗಿ ಒಕ್ಕಲತನವು ದಿನದಿನಕ್ಕೆ ಕುಗ್ಗುತ್ತ ನಡೆದಿದೆ. ಧಾರಣೆಗಳು ಸದ್ಯಕ್ಕೆ ಹೆಚ್ಚಾಗಿರುವದರಿಂದ ಅದು ಅಷ್ಟು ಕಂಡುಬಂದಿರುವದಿಲ್ಲ. ಅದರಂತೆ ಒಕ್ಕಲತನದಿಂದ ಹೊರಚೆಲ್ಲಿದವರೆಲ್ಲರೂ ನೌಕರಿ ಬೇಕೆಂದರೆ ಸಿಗುವದು ಹೇಗೆ ಸಾಧ್ಯ? ಹೀಗೆ ಉತ್ಪಾದನ ಪ್ರಮಾಣವು ಜನಸಂಖ್ಯೆಯ ಪ್ರಮಾಣದಿಂದ ಕುಗ್ಗುತ್ತ ನಡೆದು ಕರ್ನಾಟಕದ ಸಂಪತ್ತಿನ ಸ್ಥಿತಿಯು ಉಳಿದ ಪ್ರಾಂತಗಳಂತೆ ಸುಧಾರಿಸದೇ ಉಳಿಯಿತು. ಇಂಥ ಬಡ ಪ್ರಾಂತದಲ್ಲಿ ಅಪ್ಪಿತಪ್ಪಿ ಯಾವದೇ ಉದ್ಯೋಗಗಳು ಜನ್ಮತಾಳಿದರೆ ಅವಕ್ಕೆ ಜನರಿಂದ ಬಂಡವಲು ಸಾಕಷ್ಟು ದೊರೆಯುವದಿಲ್ಲ. ಬಂಡವಲು ಸಾಕಷ್ಟು ದೊರೆ-ಯುದಿದ್ದುದಕ್ಕೆ ಅನಿವಾರ್ಯವಾಗಿ ಕಾರಖಾನೆಗಳು ಮುದ್ದತಿ ಠೇವು ಕರೆಯಬೇಕಾಗುವದು. ಆದರೆ ಇಂಥ ಹಣವನ್ನೂ ಪ್ರಸಂಗಾಧೀನವಾಗಿ ಯಂತ್ರೋಪಕರಣ, ಕಟ್ಟಡ ಮುಂತಾದ ಕಾಯಂ ತರವ ಆಸ್ತಿಯಲ್ಲಿ ತೊಡಗಿಸಿ ಕೊನೆಗೆ ಕಾರಖಾನೆಯ ಅಸ್ತಿತ್ವಕ್ಕೆ ಗಂಡಾಂತರವನ್ನು ತಂದುಕೊಂಡ ಉದಾಹರಣೆಗಳು ಎಷ್ಟೋ ಇವೆ. ಅದಕ್ಕಾಗಿ ಕಾರಖಾನೆಯ ಬಂಡವಲಕ್ಕೂ ಠೇವಿಗೂ ಒಂದು ನಿರ್ದಿಷ್ಟ ಪ್ರಮಾಣವನ್ನು ಗೊತ್ತುಪಡಿಸುವದು ಅವಶ್ಯವೇನೋ ನಿಜ. ಆದರೆ ಅದರ ಬೆಳೆವಣಿಗೆಗೆ ಸಾಕಷ್ಟು ಹಣವನ್ನು ಕೂಡಿಸಿಕೊಳ್ಳಲು ಅಸ್ಪದ ಮಾಡಿಕೊಡುವದೂ ಅಷ್ಟೇ ಅವಶ್ಯವು. ಸರಕಾರದ ಕರಹೇರುವ ಧೋರಣೆಯು ಇದಕ್ಕೆ ಅಷ್ಟು ಅನುಕೂಲವಿರುವದಿಲ್ಲ. ಕಾರಖಾನೆಯ ಲಾಭದೊಳಗಿಂದ ಸವಕಳಿಯ ಬಗ್ಗೆ ತೆಗೆದಿಡುವ ಅಂಶವನ್ನಷ್ಟೇ ಕರಭಾರದಿಂದ ಮುಕ್ತ ಮಾಡಲಾಗಿದೆ. ಆದರೆ ಅದರಲ್ಲಿ ಕಾರಖಾನೆಯ ಕಟ್ಟಡ ವಿಸ್ತರಣೆಗೆ ಅಥವಾ ಯಂತ್ರೋಪಕರಣಗಳ ಸುಧಾರಣೆಗೆ ಹಣವನ್ನು ತೆಗೆದಿಡಲು ಉತ್ತೇಜನವಿಲ್ಲ. ಅದರಂತೆ ಸರಕಾರದ ಇನ್ನಿತರ ಕೆಲವು ಕರಗಳಿಂದ ಉದ್ಯೋಗಗಳ ಮೇಲೆ ಆಗುವ ಪರಿಣಾಮವನ್ನು ನಾವು ನೋಡಬಹುದು. ಉದಾಹರಣಾರ್ಥವಾಗಿ ಮುಂಬಯಿ ರಾಜ್ಯದಲ್ಲಿ ಈಗ ಜಾರಿಯಲ್ಲಿರುವ ಬಹುಮುಖ ಮಾರಾಟಕರ ಕಾಯಿದೆಯನ್ನು ತಕ್ಕೊಳ್ಳಬಹುದು. ಅದರಲ್ಲಿ ಕಾರಖಾನೆಗಳ ಬೆಳವಣಿಗೆಗೆ ಮುಖ್ಯವಾಗಿ ಬೇಕಾಗುವ ಕಚ್ಚಾ ಮಾಲು ಹಾಗೂ ಶಕ್ತಿಯ ಉತ್ಪಾದನ ಮಾಡುವ ವಸ್ತುಗಳಿಗೆ ಪೂರ್ಣ ಮುಕ್ತತೆ ಇಲ್ಲ. ಇದರಿಂದ ಮಾಲಿನ ತಯಾರಿಕೆಯ ವೆಚ್ಚವು ಮತ್ತಷ್ಟು ಬೆಳೆದು ಅದರ ವ್ಯಾಪಾರವು ಕಡಿಮೆಯಾಗುವದು. ಇದರ ಮೇಲಾಗಿ ಕಾರಖಾನೆಯು ಇಂಥ ವಸ್ತುಗಳ ಮೇಲೆ ಅಲ್ಲಲ್ಲಿಯ ಸ್ಥಾನಿಕ ಮುನಸಿಪಾಲಿಟಿಯವರು ಅಥವಾ ಗ್ರಾಮಪಂಚಾತಿಯವರು ಹಾಕುವ ಜಕಾತಿ ಹಾಗೂ ಇತರ ಪಟ್ಟಿಯನ್ನೂ ತೆರಬೇಕಾ-ಗುವದು. ಈ ಸಂಸ್ಥೆಗಳು ಸ್ಥಾನಿಕ ಉದ್ಯೋಗಗಳ ಬೆಳವಣಿಗೆಗೆ ಸಾಕಷ್ಟು ಲಕ್ಷ ಕೊಡುತ್ತಿರುವದಿಲ್ಲ. ಒಂದು ಊರಲ್ಲಿ ಇದ್ದ ಜಕಾತಿಯ ದರವು ಇನ್ನೊಂದು ಊರಲ್ಲಿರುವದಿಲ್ಲ.

ಅದಕ್ಕಾಗಿ ಸರಕಾರವಾಗಲಿ ಸ್ಥಾನಿಕ ಸಂಸ್ಥೆಗಳಾಗಲೀ ಕರ ಹಾಗೂ ಜಕಾತಿ ದರಗಳಲ್ಲಿ ಆಯಾ ಪ್ರಾದೇಶಿಕ ಉದ್ಯೋಗ ದಂಧೆಗಳ ಬೆಳವಣಿಗೆಯ ದೃಷ್ಟಿಯಿಂದ ರಿಯಾಯತಿಯನ್ನು ಕೊಡದಿದ್ದರೆ ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿ ಕಾರಖಾನೆಗಳಿಗೆ ಉತ್ಪಾದನೆಯ ವೆಚ್ಚವು ವಿಪರೀತ ಬೆಳೆದು ಕೊನೆಗೆ ತಮ್ಮ ಬಂಡವಲವನ್ನೆ ಮುರಿದು ತಿನ್ನುವ ಪ್ರಸಂಗವು ಬರುವದು. ಇನ್ನು ಅವುಗಳ ಬೆಳವಣಿಗೆಯ ಮಾತಂತೂ ದೂರವೇ ಉಳಿಯಿತು.

## ಸಾರಿಗೆ ಸೌಕರ್ಯ

ಇಡೀ ಮುಂಬಯಿ ಕರ್ನಾಟಕವೆಲ್ಲ ಮೀಟರ ಗೇಜ ರೇಲ್ವೆಯ ಅಂಕಿತದಲ್ಲಿರುವದನ್ನು ನಾವು ಮರೆಯಬಾರದು. ಬ್ರಾಡಗೇಜಿನಲ್ಲಿ ದೊರೆಯುವಷ್ಟು ಸಾರಿಗೆ ಸೌಕರ್ಯವು ಮೀಟರಗೇಜಿನಲ್ಲಿ ದೊರೆಯುವದಿಲ್ಲವೆಂಬುದು ಎಲ್ಲರಿಗೂ ಗೊತ್ತು. ಅಲ್ಲದೆ ನಮ್ಮ ಕಾರಖಾನೆಗಳಿಗೆ ಬ್ರಾಡಗೇಜಿನ ಸಂಬಂಧ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ಬ್ರಾಡಗೇಜಿನಿಂದ ಮೀಟರಗೇಜಿಗೆ ಹಾಗೂ ಮೀಟರಗೇಜಿನಿಂದ ಬ್ರಾಡಗೇಜಿಗೆ ಸರಕುಗಳನ್ನು ವರ್ಗಾಯಿಸುವಾಗ ಈಗ ನಡೆಯುತ್ತಿರುವ ವೇಳೆ ಹಾಗೂ ಹಣದ ಅಪವ್ಯಯದಿಂದ ಇಲ್ಲಿಯ ಕಾರಖಾನೆಗಳಿಗೆ, ಉದ್ದಿಮೆಗಳಿಗೆ ಆಗುವ ಕಷ್ಟನಷ್ಟಗಳು ಅವುಗಳ ಬೆಳವಣಿಗೆಯಲ್ಲಿ ಆಸ್ಥೆಯಿದ್ದವರು ಅವಶ್ಯವಾಗಿ ವಿಚಾರ ಮಾಡತಕ್ಕ ವಿಷಯವಾಗಿವೆ. ಈ ಸಾರಿಗೆ ಸೌಕರ್ಯದ ಅಭಾವದ ಮೂಲಕ ಕೆಲಕೆಲವು ಉದ್ದಿಮೆಗಳಿಗೆ ೬-೮ ತಿಂಗಳ ಕಚ್ಚಾ ಮಾಲಿನ ಸಂಗ್ರಹವನ್ನು ಕಾಯ್ದಿಟ್ಟುಕೊಳ್ಳಬೇಕಾಗುವದು. ಅದರಿಂದ ವ್ಯರ್ಥವಾಗಿ

ಅಷ್ಟು ಹಣವು ಕೀಲಿಯಲ್ಲಿ ಬಿದ್ದಿರಬೇಕಾಗುತ್ತದೆ. ಅದರ ಮೇಲೆ ಬಡ್ಡಿಯನ್ನು ಬೇರೆ ಕಳೆದುಕೊಳ್ಳಬೇಕು.

ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಹೆಗಳಲ್ಲಿ ಒಂದು ಇಡೀ ಜಿಲ್ಹೆಯೇ ಇನ್ನೂ ರೇಲ್ವೆ ಸಂಪರ್ಕವಿಲ್ಲದೆ, ಕೇವಲ ಮೋಟಾರ ಸಾರಿಗೆಯನ್ನು ಅವಲಂಬಿಸಿದೆ. ಈ ಜಿಲ್ಹೆಯಲ್ಲಿ ಹೇರಳವಾದ ಅರಣ್ಯ ಹಾಗೂ ವಿದ್ಯುಚ್ಛಕ್ತಿಯ ಸಂಪತ್ತು ಇದ್ದರೂ ಅದು ಇಂದಿನ ಮಿತಿಗೂ ನಿರುಪಯುಕವಾಗಿದೆ. ಕರ್ನಾಟಕದ ಒಕ್ಕಲತನ ಹಾಗೂ ಔದ್ಯೋಗಿಕ ಬೆಳವಣಿಗೆಯ ದೃಷ್ಟಿಯಿಂದ ಶಾಸ್ತ್ರೋಕ್ತವಾಗಿ ತಯಾರಿಸಿದ ರೇಲ್ವೆ ಸಾರಿಗೆ ಯೋಜನೆಗಳು ಕಳೆದ ೫೦ ವರ್ಷಗಳಿಂದ ಇನ್ನೂ ಕೊಳೆಯುತ್ತ ಬಿದ್ದಿವೆ. ಅವನ್ನು ಮೂರ್ತಸ್ವರೂಪದಲ್ಲಿ ನೋಡಬೇಕಾದರೆ ಇನ್ನೂ ಎಷ್ಟು ತಲೆಮಾರುಗಳು ಬೇಕಾಗುವವೋ ಏನೊ!

### ಶಕ್ತಿ (power) ಸಮಸ್ಯೆ

ಯಾವ ಭಾಗದಲ್ಲಿ ಸುಲಭವಾಗಿ ಹಾಗೂ ಕಡಿಮೆ ದರದಲ್ಲಿ, ಉದ್ದಿಮೆಗಳಿಗೆ ಕಲ್ಲಿದ್ದಲಿ, ಉರವಲು ಎಣ್ಣೆ ಅಥವಾ ವಿದ್ಯುತ್ ಶಕ್ತಿಯು ದೊರೆಯಬಲ್ಲದೊ ಅದರ ಬೆಳವಣಿಗೆಯು ಭರದಿಂದ ನಡೆಯಬಲ್ಲದು. ನಮಗೆ ಕಲ್ಲಿದ್ದಲ್ಲಿ ಕಣಿಗಳು ಸಮೀಪದಲ್ಲಿ ಇರದ್ದರಿಂದ ಅದನ್ನು ರೇಲ್ವೆ ಮಾರ್ಗದಿಂದ ಸಂಪಾದಿಸುವದು ಬಹಳ ತುಟ್ಟಿಯಾಗುವದು. ಉರುವಲು ಎಣ್ಣೆಯನ್ನು ಬಳಸುವದು ಅದಕ್ಕೂ ತುಟ್ಟಿಯಾಗುವದು. ಅದ್ದರಿಂದ ನಮಗೆ ಅನುಕೂಲವಾಗಿದ್ದುದು ಯಾವದೆಂದರೆ ವಿದ್ಯುತ್‌ಶಕ್ತಿಯೊಂದೇ ಎಂದು ಹೇಳಬಹುದು. ಆದರೆ ಈ ವರೆಗೆ ನಮ್ಮ ಉದ್ದಿಮೆಗಳಿಗೆ ವಿದ್ಯುತ್ ಶಕ್ತಿಯನ್ನುಪಯೋಗಿಸುವದು ಸಹ ಉಳಿದುದಕ್ಕಿಂತಲೂ ಹೆಚ್ಚು ವೆಚ್ಚದ ಮಾತಾಗಿತ್ತು. ಇದೀಗ ಜೋಗ ವಿದ್ಯುತ್‌ಶಕ್ತಿ ಯೋಜನೆಯು ಸಂಪೂರ್ಣವಾಗುತ್ತ ಬಂದಿದ್ದು, ಅದು ಹಾಯ್ದಿರುವ ಭಾಗದಲ್ಲಿ ಅಂದರೆ ವಿಶೇಷವಾಗಿ ಧಾರವಾಡ ಹಾಗೂ ಕಾರವಾರದ ಕೆಲವು ತಾಲೂಕಗಳಲ್ಲಿಯ ಉದ್ದಿಮೆಗಳಿಗೆ ಉದಾರ ಧನ ಸಹಾಯವಾದಷ್ಟು ಸಂತೋಷವಾಗಿದೆ. ಅಲ್ಲದೆ ವಿವಿಧ ಪ್ರಕೃತಿ ಸಂಪತ್ತಿನ ಸಹಾಯದಿಂದ ಇನ್ನೂ ಅನೇಕ ಸಣ್ಣ ದೊಡ್ಡ ಉದ್ದಿಮೆಗಳನ್ನು ತೆಗೆಯಲು ಈ ಸೌಕರ್ಯವು ಉತ್ತೇಜನವೀಯುವದರಲ್ಲಿ ಸಂಶಯವಿಲ್ಲ. ಸರಕಾರದವರಾದರೂ ಕೂಡ ಉದ್ದಿಮೆಗಳಿಗೆ ಪೂರೈಸುವ ವಿದ್ಯುತ್ ಶಕ್ತಿಗೆ ಬಹಳ ರಿಯಾಯತಿ ದರವನ್ನಿಟ್ಟು ಮಹದುಪಕಾರ ಮಾಡಿದ್ದಾರೆಂದು ಹೇಳಬಹುದು.

### ಬಂಡವಲು ಹಾಗೂ ಕೆಲಸಗಾರರ ಸಹಕಾರ

ಯಾವದೇ ಕಾರಖಾನೆ ಅಥವಾ ಉದ್ದಿಮೆಗೆ ಎಷ್ಟೇ ಬಡತನವಿರಲಿ ಎಷ್ಟೇ ಅಡಚಣಿಗಳಿರಲಿ, ಅಥವಾ ಇನ್ನೂ ಅನೇಕ ಅಡಚಣಿಗಳು ಬರಲಿ ಅದರ ಬಂಡವಲದಾರರಿಗೂ ಕೆಲಸಗಾರರಿಗೂ ಒಮ್ಮನಸ್ಸಿದ್ದರೆ, ಸಹಕಾರವಿದ್ದರೆ ಅದು ಅವೆಲ್ಲವುಗಳನ್ನು ಚನ್ನಾಗಿ ಎದುರಿಸಬಲ್ಲದು. ಪರಸ್ಪರರಲ್ಲಿ ವಿಶ್ವಾಸವನ್ನು ಸಂಪಾದಿಸುವದು ಇತರ ಯಾವ ಸಲಕರಣೆಯನ್ನು ಸಂಪಾದಿಸುವದಕ್ಕಿಂತಲೂ ಮಹತ್ವವಾದದ್ದು. ಆದರೆ ಯಾವ ಪ್ರಕಾರ ಗಂಡ ಹೆಂಡಂದಿರ ಜಗಳವನ್ನು ಗಂಡ ಹೆಂಡಂದಿರೇ ಚನ್ನಾಗಿ ಬಿಡಿಸಿಕೊಳ್ಳಬಲ್ಲರೊ ಅದೇ ಪ್ರಕಾರ ಬಂಡವಲುಗಾರರು ಮತ್ತು ಕೂಲಿಕಾರರು ತಮ್ಮ ಜಗಳವನ್ನು ತಾವೇ ಚನ್ನಾಗಿ ಬಿಡಿಸಿಕೊಳ್ಳಬಲ್ಲರು. ಅವರು ಒಬ್ಬರಿಗೊಬ್ಬರು ಅನಿವಾರ್ಯರು ಎಂಬುದನ್ನು ಮಾತ್ರ ಸರಕಾರವಾಗಲಿ, ಅವರ ಸಂಘ ಸಂಸ್ಥೆಗಳಾಗಲಿ ತಿಳಿಯುವಂತೆ ಪ್ರಾಮಾಣಿಕವಾಗಿ ನಿಷ್ಪಕ್ಷಪಾತವಾಗಿ ತಿಳಿಸಿಕೊಡಬೇಕು. ಕಾಯಿದೆ ಕಾನೂನಿನಿಂದ ಇತ್ತ ಕಡೆಗೆ ಕೆಲಸಗಾರರ ಹಿತರಕ್ಷಣೆಯೂ ಆಗಬೇಕು ಅತ್ತಕಡೆಗೆ ಅವರು ದುಡಿಯುತ್ತಿರುವ ಉದ್ಯೋಗದ ಮೇಲೂ ಮಿತಿಮೀರಿ ಭಾರ ಬಿದ್ದಿರಬಾರದು ಹೀಗೆ ಸಮತೋಲ ದೃಷ್ಟಿಯಿಂದ ಸರಕಾರವು ಕಾನೂನುಗಳನ್ನು ಜಾರಿಯಲ್ಲಿ ತರಬೇಕು. ಸದ್ಯಕ್ಕೆ ಆರ್ಥಿಕ ಮುಗ್ಗಟ್ಟು ತಲೆ ಎತ್ತಿದ್ದರಿಂದ, ಸರಕಾರವು ಈ ವಿಷಯದ ಬಗ್ಗೆ ಯಾವದೇ ಕಾನೂನನ್ನು ಮಾಡುವಾಗ್ಗೆ ಅದರಿಂದ ಆ ಉದ್ದಿಮೆಗೆ ಪೆಟ್ಟು ತಗಲದಂತೆ ನೋಡಿಕೊಳ್ಳುವದು ಅತ್ಯವಶ್ಯವು. ಸರಕಾರವು ಈಗ ಅನುಸರಿಸುತ್ತಿರುವ ಕೂಲಿಕಾರ ಧೋರಣೆಯು (Labour

policy ) ಬಹಳ ಅವಸರ ಹಾಗೂ ಗೊಂದಲಕಾರಿ ಪರಿಣಾಮವುಳ್ಳದ್ದೆಂದು ಅನೇಕ ತಜ್ಞರ ಪ್ರಾಮಾಣಿಕ ಅಭಿಪ್ರಾಯವಿರುವದರಿಂದ ಈ ಪ್ರಶ್ನೆಯನ್ನು ಚನ್ನಾಗಿ ವಿಚಾರ ಮಾಡಬೇಕಾಗಿರುವದು.

### ತಾಂತ್ರಿಕ ಶಿಕ್ಷಣ

ಇಂದು ನಮ್ಮ ದೇಶದಲ್ಲಿ ಹೇರಳವಾದ ಔದ್ಯೋಗಿಕ ಸಂಪತ್ತು ಅಡಗಿದ್ದರೂ ಅದನ್ನು ಶೋಧಿಸಿ ತೆಗೆದು ಅದರ ಲಾಭವನ್ನು ಜನರಿಗೂ ದೇಶಕ್ಕೂ ಮಾಡಿಕೊಡುವದು ತಜ್ಞರಿಂದಲೇ ಸಾಧ್ಯ. ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಸರಕಾರದವರು ಇಂಥ ತಜ್ಞರನ್ನು ತಯಾರಿಸುವದಕ್ಕಾಗಿ ಭಗೀರಥ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಇಲ್ಲಿಂದ ವಿದ್ಯಾರ್ಥಿಗಳನ್ನು ಪರದೇಶಕ್ಕೆ ಕಳಿಸಿ ತರಬೇತಿಗೊಳಿಸುವದಕ್ಕಿಂತ, ಅಲ್ಲಿಯ ತಜ್ಞರನ್ನು ಇಲ್ಲಿ ತಂದು ಆಯಾ ಪ್ರದೇಶಗಳಲ್ಲಿ ಅನುಕೂಲವಾದ ಉದ್ದಿಮೆಗಳನ್ನೂ ಅವರಿಂದ ಹೊರಡಿಸಿ ಅವರ ಕೈಕೆಳಗೆ ಆಯಾ ಭಾಗದ ವಿದ್ಯಾರ್ಥಿಗಳನ್ನೂ ತರಬೇತಿಗೆ ಕೊಡುವದು ಹೆಚ್ಚು ಉಪಯುಕ್ತವಾಗಬಹುದು. ಉದಾಹರಣೆಗಾಗಿ ಕಾರವಾರ ಜಿಲ್ಲೆಯಲ್ಲಿ ಕಾಗದ ಕಾರಖಾನೆಗೆ ಸೌಕರ್ಯವಿದ್ದರೆ ಪರದೇಶದ ಕಾಗದ ತಯಾರಕರನ್ನು ಇಲ್ಲಿ ತಂದು ಅವರಿಗೆ ಬಂಡವಲು ಕೊಟ್ಟು ಕಾರಖಾನೆಯನ್ನು ಸ್ಥಾಪಿಸಿ ಹಿಂದುಸ್ತಾನದ ವಿದ್ಯಾರ್ಥಿಗಳಿಗೆ ಕಾಗದ ತಯಾರಿಕೆಯಲ್ಲಿ ತರಬೇತಿ ಕೊಡುವದು ಹೆಚ್ಚು ಉಪಯುಕ್ತವಾಗಬಹುದೆಂದೆನಿಸುತ್ತದೆ. ಅಂದರೆ ಇಲ್ಲಿ ಅಚ್ಚುಕಟ್ಟಾದ ರೀತಿಯಲ್ಲಿ ಹೊಸ ಉದ್ದಿಮೆಗಳೂ ಬೆಳೆಯಬಹುದು. ಹಾಗೂ ಇಲ್ಲಿಯ ಪರಿಸ್ಥಿತಿಯ ಸರಿಯಾದ ಜ್ಞಾನ ಪಡೆದು ಅದಕ್ಕನುಣವಾದ ತರಬೇತಿ ಹೊಂದಿದ ತಜ್ಞರೂ ತಯಾರಾಗಬಹುದು. ಅದರಂತೆ ಇಲ್ಲಿ ಬಿದಿರು ಹಾಗೂ ಬೆತ್ತದ ಕೈಗಾರಿಕೆಯ ಬೆಳವಣಿಗೆಗೆ ಆಸ್ಪದವಿದ್ದರೆ ಇಲ್ಲಿಯ ಜನರನ್ನು ಜಪಾನಕ್ಕೆ ಕಳಿಸುವದಕ್ಕಿಂತ ಜಪಾನದ ತಜ್ಞರನ್ನು ಇಲ್ಲಿ ತಂದು ಅವರಿಂದ ನಮ್ಮ ಜನರಿಗೆ ಪ್ರತ್ಯಕ್ಷ ಜ್ಞಾನ ಕೊಡಿಸುವದು ಹೆಚ್ಚು ಲಾಭದಾಯಕವಾಗುವದು. ಸಾವಿರಾರು ರೂಪಾಯಿಗಳನ್ನು ವೆಚ್ಚ ಮಾಡಿ ಪರದೇಶದ ಕಾರಖಾನೆಗಳ ಜ್ಞಾನಮಾಡಿಕೊಂಡು ಅದನ್ನು ಇಲ್ಲಿಯ ಪರಿಸ್ಥಿತಿಗೆ ಹೊಂದಿಸಿಕೊಳ್ಳಲಾರದೇ ಬಳಲುವ ಒಬ್ಬ ತಜ್ಞನಿಗಿಂತ, ಪರದೇಶದ ಒಬ್ಬ ತಜ್ಞನನ್ನು ತಂದು ಅವನಿಗೆ ತಕ್ಕ ಹಾಗೂ ಸಾಧ್ಯವಿದ್ದ ಅನುಕೂಲತೆ ಮಾಡಿಕೊಟ್ಟು ಕಾರಖಾನೆ ಸ್ಥಾಪಿಸಿ ಇಲ್ಲಿಯ ನೂರಾರು ವಿದ್ಯಾರ್ಥಿಗಳಿಗೆ ಅದೇ ಶಿಕ್ಷಣವನ್ನು ಇಲ್ಲಿಯ ಪರಿಸ್ಥಿತಿಗೆ ತಕ್ಕಂತೆ ಮಾಡಿಕೊಡುವ ಸೌಕರ್ಯವನ್ನು ಒದಗಿಸುವದು ಉದ್ದಿಮೆಯ ಬೆಳವಣಿಗೆಯ ದೃಷ್ಟಿಯಿಂದ ಹಾಗೂ ತಜ್ಞರ ತರಬೇತಿಯ ದೃಷ್ಟಿಯಿಂದ ಹೆಚ್ಚು ಉಪಯುಕ್ತವೆನಿಸುತ್ತದೆ.

### ಪ್ರಾದೇಶಿಕ ಸಮಿತಿಗಳ ರಚನೆ

ಆದರೆ ಬರಿ ಅಡಚಣೆ ವಿವರಿಸಿ ಅಲ್ಲಲ್ಲಿಯೇ ಅದರ ಹೊಣೆಯನ್ನು ಸರಕಾರದ ಮೇಲೆ ಹೊರಿಸಿ ಅದಕ್ಕೆ ಉಪಾಯವನ್ನು ಸೂಚಿಸುವದು ಸಮಂಜಸವಾಗಲಿಕ್ಕಿಲ್ಲ. ಅದಕ್ಕೆ ನಿಶ್ಚಿತ ರೂಪ ಬರಬೇಕಾದರೆ ಆ ಸಮಸ್ಯೆಯನ್ನು ಹೆಚ್ಚು ಕೂಲಂಕಷವಾಗಿ ಮಥಿಸಿ ಒಂದು ನಿರ್ಣಯಕ್ಕೆ ಬರಬೇಕಾಗುತ್ತದೆ. ಅದಕ್ಕಾಗಿ ಆಯಾ ಪ್ರಾಂತದ ವೈಶಿಷ್ಟ್ಯ, ಔದ್ಯೋಗಿಕ ಸಂಪತ್ತು, ಅನುಕೂಲತೆ ಮುಂತಾದವುಗಳನ್ನು ಸ್ಥೂಲಮಾನದಿಂದ ನೋಡಿ ಪ್ರಾದೇಶಿಕ ಔದ್ಯೋಗಿಕ ಅಭಿವೃದ್ಧಿ ಮಂಡಳಗಳನ್ನು ರಚಿಸುವದು ಅವಶ್ಯ. ಈ ಮಂಡಳ ಅಥವಾ ಸಮಿತಿಯವರು ತಮ್ಮ ಪ್ರದೇಶದ ಔದ್ಯೋಗಿಕ ಬೆಳವಣಿಗೆಯ ಸಾಧ್ಯಾಸಾಧ್ಯತೆಯನ್ನು ತಜ್ಞರಿಂದ ಅಭ್ಯಸಿಸಿ, ಅದಕ್ಕೆ ಸರಿಯಾದ ಯೋಜನೆಗಳನ್ನು ತಯಾರಿಸುವದು ಅಂಥ ಉದ್ದಿಮೆಗಳನ್ನು ತೆಗೆಯುವವರಿಗೆ ಸಲಹೆ ನೀಡುವದು ಅವರಿಗೆ ಸರಕಾರದಿಂದ ಯೋಗ್ಯ ಸಹಾಯವನ್ನು ಸಂಪಾದಿಸಿ ಕೊಡುವದು ಮುಂತಾದ ಕಾರ್ಯವನ್ನು ನಿರ್ವಹಿಸಬೇಕು. ಈಗಿರುವ ಪ್ರಾದೇಶಿಕ ಗ್ರಾಮೋ-

ದ್ಯೋಗ ಸಮಿತಿಗಳು ಕೇವಲ ಗ್ರಾಮೋದ್ಯೋಗಗಳಿಗೆ ಹಾಗೂ ಒಂದು ವಿಶಿಷ್ಟ ತತ್ವಕ್ಕೆ ಅಂಟಿಕೊಂಡಿರುವದರಿಂದ ಅವುಗಳಿಂದ ಔದ್ಯೋಗಿಕ ಅಭಿವೃದ್ಧಿಗೆ ಸಾಕಷ್ಟು ಪ್ರಯೋಜನವಾಗುತ್ತಿಲ್ಲ. ಕರ್ನಾಟಕದಲ್ಲಿ ಆರ್ಥಿಕ ಹಾಗೂ ಔದ್ಯೋಗಿಕ ಅಭಿವೃದ್ಧಿಗಾಗಿ ಕರ್ನಾಟಕದ ಸ್ಥಿತಿಗತಿಗಳ ಪರಿಜ್ಞಾನವುಳ್ಳ ಜನರ ಸಮಿತಿಯನ್ನು ಕರ್ನಾಟಕದಲ್ಲಿಯೇ ರಚಿಸಿ ಅವರಿಗೆ ಈ ಹೊಣೆಯನ್ನು ವಹಿಸಿಕೊಡಬೇಕು.

### ಪ್ರತಿನಿಧಿಗಳ ಕರ್ತವ್ಯ

ಮುಂಬಯಿ ರಾಜ್ಯ ವಿಧಾನ ಸಭೆಗೆ ಆರಿಸಿ ಹೋದ ನಮ್ಮ ಪ್ರತಿನಿಧಿಗಳು ಈ ವಿಷಯದ ಬಗ್ಗೆ ವಿಶೇಷ ಆಸ್ಥೆ ವಹಿಸಿ ಸಾಮೂಹಿಕವಾಗಿ ಪ್ರಯತ್ನ ಮಾಡುವದು ಅವಶ್ಯವಿದೆ. ಸುದೈವದಿಂದ ಅವರಲ್ಲಿ ಈಗ ನೂರಕ್ಕೆ ೮೦ ರಷ್ಟು ಜನ ಕಾಂಗ್ರೆಸ ಪಕ್ಷದವರೇ ಇರುವದರಿಂದ ಕರ್ನಾಟಕ ಕಾಂಗ್ರೆಸ ಪಕ್ಷದವರೇ ಒಂದು ವಿಶೇಷ ಶಾಖೆಯನ್ನು ತೆಗೆದು ಕರ್ನಾಟಕದ ಆರ್ಥಿಕ ಔದ್ಯೋಗಿಕ ಅಭಿವೃದ್ಧಿಯ ಸಾಧ್ಯಾಸಾಧ್ಯತೆಯನ್ನು ಅಭ್ಯಸಿಸುವ ವ್ಯವಸ್ಥೆ ಮಾಡಬೇಕು. ಮತ್ತು ತಾವು ನಿರ್ಣಯಕ್ಕೆ ಬಂದ ವಿಷಯದ ಬಗ್ಗೆ ತಮ್ಮ ವಿಧಾನ ಸಭಾ ಪ್ರತಿನಿಧಿಗಳಿಗೆ ತಿಳಿಸಿ ಸರಕಾರದಿಂದ ಆವಶ್ಯಕ ಸಹಾಯ ಸಹಾನುಭೂತಿ ದೊರೆಯುವಂತೆ ಮಾಡಬೇಕು. ಅಥವಾ ಕಾಂಗ್ರೆಸ ಪಕ್ಷದ ಪರವಾಗಿ ಪ್ರತಿನಿಧಿಗಳೇ ಮುಂಬಯಿಯಲ್ಲಿ ತಮ್ಮದೊಂದು ಕಚೇರಿಯನ್ನು ಮಾಡಿಕೊಂಡು ಇಂಥ ವಿಷಯಗಳ ಬಗ್ಗೆ ಆವಶ್ಯಕ ಮಾಹಿತಿ ಸಂಗ್ರಹಿಸುವ ವ್ಯವಸ್ಥೆ ಮಾಡಿಕೊಂಡು ಕರ್ನಾಟಕದ ಆರ್ಥಿಕ ಔದ್ಯೋಗಿಕ ಬೆಳವಣಿಗೆಯ ಕಡೆಗೆ ಸರಕಾರದ ಲಕ್ಷ್ಯವು ವೇಧಿಸುವಂತೆ ಮಾಡಬೇಕು.

ಆರ್ಥಿಕ ಮುಗ್ಗಟ್ಟಂತೂ ತನ್ನ ಕರಾಳ ಹಸ್ತವನ್ನು ದೇಶದ ತುಂಬ ಚಾಚಿದೆ. ನಿರುದ್ಯೋಗಿಗಳ ಸಂಖ್ಯೆ ದಿನದಿನಕ್ಕೆ ಹೆಚ್ಚಾಗತೊಡಗಿದೆ. ಒಕ್ಕಲತನ ಹಾಗೂ ನೌಕರಿಯ ಮೇಲೆ ಹೆಚ್ಚಾಗಿ ಅವಲಂಬಿಸಿರುವ ಕನ್ನಡಿಗರಿಗೆ ಹೊಸ ಬಗೆಯ ಜೀವನಮಾರ್ಗವನ್ನು ಕಲ್ಪಿಸಿಕೊಡದಿದ್ದರೆ, ಈ ಮುಗ್ಗಟ್ಟಿನ ಝಳದಿಂದ ಅವರು ಬೆಂದು ಹೋಗಬಹುದು. ಅದಕ್ಕಾಗಿ ನಮ್ಮ ಮುಖಂಡರಾಗಲಿ ಸರಕಾರದವರಾಗಲಿ ಕರ್ನಾಟಕದ ಔದ್ಯೋಗೀಕರಣದ ಅವಶ್ಯಕತೆಯನ್ನು ಲಕ್ಷಿಸಿ ಅದಕ್ಕೆ ತಕ್ಕ ಉಪಾಯಗಳನ್ನು ತ್ವರೆಯಿಂದ ಕೈಕೊಳ್ಳಬೇಕಾದುದು ಕರ್ತವ್ಯವಾಗಿದೆ.

---

ಒಬ್ಬ ವ್ಯಾಪಾರಿ ಇನ್ನೊಬ್ಬಗೆ: "ನಾವು ಲಾಭಕ್ಕಾಗಿ ವ್ಯಾಪಾರ ಮಾಡುವವರಲ್ಲ. ಲಾಭ ಬೇಡವೆಂದಲ್ಲ, ಸಿಗದಿರುವದರಿಂದ."

# ಶಬ್ದಕೋಶದೊಡನೆ ಚಿನ್ನಾಟ

**ನಾವು ನಿತ್ಯಜೀವನದ ವ್ಯವಹಾರದಲ್ಲಿ ಹಲವಾರು ಶಬ್ದಗಳನ್ನು ಉಪಯೋಗಿಸುತ್ತಿದ್ದೇವೆ. ಆದರೆ ಪ್ರತಿಯೊಂದು ಶಬ್ದವೂ ಹೇಳುವ ಕತೆಯನ್ನು ನಾವು ಎಷ್ಟು ಗಮನಿಸುತ್ತೇವೆ? ಶಬ್ದಗಳಲ್ಲಿ ಒಂದು ಜನಾಂಗದ ಸ್ವಭಾವವೇ ಹುದುಗಿರುತ್ತದೆಂದು ನಾವೆಲ್ಲಿ ಗಮನಿಸುತ್ತೇವೆ? .... .... ....**

ಲೇಖಕರು: ಪ್ರೊ. ಬಿ. ಎಚ್. ಶ್ರೀಧರ, ಎಂ. ಎ.

'ನಾಗ್ ವೈ ಸಮ್ರಾಟ್ ಪರಮಂ ಬ್ರಹ್ಮ' ಎಂದು ಹಿರಿಯರು ಹೇಳಿದ್ದರಲ್ಲಿ ಏನಾದರು ಅರ್ಥವಿದೆಯೆ? ಎಂದು ವಿಚಾರ ಮಾಡಹೊರಟರೆ ತುದಿಮೊದಲಿಲ್ಲವಾಗುತ್ತದೆ. ಮನುಷ್ಯರು ತಮ್ಮ ಅನುಭವಗಳನ್ನು ಮಾತಿನಲ್ಲಿಡುತ್ತ ಬಂದಿದ್ದಾರೆ. ಹತ್ತಾರು ಸಲ, ನೂರಾರು ಸಲ, ತಲೆತಲಾಂತರಗಳಲ್ಲಿ ಏಕರೂಪವಾದ ಅನುಭವ ಉಂಟಾದರೆ ಅದಕ್ಕೆ ಪ್ರಾಯೋಗಿಕ ಸಿದ್ಧಾಂತದ ತೂಕ ಬರುವದು ಸಹಜ. ಅಂಥ ಅನುಭವಗಳು ವಾಕ್ಯರೂಪದಲ್ಲಲ್ಲದೆ ಪದಾಂತರ್ಗತವಾಗಿಯೂ ಉಳಿದಿವೆ ಎಂಬುದು ಭಾಷಾಶಾಸ್ತ್ರಿಗಳಿಗೆ ಗೊತ್ತು. ನಮ್ಮ ನಾಣ್ಣುಡಿ ಜಾಣ್ಣುಡಿಗಳಂತೆಯೇ ಪದಗಳಿಗೆ ಅರ್ಥ ಹಚ್ಚಿದ್ದರಲ್ಲಿಯೂ ಈ ನಾಣ್ಣ್ನ, ಜಾಣ್ತನಗಳು ಕಂಡು ಬರುತ್ತವೆ.

ಹಿಂದೆ ಬ್ರಾಹ್ಮಣರ ವಿದ್ಯೆ ಎಂದರೆ ವೇದವಾಗಿತ್ತು. ವೇದವೇ ಜ್ಞಾನ. ಅದೇ ಜ್ಞಾನಪರ್ವತದ ಶಿಖರ. ಈ ಅರ್ಥ ವೇದವೆಂಬ ಪದಕ್ಕೆ ಬದಲಾಗಿ ಬಳಸಲಾದ ಕನ್ನಡ ಪದಗಳಲ್ಲಿ ಅಡಗಿದೆ. ಓದು, ಪಳವಾತು, ಬೇದ, ಸುತಿ ಎಂಬ ನಾಲ್ಕು ವೇದ ಪದ ಪರ್ಯಾಯಗಳು. ಹಿಂದೆ ಓದೆಂದರೇ ವೇದದ ಅಭ್ಯಾಸವಾಗಿದ್ದುದರಿಂದ ವೇದಕ್ಕೇ ಓದೆಂದು ಕರೆದರು. ಅದರ ಮೇಲೆ ಅದು 'ಪಳವಾತಾ'ಯ್ತು. ನಾವಿಂದು ವೇದವನ್ನು Oldest written record ಎನ್ನುತ್ತೇವೆ. ಈ ಐತಿಹಾಸಿಕ ಸತ್ಯವನ್ನು 'ಪಳವಾತು' ಎಂಬ ಪದ ತಿಳಿಸುತ್ತದೆ.

ಮಂಡಲವೆನ್ನಲು 'ಬಟ್ಟು' ಎಂಬ ಪದ ಬಳಕೆಯಲ್ಲಿತ್ತು. 'ಬಟ್ಟಲ್' ಅಂತೂ ನಮಗೆ ಚನ್ನಾಗಿ ಗೊತ್ತಿದೆ. ಸಾದಿನ ಬಟ್ಟು, ಕುಂಕುಮದ ಬಟ್ಟುಗಳೂ ನಮಗೆ ಚಿರಪರಿಚಿತ. ಹಳೆಯ ಕಾಲದ ಮುತ್ತೈದೆಯರ ಪೂರ್ಣಚಂದ್ರನಂಥ ಕುಂಕುಮದ ಬಟ್ಟು ಹಳಗಾಲದ ಸೌಂದರ್ಯ ದೃಷ್ಟಿಗೆ ನಿದರ್ಶನವಾಗಿದೆ. ವರ್ತುಲಾಕೃತಿಯ ಆ ಶೋಭೆ ಬಟ್ಟನಲ್ಲಿ ಬಂದಿದೆ. ಬಟ್ಟಬಯಲಿನಲ್ಲೂ ಬಹುಶಃ ಬಟ್ಟೇ ಅಡಗಿದೆಯೊ ಏನೊ!

'ತೇರ್' ಬಹುಶಃ ಕನ್ನಡ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಅಗ್ರಸ್ಥಾನಪಡೆದಿರಬೇಕು. ತೇರೆಳೆಯುವ ಧಾರ್ಮಿಕ-ಸಾಮಾಜಿಕ ಹಬ್ಬ, ಉತ್ಸವ ನಮ್ಮ ನಾಡಿಗರ ನಾಡಿಗತವಾದುದಾಗಿರಬೇಕು. ತೇರು ಅವರಿಗದರಿಂದ ಅಷ್ಟು ಚಿರಪರಿಚಿತ. ಅದರಿಂದೇ ಮುಗಿಲನ್ನು ನೀರ್ದೇರೆದರು, ಇಂದ್ರನನ್ನು ಮುಗಿಲ್ದೇರನೆಂದರು, ಬ್ರಹ್ಮನನ್ನು ಅಂಚೆದೇರನೆಂದರು, ಕಾಮನನ್ನು ಗಿಳಿದೇರನೆಂದರು. ಗುತ್ತಿಯ ತೇರು, ಬನವಾಸಿಯ ತೇರು, ನಂಜುಗುಣಿಯ ತೇರು ಮುಂತಾದ ಉನ್ನತ ತೇರುಗಳನ್ನು ಕಂಡವರಿಗೆ ತೇರಿನಲ್ಲಿಯ ಔನ್ನತ್ಯ, ಗಾಂಭೀರ್ಯ ಸೌಂದರ್ಯಗಳು ಕಣ್ಣಿಗೆ ಕಟ್ಟುತ್ತವೆ. ತೇರಿನಲ್ಲಿ ಕನ್ನಡದ ಕಲೆಗಾರಿಕೆಯ ಅನೇಕ ಮಾದರಿಗಳು ಇವೆ; ಮರದ ಮೇಲಿನ ಕೆತ್ತನೆಯ ಕೆಲಸಗಳಲ್ಲದೆ, ಬಣ್ಣದ ಕೆಲಸ, ವರ್ಣ ಚಿತ್ರ, ಚಿತ್ರಪಟ, ಚಿತ್ರಫಲಕ, ನಾನಾ ವರ್ಣಗಳ ಪತಾಕಾವಳಿ, ತಳಿರು ತೋರಣಗಳು, ಬಾಳೆ ಮಂಟಪಗಳು ಮುಂತಾದ ಸಕಲ ಸಿಂಗಾರದ ಸಾಮುಗ್ರಿಗಳನ್ನು ನಾವು ಕಾಣಬಹುದು. ಆ ಸಿಂಗಾರ ಮಂಗಲಕರ. ಅಂಥ ತೇರೆಂಬ ಪದವನ್ನು ದೇವರ ನಾಮನಿರ್ಮಿತಿಯಲ್ಲಿ ಹಚ್ಚುವುದರ ಔಚಿತ್ಯದ ಜ್ಞಾನ ಕನ್ನಡತನಕ್ಕೆ ಸೇರಿದ್ದಲ್ಲವೆ? ಗರುಡವಾಹನ, ನಂದಿವಾಹನ, ಹಂಸವಾಹನ, ಮಯೂರವಾಹನ ಮುಂತಾದ ವಾಹನಾಂತ ಪದಗಳಿಂದ ದೇವರನ್ನು ನಿರ್ದೇಶಿಸುವುದರಲ್ಲಿ 'ವಾಹನ'ಎಂಬ ಪದ 'ತೇರಿ'ನಷ್ಟು ಉದಾತ್ತ ಸುಂದರ ಕಲ್ಪನೆಯನ್ನು ಧ್ವನಿಸಬಲ್ಲುದೇ? ವಾಹನ ಏನಾದರೊಂದು ಅನಿರ್ದಿಷ್ಟ ಯಾನಸಾಧನ. ತೇರೆಂದರೆ ರಥ; ಅದರಲ್ಲೂ ಕನ್ನಡ ರಥ.

'ಸೂಳ್' ಎಂದರೆ 'ಬಾರಿ' ಸಲ, ಸರದಿ ಎಂದಾಗುತ್ತದೆ. 'ಸೂಳ್'ಗೂ ಸೂಳೆಗೂ ಬಹಳ ಸಂಬಂಧವಿರಬೇಕು. 'ವಾರದಾಗ ಮೂರು ಸರ್ತಿ ಬಂದು ಹೋದಾಂವಾ' ಎಂಬ ವಾಕ್ಯ ಸೂಚಿಸುವಂತೆ ವಾರಾಂಗನೆಯ ವಾರ (=Turn, day, week) ವಾರದ ವ್ಯವಹಾರ ಅವಳು ತೆಗೆದುಕೊಂಬ ಬಾರಿಯನ್ನು ಸಮರ್ಥಿಸುತ್ತಿದೆ. ಅವಳ ಸರದಿಯ ಸೇವೆಯನ್ನು 'ಪಾತ್ರಸೇವೆ' ಎಂಬ ಪದ ವ್ಯಕ್ತಮಾಡುತ್ತದೆ. ಪಾತ್ರಸೇವೆಯೆಂದರೆ ನರ್ತಕಿಯಾದ ವೇಶ್ಯೆಯ ಆಗಮನ—ಸೇವೆ.

'ಮೀನ್' ಎಂದರೆ ಮೀನವೆಂದೂ ನಕ್ಷತ್ರವೆಂದೂ ಅರ್ಥಗಳಿವೆ. 'ಮೀಂಬಟ್ಟೆ' (= ಮೀನಿನ ಮಾರ್ಗ) ಎಂದರೆ ಆಗಸ. ಮೀನೆಂದರಿಲ್ಲಿ ತಾರಗೆ. ಅದೇ ಸಂಸ್ಕೃತದಲ್ಲಿ 'ತಾರಾಪಥ'. ಸಾಮುದ್ರಿಕರಾದ ಪ್ರಾಚೀನ ಕನ್ನಡಿಗರಿಗೆ ಮೀನು (Fish) ನಿತ್ಯಪರಿಚಯದ ಪ್ರಾಣಿಯಾಗಿರಬೇಕು. ಆಗಸವನ್ನೂ ಒಂದು ಮಹಾ ಸಮುದ್ರವೆಂದು ಭಾವಿಸಿ ಅದರಲ್ಲಿಯ ತಾರೆಗಳನ್ನು ಅವರು ಮೀನುಗಳೆಂದು ಕರೆದಿರಬಹುದಾದರೆ ಅವರ ಕಾವ್ಯಸಹಜ ಕಲ್ಪನಾಶಕ್ತಿಯನ್ನು ಕೊಂಡಾಡಲೇಬೇಕು.

ಆ ಕಾರ್ಯದಲ್ಲಿ ಮೀನನ್ನು ಕಲ್ಪಿಸಿದ ಕವಿತ್ವದ ಜೊತೆಗೆ ನೀರಿನಲ್ಲಿಯ ಮತ್ಸ್ಯವನ್ನಾದರೂ 'ಮೀನ್' ಎಂದು ಕರೆದುದರಲ್ಲಿ ಆ ಕನ್ನಡಿಗರ ಪದಪಾಂಡಿತ್ಯ ತಿಳಿಯುತ್ತದೆ. (ನೀರಲ್ಲಿ ಸದಾ 'ಮೀಯುವ' ಪ್ರಾಣಿ ಅದಲ್ಲವೆ?)

ರುದ್ರನೂ ಪಶುಪತಿಯೂ ಈಶಾನನೂ ಆದ ಶಿವ ಕನ್ನಡದಲ್ಲಿ 'ಕನ್ನಡಿಗ! ಎರಡು ಕಣ್ಣುಗಳ ನಡುವೆ ಅವನಿಗಿನ್ನೊಂದು ಕಣ್ಣಿದೆ—ಅದರಿಂದ ಅವನು (ಕಣ್+ನಡು+ಗ) ಕಣ್ಣಡುಗ ಅಥವಾ ಕಣ್ಣಡಿಗ-ಕನ್ನಡಿಗ, ತ್ರ್ಯಂಬಕ ಮುಕ್ಕಣ್ಣ ಇತ್ಯಾದಿ ಬಿರುದುಗಳು ಸರ್ವಸಾಧಾರಣ. ಆದರೆ ಈ ಕನ್ನಡಿಗನೆಂಬ ಬಿರುದು ಶಿವನಿಗೆ ಬಹುಶಃ ಕನ್ನಡದ ಕಾಣಿಕೆಯೊ ಏನೊ! ಬೇಕಾದರೆ, 'ಕಣ್+ನಡೆ+ಗ' ಎಂದರೆ ಕಂಡಂತೆ ಮಾಡಬಲ್ಲ, ಸರ್ವತಂತ್ರ ಸ್ವತಂತ್ರನೆಂದೊ 'ಈಕ್ಷಣಮಾತ್ರ ಜಗತ್' ಎನ್ನಬಲ್ಲ ಸರ್ವಶಕ್ತನೆಂದೊ ನಿರ್ವಚಿಸಬಹುದು. ಅಥವಾ 'ಪರೇಂಗಿತಜ್ಞಾನ ಫಲಾಃ ಹಿ ಬುದ್ಧಯಃ' ಎಂಬಂತೆ 'ಕಣ್+ಅಡಿ+ಗ' ಎಂದರೆ ಕಣ್ಣಿಗೆ ಕಂಡದ್ದನ್ನು ಭೇದಿಸಿ, ಒಳಹೊಕ್ಕು ಅಂತರಂಗವನ್ನು ಅರಿಯಬಲ್ಲ ಮನೋಜ್ಞ (ಮನಃ+ಜ್ಞ) ಎಂದು ಬೇಕಾದರೂ ನಿರುಕ್ತಿಸಬಹುದು.

'ಪಿತೃ' ಎಂದರೆ ರಕ್ಷಕ ಎಂದು ನಿರುಕ್ತಾರ್ಥ. ಮನೆಯಲ್ಲಿ ಅಂದು ತಂದೆಯೇ ಬಲಿಷ್ಠನೂ ದಯಾವಂತನೂ ಆಗಿದ್ದನು. ಆದರಿಂದು ರೆಕ್ಕೆ ಬಂದ ಕೂಡಲೇ ಹಾರಿಹೋಗುವ ಹಕ್ಕಿಯಂತೆ ನೌಕರಿ ಸಿಕ್ಕಿದಾಕ್ಷಣ ಮದುವೆ ಮಾಡಿಕೊಂಡೋ ಕೊಳ್ಳದೆಯೋ ಬೇರಾಗುವ ಮಕ್ಕಳು ಹೆಚ್ಚುತ್ತಿರುವಾಗ ಅಪ್ಪನ ರಕ್ಷಕತ್ವ ಬಹಳ ಕಡಿಮೆ ಕಾಲಾವಧಿಯದಾಗಿದೆ. ಆದ್ದರಿಂದ ಅಪ್ಪನಿಂದು ಅಪ್ಪನೇ ಅಲ್ಲ. ಅವನು 'ಕೇವಲಂ ಜನ್ಮಹೇತುಃ'!

ಹಿಂದೆ ನಿತ್ಯವೂ ಹಾಲು ಕರೆಯುವ ಕೆಲಸ ಮನೆಯ ಹೆಣ್ಣುಮಗಳದಾಗಿತ್ತೆಂದು ತೋರುತ್ತದೆ. ಅದರಿಂದಲೇ ಅವಳಿಗೆ 'ದುಹಿತೃ' (= ಹಾಲು ಕರೆವಾಕೆ) ಎಂದರು. ಇಂದು ಹಾಲು

ಮಾರುವ ಆಬಾಲವೃದ್ಧ ಸ್ತ್ರೀ ಪುರುಷರಷ್ಟೆ ದುಹಿತೃಗಳಾಗಬೇಕಾಯ್ತು, ನಿರುಕ್ತಿ ಹಿಡಿದರೆ. ದುಡಿಯುವವರೇ ಇಂದು ಸಾವಕಾರರಾಗುವಂತೆ ಹಾಲು ಕರೆವ ಮುಂತಾದ ಮನೆಗೆಲಸ ಮಾಡದವರೇ ಗೌರವಾರ್ಹ ಹೆಣ್ಣು ಮಕ್ಕಳು, ದುಹಿತೃಗಳು !

'ಅನಿರ್ವಾಹ' ಎಂದರೆ Celebecy- ಮದುವೆ ಮಾಡಿಕೊಳ್ಳದೆ ಇರುವುದು ಎಂದು ಅರ್ಥ. ಪ್ರಾಚೀನ ಕಾಲದಲ್ಲಿ ಹೆಣ್ಣು ಸಿಗದೆ ಹೋದರೆ ಮಾತ್ರ ಅನಿರ್ವಾಹವಾಗಿ ಕಡೆತನಕ ಬ್ರಹ್ಮಚಾರಿಗಳಾಗಿ ಉಳಿಯುತ್ತಿದ್ದರೆಂದು ತೋರುತ್ತದೆ. ಆದರಿಂದಿನ ಕಾಲದಲ್ಲಿ ಉದ್ಯೋಗದ ಕೊರತೆ ಹೆದರಿಸುತ್ತಿರುವಾಗ, ಉದರಂಭರಣ ದುರ್ಭರವಾಗುತ್ತಿರುವಾಗ, ಮದುವೆ ಮಾಡಿಕೊಳ್ಳುವುದೇ ಅನಿರ್ವಾಹಕ್ಕಾಗಿ, ನಿರುಪಾಯರಾಗಿ, ನಿರ್ಬಂಧಕ್ಕೊಳಗಾಗಿ!

'ಸ್ವಕರಣ' [= ತನ್ನವನ(ಳ)ನ್ನಾಗಿ ಮಾಡಿಕೊಳ್ಳುವುದು ] ಎಂದರೆ ಮದುವೆಯಾಗುವುದು ಎಂಬರ್ಥವಿತ್ತಂತೆ ಹಿಂದೆ. ಇಂದಿನ ಸ್ವಾತಂತ್ರ್ಯ ಯುಗದಲ್ಲಿ ಯಾರೂ ಯಾರನ್ನೂ ತನ್ನವರನ್ನಾಗಿ ಮಾಡಿಕೊಳ್ಳಲಾರರು, ಮಾಡಿಕೊಂಡರೂ ತತ್ತ್ವಕ್ಕೆ ವಿರುದ್ಧ. ಆದರ್ಶ ಸೋಶಲಿಜಂನಲ್ಲಂತೂ ಸ್ವ-ಶರೀರ, ಸ್ವ-ಕರ್ಮ- ಸಾಧನಗಳು ಅಷ್ಟೇ ಅಲ್ಲದೆ ಮತ್ತಾವುದೂ 'ಸ್ವ' ( = ಆಸ್ತಿ ) ಅಲ್ಲವೇ ಅಲ್ಲ. ಹೀಗಿರುವಾಗ ಮದುವೆಯಾದವರನ್ನು ತನ್ನ ಆಸ್ತಿಯನ್ನಾಗಿ ಮಾಡಿಕೊಳ್ಳಹೋಗುವ ಕಲ್ಪನೆಯಾದರೂ ನಾಗರಿಕವಾದೀತೇ? ಶಾಂತಂ ಪಾಪಂ!

'ಪುತ್ರ' 'ಪುತ್ತ' ನಾದನು; ಪುತ್ತನು ಅನಂತರ 'ಪುಟ್ಟ'ನಾದನು. 'ಮಗೂ' ಪುಟ್ಟಾ' ಎಂದಾಗ ಬರುವ ಕೊಂಡಾಟದ ( 'ಅಚ್ಚೀ'ದ ) ಅರ್ಥ ಮೂಲತಃ ( ಪುತ್ರಿಗಲ್ಲ ) ಪುತ್ರನಿಗೇ ಏಕೆ ಸಂಬಂಧಿಸಿರಬೇಕು? ಅದು ಗಂಡು ಮಕ್ಕಳ ಸಂಖ್ಯೆ ಕಡಿಮೆಯಾಗಿದ್ದ ಕಾಲವಾಗಿರಬೇಕು. ಅದರಿಂದಲೇ ಪುನ್ನಾಮ ನರಕದಿಂದ ರಕ್ಷಿಸುವವನೇ ಪುತ್ರನೆಂದು ಪ್ರಸಿದ್ಧವಾಯ್ತು. 'ಆತ್ಮಾ ಹಿ ಜಜ್ಞೇ ಆತ್ಮನಃ' ಎಂದೂ 'ಪತಿರ್ಜಾಯಾಂ ಪ್ರವಿಶತಿ ಗರ್ಭೋ ಭೂತ್ವಾ ಸ ಮಾತರಂ' ಎಂದೂ 'ನಾಪುತ್ರಸ್ಯ ಲೋಕೋಽಸ್ತೀತಿ ತತ್ಸರ್ವೇ ಪಶವೋ ವಿದುಃ' ಎಂದೂ ಪುತ್ರಪ್ರಾಧಾನ್ಯ ಆರ್ಯ ಸಮಾಜದಲ್ಲಿ ಹೆಚ್ಚಿತ್ತು. ಬಾಲಿ ದ್ವೀಪದಲ್ಲಿ ಬಾಲೆಯರೇ ಹೆಚ್ಚು ಬಾಲರಿಗಿಂತ. ಅಲ್ಲಿ ಯಾವಳಿಗಾದರೂ ಗಂಡುಮಗು ಹುಟ್ಟಿತೆಂದರೆ ಊರಿನ ಸ್ತ್ರೀಯರೆಲ್ಲಾ ಉತ್ಸವವನ್ನೇರ್ಪಡಿಸುವರಂತೆ. ಎಂಥ ಬೆಲೆ ಗಂಡಿಗೆ ಅಲ್ಲಿ ನೋಡಿಕೊಳ್ಳಿ! ಹುಟ್ಟಿದ ಗಂಡು ಕೂಸುಗಳೆಲ್ಲ ಬಾಲಗೋಪಾಲಕೃಷ್ಣರೇ! ಎಂಥ ಸೌಭಾಗ್ಯ!

' ಕಡಿತಲೆ ' ಎಂದರೆ ಕತ್ತಿ. ಅದನ್ನು ಕತ್ತನ್ನು ಕೊಯ್ಯಲು ಯುದ್ಧದಲ್ಲಷ್ಟೇ ಅಲ್ಲದೆ ಮರಣ ದಂಡನೆ ವಿಧಿಸಿದಾಗಲೂ ಹಿಂದೆ ಬಳಸುತ್ತಿದ್ದಿರಬೇಕು. ಪ್ರಾಚೀನ ನಾಗರಿಕತೆಯಲ್ಲಿ ಯುದ್ಧವೆಂ-

ಬುದು ಪರ+ಆಕ್ರಮ(ಣ), ಪಿರ್+ವೆಸ=ದೊಡ್ಡ ಕಾರ್ಯ; ಪರ ಎಂದರೆ ಶತ್ರು. ದಿಗ್ವಿಜಯಧರ್ಮದ ಗುರುತಾಗಿ ಕನ್ನಡಿಗರಿಗೆ ಇಂದಿಗೂ ವಿಜಯ ದಶಮಿ ದೊಡ್ಡ ರಾಷ್ಟ್ರೀಯ ಹಬ್ಬವಾಗಿದೆ. ಯುದ್ಧ ವೊಂದು ( ಕೊಳ್+ಕುಳ )ಕೊಳ್ಗುಳ, ಭಂಡಣ ( ಬಂಡಣ ). ಅದರಲ್ಲಿ ಬಳಸುವ ಕತ್ತಿ ' ಕರ ವಾಳ್'—ಕೈಗತ್ತಿ. ಬಹುಶಃ 'ಅಡಿಯ ಮುಂದಿಡೆ ಸ್ವರ್ಗ' ಎಂಬ ಆಂದಿನ ಧರ್ಮದ ಅನುಯಾಯಿ ಗಳಿಗೆ ( ಕತ್ತಿಯಿಂದ ) ಕತ್ತಿಯೇ ಬಾಳ್ ಆಗಿರ ಬೇಕು. ಶೂರನಾಗಿ ಬದುಕಿದರೇ ಬದುಕಿದ ಹಾಗ- ಲ್ಲವೇ ? ಕನ್ನಡಿಗರ ಕ್ಷಾತ್ರತೇಜಸ್ಸಿಗೆ ಇಂದಿನ ' ಬಂಟರು ' ( =ಯೋಧರು ) ಅವಶಿಷ್ಟ ನಿದರ್ಶನ ರಾಗಿದ್ದಾರೆ. ಈ ಮಿಾಸೆಹೊತ್ತ ಗಂಡರಿಗೆ ಭಂಡಣ ದಲ್ಲಿ ಗೆದ್ದು ತಂದದ್ದೇ ಬಂಡ ( ಧನ ) ವಾಗಿತ್ತು- ಅದೇ ಅವರ ಬಂಡವಾಳ. ಇದನ್ನು ಹಳೆಯ ಅರ್ಥ ಶಾಸ್ತ್ರ ( =ರಾಜಧರ್ಮ ) ಗ್ರಂಥಗಳು ಎತ್ತಿಹಿಡಿ ಯುತ್ತವೆ. ವಿಜಿಗೀಷುತ್ವವು ರಾಜಧರ್ಮಗಳ ಲ್ಲೊಂದು. ಅಂದು ಕನ್ನಡಿಗರು ಕೊಳ್ಳುವ ಕುಳ ( ಕೊಳ್ಗುಳ ) ಗಳಾಗಿದ್ದರೆ ಇಂದು ಬೇಳ್ಗುಳ ( ಬೇಡುವ ಕುಳ ) ಗಳಾಗಿದ್ದಾರಲ್ಲವೇ ? ಮೊನೆ ಎಂದರೂ ಯುದ್ಧ-ಮೊನಚಾದ ಈಟಿ, ಬರ್ಚಿಗ- ಳನ್ನು ಬಳಸುತ್ತಿದ್ದ ಕಾರಣ. ಈ ಕೆಳಗಿನ ಪದ- ಗಳು ಪ್ರತಿಹತ ಅಥವಾ ಹೊಡೆತಕ್ಕೆ ಪರ್ಯಾಯ ಗಳು :—

ತಳ್ಪೊಯ್, ತಡಂಬರೆ, ಪೋರ್ಕುಳಿ, ತೊಡ ರ್ದುದು, ಮಾರ್ಕೊಂಡುದು, ಅಂಡಲೆದುದು, ಪಳಂಚಿದುದು, ಆಲಗಣಸಾದುದು, ಮಿಕ್ಕುದು, ಅಳ್ಕಿಸಿದುದು, ಓರಂಡಲಂ ತೆಗೆದುದು, ಜಕ್ಕುಲಿ- ಸಿದುದು, ಎಡೆಗೆಡಿಸು, ಅಳ್ಕಿಸು, ಮೀರು, ತೊಡರ್, ಉರ್ಕೇರ್ಕೆ, ಮಿಗು, ತಡಂಬೊಯ್ ಈ ಹೊಡೆದಾಟದ ಪದಸಂಪತ್ತೂ ಹಳಗನ್ನಡಿಗರ ಕ್ಷಾತ್ರಜೀವನವನ್ನು ಸ್ಮರಣೆಗೆ ತಂದುಕೊಡ ಬಲ್ಲದು. ಇನ್ನು ಅವರ ಗುಂಪುಬಾಳಿಗೆಗುರುತು ಹೇಳುವದಾದರೆ ಬಂಬಲ್, ತುರುಗಲ್, ವಂಗಡಂ, ಗಡಣಂ, ಮೊಗ್ಗರಂ ಎಂದು ಮುಂತಾಗಿ ೪೦ ಪರ್ಯಾಯಗಳಿವೆ— ತತ್ಸಮಗಳನ್ನುಳಿದು !

'ಜವುರ್' ಎಂದರೆ ಹುಬ್ಬುಹಾರಿಸುವದು. ಅದೇ ಇಂದು 'ಜರ್ಬ್' ಆಗಿದೆ. ಜರ್ಬಿನ ಜಬರ್‌ದಸ್ತು ಎಲ್ಲಿಂದ ಹುಟ್ಟಿದೆ ಎಂಬುದನ್ನು ನೋಡಿರಿ. 'ಗಂಡಗಾಡಿ' ಎಂದರೆ ವೀರ ಸೌಂದರ್ಯ— ' ನಿಜ ಧೀರರ ನಿಲುವೇ ಚೆಲುವು ! ' ಗಂಡ, ಗಂಡು ಎಂಬ ಪದಗಳಿಗೆ ಪೌರುಷಪದದ ಅರ್ಥವಿದೆ. ಆದುದರಿಂದ ಕನ್ನಡದ ಗಂಡ, ವೀರ- ಕೇವಲ ಸ್ತ್ರೀಪತಿಯಲ್ಲ. ಆದರೆ ಇಂದಿನ ' ಕೂಟ ಕುಳಿ ' ( Idler, Stay at home man ) ಕೇವಲ ಸ್ತ್ರೀಪತಿಯೂ ಅಲ್ಲವೆಂಬಂತೆ ಬಾಳುತ್ತಿರುವುದು ಶೋಚನೀಯ ! ಗಂಡರಿಗಿಂದು ಜರ್ಬಿಲ್ಲ- ಮೀಸೆಯನ್ನಂತೂ ಹಾಗೇ ಹುಬ್ಬನ್ನೂ ಬೋಳಿಸಬೇಕಲ್ಲವೇ ಇಂದು ?

ತುರಿಪವೆಂದರೆ ತ್ವರಿತ. ಬಹುಶಃ ತುರಿಹತ್ತಿದವ ಮಾಡುವಷ್ಟು ತ್ವರಿತ ಕಾರ್ಯವನ್ನಿನ್ನಾರೂ ಮಾಡರು. ಅದರಿಂದ ತುರಿಪಕ್ಕೆ ತ್ವರಿತಾರ್ಥ ಬಂದಿರಬಹುದೇ?

ಕನ್ನಡವಕ್ಕಿ ಅಥವಾ ಪಂಡಿತವಕ್ಕಿ ಎಂದರೆ ಗಿಳಿ. ಕನ್ನಡಿಸು ಎಂದರೆ ಸ್ಪಷ್ಟಪಡಿಸು ಎಂದರ್ಥ. ಕನ್ನಡಿ ಎಂದರೆ ಸ್ಪಷ್ಟವಾಗಿ ಪಡಿಮೂಡಿಸುವ ಸಾಧನ. ಮೊದಲು ಕನ್ನಡಿಗ ಕನ್ನಡವಕ್ಕಿಯಾಗಿದ್ದ. ಅನಂತರ ಪಂಡಿತವಕ್ಕಿಯಾದ. ಪಾಂಡಿತ್ಯ ಒಳ್ಳೆಯದಾಗಿದ್ದರೆ ಗಿಳಿಯಂತೆ ಆದೇಯ; ಶುಷ್ಕವಾಗಿದ್ದರೆ ಗಿಳಿಪಾಠದಂತೆ ಯಾಂತ್ರಿಕ, ಅನಾದೇಯ. 'ಓದಿದರೇನರಗಿಳಿ ಕಲ್ತೋದುವವೋಲ್' ಎಂದ ಅಭಿನವಪಂಪ. ಹೀಗಿದೆ ಗಿಳಿಯ ಬ್ರಾಹ್ಮಣಿಕೆ ಅಥವಾ ವಿದ್ವಾಂಸರ ಗಿಳಿತನ. ಆಸ್ಥಾನಪಂಡಿತರ ಅತಿವ್ಯಾಪ್ತಿ ಆರಂಭವಾದೊಡನೆ ಪಾಂಡಿತ್ಯ ಎರಡನೆಯ ಮಾದರಿಯದಾಗಲಾರಂಭಿಸಿತು. ವಿದ್ವಾಂಸರು ಕೋಶಾಧಿಕಾರಿಗಳಾದರು, ಶಬ್ದಕೋಶದೊಡನೆ ಚಿಣ್ಣಾಟವಾಡಿದರು, (ಚಿಣ್ಣನ+ಆಟ) ಮಕ್ಕಳಾಟವಾಡಿದರು. ಅರ್ಥಕೋಶವಿಲ್ಲ, ಬರಿಯ ಶಬ್ದಕೋಶವಷ್ಟೇ ಉಳಿಯಿತು ಅವರ ಹತ್ತಿರ. ಆಗ ಅವರು ಬಳಸಿದ ಪದಗಳು ರೂಢಿಯಿಂದ ದೂರ ಸರಿದವು. ಸತ್ತು ಹೋದವು, ಪ್ರಾಚೀನ ನಿಘಂಟುಗಳಲ್ಲಿ ಗಂಟಾಗಿ ಉಳಿದವು. ಕಣ್ಣುಡುವಿದ್ದ ಕನ್ನಡ ಪದಗಳು ಕಣ್ಬದಿಗೆ ಸರಿದವು. ಆದುದರಿಂದ ಅಂದಿನ ಕನ್ನಡದ ತಂಪು, ಸೌಸವ, ನರು, ಕಮ್ಮಿತ್ತು, ಸೊವಡು ಇಂದಿಲ್ಲ. ಇಂದು ಬರಿ 'ನಾತ' ಉಳಿದಿದೆ ವಿಪರೀತಾರ್ಥದಲ್ಲಿ! ಹಳಗನ್ನಡದ ಪೊಂಪುಳಿ (ಪುಳಕ), ಅಲಂಪು (ಹರ್ಷ), ಪೆಂಪು (ಆಧಿಕ್ಯ), ಇಂದು ಉಳಿದಿಲ್ಲ. ಆ ಗಾವರ, ಸೊಪ್ಪುಳ್, ಗಾವಳಿ ಇಂದು ಧ್ವನಿಸುತ್ತಿಲ್ಲ. ಆ ನಿಗರ, ನೆಟ್ಟೆ, ಕೆನೆ, ಚೊಕ್ಕಳಿಕೆ, ಚೊಕ್ಕ, ಹಸ, ಎಡ್ಡ, ಅನು, ಅಡಿ, ರಯ್ಯ, ಲೇಸು, ಬಾಳ್ಪು, ಕಣ್ಣೆವಂದುಡು, ಪರಿವಡೆದುದು ಇಂದಿನ ಶೈಲಿಯಲ್ಲಿಲ್ಲ. ಪಂಪಗನ್ನಡದ ತೊಳಗು, ಬೆಳಗು, ಮಿನುಗು, ಮಿರುಗು, ಕದಿರ್, ಕಳೆ, ಹಬೆ, ಪೊಳಪು, ಪೊಣರ್, ಮಿಂಚು, ಡಾಳಂ, ಪೊಗರ್, ತೊಳಪಂ, ಮಸೆ ಪಂಪಗನ್ನಡದ್ದೇ ಅಲ್ಲವೇ? ಹಳಗನ್ನಡದ ದೊರೆ (ಮರ್ಯಾದೆ) ಇಂದಿಲ್ಲ. ಅದಕ್ಕದೇ ದೊರೆ (ಸರಿ)!

ಎರೆಯರು (=ಬಡೆಯರು) ಎರೆವರ್ (=ಯಾಚಕರ್) ಆದಂತೆ ಹಳಗನ್ನಡ ನಡುವಾಗಿ ಈಗ ಹೊಸದಾಗಿದೆ. ಹೊಸತಿಗಿನ್ನೂ ಹಸನು ಬಂದಿಲ್ಲ ವಾಗ್ವ್ಯವಹಾರದಲ್ಲಿ. ಅದಿನ್ನೂ ಚದುರನ್ನು (State of being squarecut) ತನ್ನ ಶೈಲಿಯಲ್ಲಿ ಅಳವಡಿಸಿಕೊಳ್ಳಬೇಕಾಗಿದೆ. ಆ ದಿಕ್ಕಿನಲ್ಲಿ ನಮ್ಮ ಗದ್ಯ-ಪದ್ಯಕಾರರು ಕಣ್ದೆರೆಯಬೇಕು. ಕೇವಲ ಸಕ್ಕದಕ್ಕೆ ಹಿಂದೆ ಶರಣಾದವರಂತೆ ಇಂದು ಕೇವಲ ಆಂಗ್ಲಭಾಷೆಗೆ ಶರಣು ಹೋಗುವವರ ಸಂಖ್ಯೆ ಹೆಚ್ಚಾಗಿರುವುದು ಹಾನಿಕರ.

# ಆಫ್ರಿಕದ ಭವಿತವ್ಯ

**ಅನಾಗರಿಕ ಅಂಧಕಾರಮಯ ಆಫ್ರಿಕ ಖಂಡದಲ್ಲಿ ಬಿಳಿಯರ ಸ್ವಾರ್ಥ ಸಾಧಕ ನಾಗರಿಕತೆ ಪ್ರವೇಶವಾದುದರ ಕಹಿಫಲ ಇದೀಗ ಅನುಭವಕ್ಕೆ ಬರತೊಡಗಿದೆ. ಅಲ್ಲಿ ಬಿಳಿಯರು ಉಳಿಯಬೇಕಾದರೆ ಅವರ ಸ್ವಾರ್ಥ, ದರ್ಪ, ವರ್ಣದುರಭಿಮಾನ ತೊಲಗಬೇಕು. ಅದು ಸಾಧ್ಯವೆ?**

ಲೇಖಕರು: ಶ್ರೀ ಕು. ಶಿ. ಹರಿದಾಸ ಭಟ್ಟ, ಎಂ. ಎ.

ಪ್ರತಿ ಜಾಗತಿಕ ಸಮರವು ಮುಗಿಯುವಾಗಲೂ ಆ ಸಮರಕ್ಷೇತ್ರದ ಸರಹದ್ದಿನ ಸಮೀಪದಲ್ಲಿರುವ ಯಾವುವಾದರೂ ದೇಶಗಳಲ್ಲಿ ಪ್ರೇಕ್ಷಣೀಯ ಪರಿವರ್ತನೆಗಳೂ ಕ್ರಾಂತಿಗಳೂ ನಡೆಯುವುದು ಸ್ವಾಭಾವಿಕವಷ್ಟೆ. ಪ್ರಥಮ ಮಹಾಯುದ್ಧವು ಇನ್ನೇನು ಮುಗಿಯಿತು ಎನ್ನುವಾಗ ಪೂರ್ವ ಯುರೋಪ ಮತ್ತು ಮಧ್ಯಪ್ರಾಚ್ಯ (ಮುಖ್ಯವಾಗಿ ರಶಿಯಾ ಮತ್ತು ಟರ್ಕಿ ದೇಶ)ದಲ್ಲಿ ಅಲ್ಲೋಲಕಲ್ಲೋಲವಾಗಿ ಈ ಪ್ರದೇಶದಲ್ಲಿ ಹೊಸತಾಗಿ, ಹೊಸ ಬಗೆಯ ರಾಜಕೀಯ ಸಮತೋಲವು ಸ್ಥಾಪಿಸಲ್ಪಡಬೇಕಾಯಿತು. ರಶಿಯಾ ಮತ್ತು ಟರ್ಕಿ ಕ್ರಾಂತಿಯ ದಾರಿಯಲ್ಲಿ ಮುನ್ನಡೆದು ನೂತನ ಸಮಾಜದ ನಿರ್ಮಾಣಕ್ಕೆ ಆರಂಭಿಸಿದುವು. ಇರಾಕ, ಇರಾಣ ಮತ್ತು ಪೆಲೆಸ್ತೀನಗಳಲ್ಲಿ ಬ್ರಿಟಿಶರು ನವೀನ ಆಡಳಿತ ಕ್ರಮವನ್ನೋ ವರ್ಚಸ್ಸನ್ನೋ ರೂಢಿಸಿಕೊಳ್ಳಬೇಕಾಯಿತು. ದ್ವಿತೀಯ ಮಹಾಯುದ್ಧವು ಮುಗಿಯುವ ಹೊತ್ತಿಗೆ ಏಶಿಯಾದ ರಾಜಕೀಯ ಪರಿಸ್ಥಿತಿಯು ಐರೋಪ್ಯ ರಾಷ್ಟ್ರಗಳ ಕೈಮೀರುವಷ್ಟು ಹದಗೆಟ್ಟಿತು. ಆಗ್ನೇಯ ಏಶಿಯದಲ್ಲಿ ಈಗೊಂದೆರಡು ಶತಮಾನಗಳಿಂದ ಭದ್ರವಾಗಿ ಬೇರುಬಿಟ್ಟಿದ್ದ ಪಾಶ್ಚಾತ್ಯ ಸಾಮ್ರಾಜ್ಯವಾದಕ್ಕೆ ರಾಹು ಬಡೆಯಿತು. ಭಾರತ, ಪಾಕಿಸ್ತಾನ, ಬರ್ಮ, ಸಿಂಹಳ, ಇಂಡೋನೇಶಿಯಾ ಮುಂತಾದ ರಾಷ್ಟ್ರಗಳು ತಾವೇ ಸ್ವಾತಂತ್ರ್ಯ ಸಮರವನ್ನು ಯಶಸ್ವಿಯಾಗಿ ಕೊನೆಗೊಳಿಸಿ ಆಡಳಿತದ ಸೂತ್ರವನ್ನು ಸ್ವದೇಶೀಯರ ಕೈಗೆ ತಂದುಕೊಂಡವು. ದ್ವಿತೀಯ ಮಹಾಯುದ್ಧದ ಅಪ್ರತ್ಯಕ್ಷ ಪರಿಣಾಮವಾಗಿ ಸೃಷ್ಟಿಗೊಂಡ ಈ ನೂತನ ಜನಪದಶಕ್ತಿಗಳು ಪ್ರಪಂಚದ ಒಟ್ಟು ರಾಜಕೀಯದ ಮೇಲೆ ಬೀರುವ ವರ್ಚಸ್ಸು ದಿನೇ ದಿನೇ ಪ್ರಬಲವಾಗುತ್ತಿದೆ.

ಏಶಿಯದ ಸ್ವರಾಜ್ಯಸ್ಥಾಪನೆಯ ಪರಿಣಾಮವು ಅತಿ ವಿಶಿಷ್ಟವಾಗಿ ಬೀಳುವ ಇನ್ನೂ ಒಂದು ಭೂಖಂಡವಿದೆ. ಅದೇ ಆಫ್ರಿಕಾ. ಅಧಿಕಾರಲಂಪಟರಾದ ಬಿಳಿಜನರ ದಮನದಿಂದ ಇನ್ನೂ ಮುಕ್ತವಾಗದೆ ಆದಿವಾಸಿಗಳ ಹಲವು ಸಮಾಜಗಳನ್ನೊಳಗೊಂಡ ಈ 'ಅಂಧಕಾರದ ಖಂಡ' ದಲ್ಲಿ ಪಾಶ್ಚಾತ್ಯರು ನಡೆಸುತ್ತಿದ್ದ ರಾಜ್ಯವ್ಯವಸ್ಥೆಯು ಕರಿಜನರ ವಿರೋಧದಿಂದಾಗಿ ಈಗೀಗ ಶಿಥಿಲವಾಗುತ್ತಿದೆ. ಸಾಮ್ರಾಜ್ಯವಾದದ ಲಾಲಸೆ, ಬಿಳಿಜನ—ಕರಿಜನರೆಂಬ ವರ್ಣಭೇದದಿಂದ ಉತ್ಪನ್ನವಾಗುವ ವರ್ಣದ್ವೇಷದ ಸಂಕರ, ಪಾಶ್ಚಾತ್ಯರ ಗತಿಶೀಲ ನಾಗರಿಕತೆಯ ಆಘಾತಕ್ಕೆ ಇದಿರುನಿಂತು ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಶಕ್ತಿ ಇಲ್ಲದ ಪ್ರಾಚೀನ ಆದಿವಾಸಿಗಣ(Tribes),ಔದ್ಯಮಿಕ ಕೇಂದ್ರಗಳಿಗೆ ತೆರಳಿ ಅಲ್ಲಿ ಬಿಳಿ ಮಾಲಕರು ಕೊಡುವ ದಿನಕೂಲಿಗೆ ಕೈಯೊಡ್ಡುವ ಕರಿಜನರಲ್ಲಿ ಕ್ರಮಶಃ ವ್ಯಾಪಿಸುತ್ತಿರುವ ಕಮ್ಯುನಿಸ್ಟ ಭಾವನೆಗಳು, ಆಫ್ರಿಕದ ಬೇರೆ ಬೇರೆ ಭಾಗಗಳಲ್ಲಿ ನಡೆಯುತ್ತಿರುವ ವಿಧವಿಧವಾದ ದಬ್ಬಾಳಿಕೆ ಒಟ್ಟಿನಲ್ಲಿ ವಸಾಹತು ನೀತಿ (Colonialism) ಯ ಪರಮಾವಧಿ ದುಷ್ಪರಿಣಾಮವನ್ನು ಕಾಣಬೇಕಾದರೆ ನಾವು ಆಫ್ರಿಕವನ್ನು ಜ್ಞಾಪಿಸಿಕೊಳ್ಳಬೇಕಾಗುತ್ತದೆ. ಈಚೆಗೆ ಬ್ರಿಟನಿನ ಒಂದು ಟ್ರೇಡ್‌ಯೂನಿಯನ್ ಸಮ್ಮೇಳನವು ತನ್ನ ಸರಕಾರದ ಆಫ್ರಿಕಾ ನೀತಿಯನ್ನು ತೀವ್ರವಾಗಿ ಖಂಡಿಸಿತು: (೧) ಬ್ರಿಟಿಶರ ಆಡಳಿತದಲ್ಲಿರುವ ಕೆನ್ಯಾದಲ್ಲಿ ನೂರಕ್ಕೆ ೯೭ ರಷ್ಟು ಜನ ಆಫ್ರಿಕನರಾದರೂ ಅವರ ರಾಷ್ಟ್ರೀಯ ಆದಾಯದಲ್ಲಿ ಅರ್ಧಕ್ಕಿಂತ ಹೆಚ್ಚನ್ನು ಬ್ರಿಟಿಷರು ಸೂರೆ ಮಾಡುತ್ತಿದ್ದಾರೆ. (೨) ಆಫ್ರಿಕದ ಕೆಲಸಗಾರನ ವಾರ್ಷಿಕ ವರಮಾನದ ಹತ್ತು ಪಟ್ಟು ಹಣವನ್ನು ಬ್ರಿಟಿಷರು ಅಲ್ಲಿನ ಜೈಲರುಗಳಿಗೆ ಭತ್ತೆಯ ರೂಪದಲ್ಲಿ ಕೊಡುತ್ತಾರೆ. (೩) ಉತ್ತರ ರ್‍ಹೊಡೇಶಿಯದ ಸಂಪತ್ತಿನ ೧/೩ ಅಂಶವು ಬ್ರಿಟನಿನ ಜನರ ಪಾಲಾಗುವದು ಶುದ್ಧ ದರೋಡೆಯಲ್ಲದೆ ಬೇರೇನು? (೪) ಆಫ್ರಿಕದ ವಸಾಹತುಗಳಲ್ಲಿ ಹುಟ್ಟಿದ ಸಾವಿರ ಮಕ್ಕಳಲ್ಲಿ ೪೦೦ ಮೃತ್ಯುವಶವಾಗುವವು. (೫) ಬ್ರಿಟನು ಈಗ ೨೦೦ ವರ್ಷಗಳಿಂದ ಈ ವಸಾಹತುಗಳ ಜೀವ ಹಿಂಡಿ ತನ್ನ ಜೀವಧಾರಣೆ ಮಾಡಿಕೊಂಡಿದೆ.

## ಉತ್ತರಧ್ರುವ-ದಕ್ಷಿಣಧ್ರುವ

ಈ ಟೀಕೆಗಳಲ್ಲಿ ಎಡಪಕ್ಷದವರ ಉತ್ಪ್ರೇಕ್ಷೆಯ



ಅಂಶವು ಸ್ವಲ್ಪ ಮಟ್ಟಿಗೆ ಇರುವುದು ಸಹಜವಾ ದರೂ ಆಫ್ರಿಕಾ ಖಂಡದಲ್ಲಿರುವ ಬಿಳಿಯರ ಸರ ಕಾರಗಳು ಅಲ್ಲಿನ ಜನರಿಗೂ ಸರಕಾರಕ್ಕೂ ನಡುವೆ ಉತ್ತರಧ್ರುವ-ದಕ್ಷಿಣಧ್ರುವದಷ್ಟು ಅಂತರವನ್ನು ಕಲ್ಪಿಸಿರುವುದು ನಿಜವಾಗಿದೆ. ಇಡಿ ಆಫ್ರಿಕದಲ್ಲಿ ಕೇವಲ ನಾಲ್ಕು ರಾಜ್ಯಗಳಲ್ಲಿ ಆಫ್ರಿಕನರ ಸ್ವದೇಶಿ ರಾಜ್ಯವು ನಡೆಯುತ್ತಿದೆ. ಅಬಿಸೀನಿಯಾ, ಇಜಿಪ್ಟ, ಲಿಬೇರಿಯಾ, ಲಿಬಿಯಾ ಈ ದೇಶಗಳಲ್ಲಿ ಆಫ್ರಿಕ ನರೇ ರಾಜ್ಯವಾಳುತ್ತಿದ್ದಾರೆಂಬುದು ನಿಜವಾದರೂ ಅಲ್ಲಿಯೂ ಬಿಳಿಯರ ರಾಜಕೀಯ ವರ್ಚಸ್ಸು ಅಪರಿಮಿತವಾಗಿದೆ. ಈ ನಾಲ್ಕು ಉತ್ತರದ ರಾಜ್ಯ ಗಳನ್ನು ಬಿಟ್ಟರೆ ಉಳಿದ ವಿಸ್ತಾರವಾದ ಭಾಗ ವನ್ನು ಫ್ರಾನ್ಸ, ಬೆಲ್ಜಿಯಮ್, ಪೋರ್ಚುಗಲ್, ಸ್ಪೈಯಿನ್ ಮತ್ತು ಬ್ರಿಟನದಿಂದ ಬಂದ ಬಿಳಿ ಜನರು ಆಳುತ್ತಿದ್ದಾರೆ. ಆಫ್ರಿಕಾ ಖಂಡದ ಜನ ಸಂಖ್ಯೆ ೨೦ ಕೋಟಿ. ಅಲ್ಲಿರುವ ಬಿಳಿಯರ ಒಟ್ಟು ಸಂಖ್ಯೆ ಸುಮಾರು ೨೦ ಲಕ್ಷ. ಕೇವಲ ಪಾಶವೀ ಶಕ್ತಿಯ ಆಧಾರದಿಂದ ಕರಿಜನರ ಖಂಡದಲ್ಲಿ ಇದುತನಕ ಬಿಳಿಯರ ಸಾಮ್ರಾಜ್ಯವು ನಡೆಯಿತು. ಆದರೆ ಇನ್ನು ಮುಂದೆ ನಡೆಯುವುದು ಕಷ್ಟತರ ವಾಗುವುದೆಂದು ಪಾಶ್ಚಾತ್ಯ ಪ್ರಭುಗಳಿಗೇ ಮನ ವರಿಕೆಯಾಗಿದೆ. ದ್ವಿತೀಯ ಮಹಾಯುದ್ಧವು ಐರೋಪ್ಯ ಜನರ ರಾಜಕೀಯ ಸ್ವಾರ್ಥಕ್ಕೆ ಪ್ರಪಂಚದ ಹಲವು ಪ್ರದೇಶಗಳಲ್ಲಿ ಅಪಾರವಾದ ಹಾನಿಯನ್ನು ತಂದೊಡ್ಡಿದೆ. ಆಸ್ಟ್ರೈಕಿ ನಾಕರಿಕತೆಯ ತೀರ ನಿಮ್ನ ಹಂತದಲ್ಲಿರುವ ಆಫ್ರಿ ಕವೂ ಬಂಡೇಳುವ ಚಿಹ್ನೆ ತೋರಿಬಂದುದು ವಸಾಹತು ರಾಜ್ಯಗಳ ದುರ್ದಶೆಗೆ ಸೂಚನೆಯಾ ಗಿದೆ.

ಆಫ್ರಿಕದಲ್ಲಿ ಸರ್ವತ್ರ ರಾಷ್ಟ್ರೀಯತ್ವವು ನಿದ್ರೆಯಿಂದ ಎಚ್ಚತ್ತಿದೆ. ನಗರಗಳ ಕಾರ್ಮಿಕ ವರ್ಗದಲ್ಲಿ ಕಮ್ಯೂನಿಷ್ಟ ಬೀಜವು ಮೊಳೆಯು ತ್ತಿದೆ. ಸಾಮ್ರಾಜ್ಯವಾದದ ವಿರುದ್ಧ ಹೋರಾಡಲು ಆಫ್ರಿಕದ ದಲಿತ ಜನರ ಕ್ರೋಧವು ಕನಲಿ ವಿದ್ರೋಹದಲ್ಲಿ ಪರಿಣತವಾಗುತ್ತಿದೆ. ಉದಾ :— ಬಮಂಗ್ವಾಟೋ ಪಂಗಡದ ಮುಖ್ಯಸ್ಥನ ಪ್ರಶ್ನೆ, ಏಶಿಯಾದ ಜನರು ಕರಿ ಜನರೊಡನೆ ಸೇರಿ ಬಿಳಿ ರಂಗವನ್ನು ನಿರ್ಮಾಣ ಮಾಡಿ ದಕ್ಷಿಣ ಆಫ್ರಿಕದಲ್ಲಿ ಹೋರಾಟಕ್ಕೆ ಅಣಿಯಾಗಿರುವುದು, ಕೆನ್ಯಾದಲ್ಲಿ ಈಚೆಗೆ ಎದ್ದ ಅತಿ ಭಯಂಕರವಾದ ಮೌ ಮೌ ಚಳವಳಿ—ಇವನ್ನೆಲ್ಲ ನೋಡುವಾಗ ಪಾಶ್ಚಾತ್ಯರು ಇನ್ನು ಹೆಚ್ಚು ಕಾಲ ಆಫ್ರಿಕದಲ್ಲಿ ದರ್ಬಾರ ನಡೆಸ ಲಾರರೆಂದು ತೀರ್ಮಾನಿಸಬೇಕಾಗುತ್ತದೆ. ಅಲ್ಲದೆ ದಕ್ಷಿಣ ಆಫ್ರಿಕದ ಯೂನಿಯನ್ ಸರಕಾರದ ವರ್ಣ ನೀತಿಯ ವಿರುದ್ಧ ಇಡಿ ಜಾಗತಿಕ ಅಭಿ ಪ್ರಾಯವೇ ಕೋಪಿಸಿರುವುದನ್ನು ವಿಶ್ವಸ್ತ ಮಂಡ ಲದ ಹಲವಾರು ನಿರ್ಣಯಗಳಿಂದ ತಿಳಿಯ ಬಹುದು.

ಐರೋಪ್ಯರಲ್ಲೇ ವಿವೇಕಿಗಳೂ ಪ್ರಪಂಚದ ಭವಿತವ್ಯದ ಬಗ್ಗೆ ಆಸಕ್ತಿಯುಳ್ಳವರೂ ಧರ್ಮವಂತರೂ ಆದ ರೆವರೆಂಡ್ ಮೈಕೆಲ್ ಸ್ಕಾಟ್ ಮತ್ತು ಡಾ. ಆಲ್ಬರ್ಟ್ ಶ್ವಯಿಟ್ಸರ ಅಂಥ ಮಹನೀಯರು ಐರೋಪ್ಯ ಜನಾಂಗದ ಅವಿಚಾರವನ್ನು ನಿರ್ಭಯವಾಗಿ ಜಾಹೀರುಗೊಳಿಸಿದ್ದಾರೆ. ರೆ. ಮೈಕೆಲ್ ಸ್ಕಾಟ್ ಅವರು, ಡಾ|| ಮಾಲನ್ ಅನ್ಯಾಯವಾಗಿ ರಾಜ್ಯಭಾರ ಮಾಡುತ್ತಿರುವ ನೈಋತ್ಯ ಆಫ್ರಿಕದ ಹೆರೆರ್ಯೊ ಎಂಬ ಒಂದು ಆದಿವಾಸಿ ಪಂಗಡದ ಜನ್ಮಸಿದ್ಧ ಮಣ್ಣಿನ ಹಕ್ಕಿಗಾಗಿ ಸಂಯುಕ್ತ ರಾಷ್ಟ್ರ ಸಂಘದಲ್ಲಿ ಹೋರಾಡಿದ್ದಾರೆ. ಡಾ|| ಆಲ್ಬರ್ಟ್ ಶ್ವಯಿಟ್ಸರ ಅವರು ಈಗ ನಲ್ವತ್ತು ವರ್ಷಗಳಿಂದ ಆಫ್ರಿಕದ ಕಗ್ಗಾಡಿನಲ್ಲಿ ಒಂದು ಆಸ್ಪತ್ರೆಯನ್ನು ನಡೆಸಿಕೊಂಡು ಆಫ್ರಿಕದಲ್ಲಿ ಐರೋಪ್ಯರ ದುಷ್ಕೃತ್ಯಗಳಿಗೆ ಪ್ರಾಯಶ್ಚಿತ್ತ ಮಾಡುವ ಭಾವನೆಯಿಂದ ಧರ್ಮಜೀವನವನ್ನು ನಡೆಯಿಸುತ್ತಿದ್ದಾರೆ. ವಸಾಹತು ಸಾಮ್ರಾಜ್ಯದ ಅನೀತಿಯನ್ನು, ಕ್ರೌರ್ಯವನ್ನು ಪ್ರಪಂಚದಲ್ಲೆಲ್ಲ ಪ್ರಕಟಪಡಿಸುವ ವ್ಯಕ್ತಿತ್ವವುಳ್ಳ ಈ ಇಬ್ಬರು ಮಹನೀಯರಿಂದಾಗಿ ಐರೋಪ್ಯರು ಧೈರ್ಯ ಕುಂದುವಂತಾಗಿದೆ. ನಗರಗಳಲ್ಲೇನೋ ಕಮ್ಯೂನಿಸ್ಟ ವಿಚಾರಗಳಿಗೆ ಸಾಕಷ್ಟು ಅವಕಾಶವಿರುವುದಾದರೂ ಆಫ್ರಿಕದಲ್ಲಿ ಕಮ್ಯೂನಿಸ್ಟ ಚಳವಳಿಯು ಸರ್ವವ್ಯಾಪಿಯಾಗಿ ಇರುವುದಿಲ್ಲ. ಹೀಗೆಂದು ಕೈಕಟ್ಟಿ ಕೂಡುವುದು ಅಪಾಯಕ್ಕೆ ಆಮಂತ್ರಣ ಕೊಟ್ಟಂತೆಯೇ ಸರಿ. ಏಕೆಂದರೆ ಆಚರಣೆಯಲ್ಲಿ ಹೇಗಿದ್ದರೂ ತತ್ತ್ವಶಃ ಕಮ್ಯೂನಿಸ್ಟರ ಬತ್ತಳಿಕೆಯಲ್ಲಿರುವ 'ಸ್ವನಿರ್ಣಯಾಧಿಕಾರ' (Self determination of Nationalities) ತತ್ತ್ವವು ಆಫ್ರಿಕದ ಜನರನ್ನು ಮೋಹಿಸುವುದರಲ್ಲಿ ಸಂಶಯವಿಲ್ಲ.

## ಇನ್ನೂ ಮುಗಿಯದ ಕ್ರಾಂತಿ

ಈಗ ನೂರು ವರ್ಷಗಳಿಂದ ಬಿಳಿ ಜನರು ಮಾಡಿದ ರಾಜ್ಯಭಾರದಿಂದಾಗಿ ಆಫ್ರಿಕದ ಜನಾಂಗ ಜೀವನದಲ್ಲಿ ಒಂದು ವಿಶಿಷ್ಟವಾದ ಕ್ರಾಂತಿಯೇ ಸಂಘಟಿಸಿರುತ್ತದೆ. ನಮ್ಮ ದೇಶದಲ್ಲಾಗಲಿ ಏಶಿಯದಲ್ಲಾಗಲಿ ಪಾಶ್ಚಾತ್ಯ ಸಂಪರ್ಕದಿಂದ ಹಲಕೆಲವು ಮಾರ್ಪಾಟುಗಳುಂಟಾಗಿರಬಹುದಾದರೂ ನಮ್ಮಲ್ಲಿ ಆಫ್ರಿಕದಂತೆ ಜೀವನವು ಸಮೂಲವಾಗಿ ಪರಿವರ್ತನೆಗೊಳ್ಳಲಿಲ್ಲ. ಇದಕ್ಕೆ ಕಾರಣ ಏಶಿಯದ ಸನಾತನ ನಾಗರಿಕತೆ. ಆಫ್ರಿಕದ ನಾಗರಿಕತೆಯ ಮಟ್ಟವು ಐರೋಪ್ಯ ನಾಗರಿಕತೆಗಿಂತ ಎಷ್ಟೋ ಕೆಳ ದರ್ಜೆಯದು. ಎರಡು ನಾಗರಿಕತೆಗಳಲ್ಲಿ ಈ ಬಗೆಯ ಅಂತರವಿದ್ದಾಗ ಅವುಗಳ ಸಂಪರ್ಕದಿಂದ ಉಂಟಾಗುವ ಬದಲಾವಣೆಗಳು ಒಂದು ಪರಿಣಾಮವನ್ನು ಮುಟ್ಟಬೇಕಾದರೆ ಐರೋಪ್ಯರು ಇನ್ನೂ ಸ್ವಲ್ಪ ಕಾಲ ಆಫ್ರಿಕದಲ್ಲಿ ನೆಲಸಿರಬೇಕಾದ ಪ್ರಮೇಯವಿದೆ. ಪಶ್ಚಿಮದ ರಾಜಕೀಯ ಪ್ರಭಾವವು ಒಮ್ಮಿಂದೊಮ್ಮೆ ಕಡಿದುಹೋದಲ್ಲಿ ಆಫ್ರಿಕದಲ್ಲಿ ಯಾವ ಬಗೆಯ ರಾಜಕೀಯ ಸಮತೋಲವು ಉಂಟಾದೀತೆಂದು ಹೇಳಬರುವಂತಿಲ್ಲ. ಆಫ್ರಿಕದ ಸಮಾಜವಾದರೂ ಏನು ಒಂದೇ ಎರಡೇ? ವಿಶ್ವರೂಪಿ. ಆದಿನಿವಾಸಿಗಳ ನಾನಾ ಪ್ರಕಾರಗಳನ್ನುಳ್ಳ ಆಫ್ರಿಕವು ಒಂದು ಜೀವಂತ ವಸ್ತುಸಂಗ್ರಹಾಲಯದ ಹಾಗೆ ಇದೆ. ಹಸಿಮಾಂಸವನ್ನು ತಿನ್ನುವ ಕಾಡುಜನರಿಂದ ತೊಡಗಿ ಅಮೇರಿಕನ್ ಕಾರುಗಳಲ್ಲಿ ಅಡ್ಡಾಡುವ ಪದವೀಧರ ಕರಿಜನರ ವರೆಗಿನ ನಾಗರಿಕತೆಯ ಮೆಟ್ಟಲುಗಳನ್ನೂ ಅಲ್ಲಿ ಗುರುತಿಸಬಹುದು. ಈ ವೈಶಿಷ್ಟ್ಯಗಳನ್ನು ಏಕಸೂತ್ರದಲ್ಲಿ ಪೋಣಿಸುವ ಬಗೆ ಹೇಗೆ? ರಾಷ್ಟ್ರೀಯತ್ವದ ಭಾವನೆಯು ಈ ಕೆಲಸವನ್ನು ಯಶಸ್ವಿಯಾಗಿ ನಿರ್ವಹಿಸಬಲ್ಲುದೆ? ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಸುಲಭವಲ್ಲ. ಆಫ್ರಿಕದ ರಾಜಕೀಯವು ಒಂದು ಧಾತುವಿನಲ್ಲಿ ನಿಲ್ಲದೆ ಯಾವ ನಿರ್ದಿಷ್ಟ ಪರಿಹಾರದಿಂದಲೂ ಕ್ಷೇಮವಿಲ್ಲವೆಂಬುದು ಖಂಡಿತ. ಅಲ್ಲದೆ ಇಡಿಯ ಆಫ್ರಿಕಾ ಖಂಡಕ್ಕೆ ಒಂದೇ ಪರಿಹಾರವನ್ನು ಸೂಚಿಸಿಯೂ ಉಪಯೋಗವಿಲ್ಲ. ಏಕೆಂದರೆ ಪಾಶ್ಚಾತ್ಯರ ಆಳಿಕೆಯಲ್ಲಿ ಅಲ್ಲಿ ನಡೆದ ಬದಲಾವಣೆಗಳು ಎಲ್ಲ ಕಡೆಯೂ ಒಂದೇ ಬಗೆಯಾಗಿಲ್ಲ.

ರಾಜಕೀಯ ಬೆಳವಣಿಗೆಯ ದೃಷ್ಟಿಯಿಂದ ಆಫ್ರಿಕವನ್ನು ಮೂರು ಭಾಗಗಳಾಗಿ ವಿಂಗಡಿಸುತ್ತಾರೆ. (೧) ಭೂಮಧ್ಯ ಸಮುದ್ರದ ಕರೆಯಲ್ಲಿರುವ ಪ್ರದೇಶಗಳು (೨) ಪಶ್ಚಿಮ ಅಥವಾ ಅಟ್ಲಾಂಟಿಕ ಕರಾವಳಿಯಲ್ಲಿರುವ ರಾಜ್ಯಗಳು (೩) ಪೂರ್ವ ಆಫ್ರಿಕ ಅಥವಾ ಹಿಂದು ಮಹಾಸಾಗರದ ಕರಾವಳಿಯಲ್ಲಿರುವ ರಾಜ್ಯಗಳು. ಭೂಮಧ್ಯ ಸಮುದ್ರ ತೀರದ ಆಫ್ರಿಕದಲ್ಲಿರುವ ಇಜಿಪ್ತ ಮತ್ತು ಸುಡಾನಿನಲ್ಲಿ ಬ್ರಿಟಿಶರ ಉಳಿಕೆಯು ಇತ್ತೀಚೆಗೆ ಕೊನೆಗಂಡಿತು. ಲಿಬಿಯವು ವಿಶ್ವ ಸಂಸ್ಥೆಯ ಸಹಕಾರದಿಂದ ಸ್ವತಂತ್ರವಾಯಿತು. ಟ್ಯುನಿಶಿಯವು ಕೂಡ ಫ್ರೆಂಚರ ಕೈಬಿಡುವುದರಲ್ಲಿದೆ. ಹೀಗೆ ಆಫ್ರಿಕದ ಈ ಮುಸ್ಲಿಮ ವಲಯವು ಐರೋಪ್ಯರ ಕೈಯಿಂದ ಪಾರಾಯಿತು. ಎನ್ನಬಹುದು. ಆಫ್ರಿಕದ ಅಟ್ಲಾಂಟಿಕ ಕರೆಯ ಭಾಗದಲ್ಲಿ ದಟ್ಟವಾದ ವಿಷುವದ್ರೇಖೆಯ ಕಾಡುಗಳೂ ಉಷ್ಣವಾದ ಹವೆಯೂ ಇರುವದರಿಂದ ಇಲ್ಲಿ ಬಿಳಿಯರು ಬಹು ಸಂಖ್ಯೆಯಲ್ಲಿ ವಸತಿ ಹೂಡುವಂತೆ ಇಲ್ಲ. ವಿಮಾನ ಯುಗವು ಬಂದ ಮೇಲೆಯೇ ಈ ಪ್ರದೇಶದ ಒಳನಾಡಿನ ಪರಿಚಯವು ಸರಿಯಾಗಿ ಆಯಿತು. ಒಂದೆರಡು ಗನಿಗಳ ಸಲುವಾಗಿಯೂ ಕೊಕ್ಕೋ ಮತ್ತು ಇತರ ಅರಣ್ಯ ಉತ್ಪತ್ತಿಗಳ ಸಲುವಾಗಿಯೂ ಐರೋಪ್ಯರು ಇಲ್ಲಿ ಮನಸ್ಸಿಲ್ಲದ ಮನಸ್ಸಿನಿಂದ ಸರಕಾರ ನಡೆಸುವಂತಿದೆ. ಪ್ರಪಂಚದಲ್ಲೇ ಈ ಭಾಗವು ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ಹಿಂದಸಾಗರದ ಕರಾವಳಿಯಲ್ಲಿರುವ ಭೂಪ್ರದೇಶದಲ್ಲಿ ಹೆಚ್ಚಿನಂಶ ಬ್ರಿಟಿಷರ ವಸಾಹತುಗಳು. ದಕ್ಷಿಣದಲ್ಲಿ ದಕ್ಷಿಣಆಫ್ರಿಕದ ಯೂನಿಯನ್ ರಾಜ್ಯವಿದೆ. ಈ ಪ್ರದೇಶದಲ್ಲಿ ರಾಜಕೀಯ ವರ್ಚಸ್ಸನ್ನು ಬೀರಲು ಬ್ರಿಟಿಷರೂ ಡಾ. ಮಾಲನ್ ಅವರ ಪಕ್ಷದವರೂ ಪರಸ್ಪರ ಪ್ರತಿಸ್ಪರ್ಧಿಸುತ್ತಾರೆ. ಈ ಪ್ರತಿಸ್ಪರ್ಧೆಯ ಪರಿಣಾಮವನ್ನವಲಂಬಿಸಿ ಆಫ್ರಿಕದ ಬೆಳವಣಿಗೆ ನಡೆಯಬೇಕು. ಡಾ ಮಾಲನ್ ಗೆದ್ದರೆ ಆಫ್ರಿಕದಲ್ಲಿ ಭಯಂಕರವಾದ ವಿಸ್ಫೋಟವು ಜರುಗುವುದರಲ್ಲಿ ಸಂದೇಹವಿಲ್ಲ. ಇದಕ್ಕೆ ಬೇಕಾಗುವ ಎಲ್ಲ ಸನ್ನಿವೇಶಗಳೂ ಸಿದ್ಧವಾಗಿ ನಿಂತಹಾಗಿದೆ ಈ ವಲಯದಲ್ಲಿ. ಅತ್ಯಭಿಮಾನದಿಂದ ಮೆರೆಯುವ ಯುರೋಪಿಯನ ಜನರು, ಆಫ್ರಿಕದ ದಲಿತ ಕರಿ ಜನರ ಸಮುದಾಯ, ಕೂಲಿಗೂ ವ್ಯಾಪಾರಕ್ಕೂ ಒಂದು ನೆಲಸಿದ ಏಶಿಯದ ಸುಸಂಸ್ಕೃತ ಜನರು ಈ ಮೂರು ಸಂಗಡಗಳ ನಡುವೆ ಸೆಣಸಾಟವು ನಡೆಯುತ್ತಿದೆ. ಬುದ್ಧಿವಂತರಾದ ಏಶಿಯದ ಜನರ ವಿರುದ್ಧ ಕರಿ ಜನರನ್ನು ಎತ್ತಿಕಟ್ಟುವ, 'ಒಡೆದು ಆಳುವ' ನೀತಿಯನ್ನು ಬ್ರಿಟಿಷರು ಈಗ ಅನುಸರಿಸುತ್ತಿದ್ದಾರೆ. ಆದರೆ ದಕ್ಷಿಣ ಆಫ್ರಿಕದಲ್ಲೇ ಆಗಲಿ, ಕೆನ್ಯಾದಲ್ಲಾಗಲಿ ಈ ಉಪಾಯವು ಫಲಿಸಿದಂತೆ ಕಾಣುವದಿಲ್ಲ. ಅಲ್ಲಿ ಇಲ್ಲಿ ಏಶಿಯದ ವ್ಯಾಪಾರಿಗಳ ಮೇಲೆ ಕರಿ ಜನರು ದಾಳಿ ಮಾಡಿದ ಉದಾಹರಣೆಗಳಿರಬಹುದಾದರೂ ಈ ವರೆಗೆ ಏಶಿಯದವರ ಜತೆಗೂಡಿಯೇ ಕರಿ ಜನ ಬಿಳಿಯರ ಮೇಲೆ ಬಂಡೆದ್ದಿದ್ದಾರೆ. "ಆಫ್ರೇಶಿಯನರು" [ಆಫ್ರಿಕ ಮತ್ತು ಏಶಿಯದವರು] ಎಂಬ ಹೊಸ ಪದವೂ ಈಗ ಅಲ್ಲಿ ರೂಢಿಗೆ ಬಂದಿದೆ.

## ಬಹು ಸಮಾಜಗಳು

ಆಫ್ರಿಕದ ಮೂಲನಿವಾಸಿಗಳಲ್ಲಿ ಹಲವಾರು ಸಂಗಡಗಳಿವೆ ಎಂದೂ ಇವುಗಳ ನಾಗರಿಕತೆಯಲ್ಲಿ ವಿಪುಲ ವೈವಿಧ್ಯವಿದೆಯೆಂದೂ ಈ ಮೊದಲು ಸೂಚಿಸಿದೆವು. 'ನಿಗ್ರೋ' ಎಂದು ನಾವು ಸಮಗ್ರವಾಗಿ ಕರೆಯುವ ಜಾತಿಯಲ್ಲಿ ಬುಶ್‌ಮ್ಯಾನ ಮತ್ತು ಹೊಟೆಂಟೊಟ್ ಎಂಬ ಮುಖ್ಯ ಎರಡು ಭೇದಗಳಿವೆ. ಅಲ್ಲದೆ ಇವುಗಳೊಳಗೆ ಇನ್ನೂ ಅನೇಕ ಉಪವರ್ಗಗಳಿವೆ. ಇವು ಒಂದರೊಡನೊಂದು ಬೆರೆಯುವದು ಅಪೂರ್ವ. ಬಿಳಿಯರು ಹೇಗೂ ಕರಿಜನರಿಂದ ದೂರದಲ್ಲಿ, ಎತ್ತರದಲ್ಲಿ ಇರತಕ್ಕವರು. ಆದುದರಿಂದ ಆಫ್ರಿಕವು ಬಹುಸಮಾಜಗಳುಳ್ಳ ಜನಪದ (Plural Society) ಎಂದು ಕರೆಯಲ್ಪಡುತ್ತದೆ. ಈ ವರ್ಗೋಪವರ್ಗಗಳ ನಡುವೆ ಕೊಡುಬಳಕೆ ಇಲ್ಲದಿರುವದರಿಂದಲೂ ಯಥಾರ್ಥವಾಗಿ ಅವುಗಳ ಸಂಸ್ಕೃತಿ, ಧರ್ಮ, ಜನಾಂಗ ಮತ್ತು ಭಾಷೆ ಬೇರೆಬೇರೆಯಾಗುವದರಿಂದಲೂ

ರಾಷ್ಟ್ರದ ಭಾವನೆಗಿಂತಲೂ ಗುಂಪಿನ ಅಥವಾ ಕೋಮುವಾರು ಭಾವನೆಗೆ ಆಫ್ರಿಕದಲ್ಲಿ ಹೆಚ್ಚಿನ ಪ್ರಾಶಸ್ತ್ಯವಿರುತ್ತದೆ. ಹಲಬಗೆಯ ನ್ಯೂನಾತಿರೇಕಗಳುಳ್ಳ ಆಫ್ರಿಕದ ಆದಿವಾಸಿ ಸಮಾಜವನ್ನು ಆಳುವ ಸರಕಾರವು ವಾಸ್ತವವಾಗಿ ಕೃತ್ರಿಮ ಸನ್ನಿವೇಶವೇ ಸರಿ. ಅದರಲ್ಲಿಯೂ ಉಚ್ಚಾಧಿಕಾರದಲ್ಲಿ ಒಬ್ಬನೇ ಒಬ್ಬ ಆಫ್ರಿಕನ ಮನುಷ್ಯನಿಲ್ಲದೆ ಕೇವಲ ಬಿಳಿಯರಿಂದ ನಡೆಸಲ್ಪಡುವ ರಾಜ್ಯಭಾರವು ಆಭಾಸವೆಂದೇ ಹೇಳಬೇಕಾಗುತ್ತದೆ. ತಮ್ಮ ಮೇಲೆ ನಡೆಯುವ ಸರಕಾರದ ಅಸ್ವಾಭಾವಿಕತೆಯೂ ಆಭಾಸವೂ ಟೊಳ್ಳು-ಗಟ್ಟಿಯೂ ಯಾವಾಗ ಆಫ್ರಿಕದ ಮೂಕಜನತೆಗೆ ಸಂಪೂರ್ಣವಾಗಿ ಅರಿವಾಗುವದೋ ಅಂದು ಐರೋಪ್ಯರ ಪ್ರಭಾವವು ನಾಮಾವಶೇಷವಾಗುವುದರಲ್ಲಿ ಸಂದೇಹವಿಲ್ಲ. ವಿಶ್ವದ ರಾಜಕೀಯ ಪರಿಸ್ಥಿತಿಯು ಇದ್ದ ಹಾಗೇ ಇದ್ದರೆ ಇಂಥ ಅರಿವು ಸರ್ವಪ್ರಚುರವಾಗಲು ಸ್ವಲ್ಪ ಕಾಲ ಹಿಡಿದೀತು. ಅಥವಾ ಮೂರನೆಯ ವಿಶ್ವಯುದ್ಧದ ಪ್ರಖರವಾದ ಬೆಳಕಿನಿಂದಾಗಿ ಅಂಧಕಾರದ ಖಂಡದಲ್ಲಿ ಒಮ್ಮೆಲೆ ಸ್ವಾತಂತ್ರ್ಯದ ಬೆಳಕು ಮೂಡೀತು. ಎಂದಿನ ವರೆಗೆ ಆದಿವಾಸಿಗಳು ತಮ್ಮ ಸಮಾಜದ ಪರಂಪರಾಗತ ಕಟ್ಟುಪಾಡುಗಳಿಗೆ ಅಧೀನರಾಗಿ ನಡೆಯುವರೋ ಅಂದಿನ ವರೆಗೆ ಐರೋಪ್ಯರ ಆಳಿಕೆ ನಡೆಯುವದಕ್ಕೆ ಕಷ್ಟ ಬರಲಾರದು. ಆದರೆ ಪಾಶ್ಚಾತ್ಯರ ಆರ್ಥಿಕ ವರ್ಚಸ್ಸಿಗೆ ಒಳಗಾದ ಈ ಸಮಾಜಗಳಲ್ಲಿ ಸಂಪ್ರದಾಯದ ಬಂಧನವು ಶಿಥಿಲವಾಗುತ್ತಿದೆ. ಆಫ್ರಿಕನ್ ಸಮಾಜವು ಛಿನ್ನವಿಚ್ಛಿನ್ನವಾಗುತ್ತಿದೆ. ಸಮಾಜಗಳನ್ನು ಧಾರಣೆಮಾಡಿದ್ದ ಪ್ರಾಚೀನ ತತ್ವಗಳ ಸ್ಥಾನದಲ್ಲಿ ಹೊಸ ಸಾಮಾಜಿಕ ಮತ್ತು ರಾಜನೈತಿಕ ಮೌಲ್ಯಗಳು ಆದೇಶವಾಗುವ ತನಕ ಆಫ್ರಿಕದಲ್ಲಿ— ಐರೋಪ್ಯರು ಇರಲಿ ತೊಲಗಲಿ, ಅವ್ಯವಸ್ಥೆ, ಬಿಕ್ಕಟ್ಟು ತಪ್ಪಿದ್ದಲ್ಲ.

ಆಫ್ರಿಕದ ದಾರಿದ್ರ್ಯ, ಅನಾರೋಗ್ಯ, ಅಜ್ಞಾನಗಳಿಗೆಲ್ಲಕ್ಕೂ ಐರೋಪ್ಯರು ಮೂಲಕಾರಣರಲ್ಲವೆಂಬುದು ನಿಜವಾದರೂ ಅವರಿಂದಾಗಿ ಈ ಬೇನೆಗಳು ಉಲ್ಬಣಿಸಿರುವುದನ್ನೂ ಬೇನೆಯ ಅರಿವು ಆಫ್ರಿಕದ ನಿವಾಸಿಗಳ ಮನಸ್ಸಿಗೆ ಬಂದುದನ್ನೂ ಒಪ್ಪಬೇಕಾಗುತ್ತದೆ. ಆಫ್ರಿಕದ ಸಂಪತ್ತನ್ನು ಬೆಳೆಸುವ ನೆಪದಿಂದ ಅದರ ಹೆಚ್ಚಿನ ಪಾಲನ್ನು ಯುರೋಪಿಗೆ ಒಯ್ಯುವ, ಆಫ್ರಿಕದ ವ್ಯಾಪಾರವನ್ನು ಇಂಗ್ಲಂಡಿನ ಹಿತಕ್ಕೋಸ್ಕರ ಇಚ್ಛಾನುಸಾರ ನಡೆಯಿಸುವ ವಸಾಹತು ಧೋರಣೆಗೆ ಇನ್ನು ಮುಂದೆ

ತುನ್ನಕೆ ದೊರೆಯುವುದು ಕಷ್ಟವೆಂಬುದರ ಜ್ಞಾನವು ಬ್ರಿಟನಿನಂಥ ದೂರದರ್ಶಿ ರಾಷ್ಟ್ರಗಳಿಗೆ ಈಗಾಗಲೇ ಗೋಚರವಾಗಿರುವುದು ಸಂತೋಷದ ವಿಷಯ.

### ಶೋಚನೀಯ ವರ್ಣನೀತಿ

ಬ್ರಿಟನಿನ ದೂರದರ್ಶಿತ್ವಕ್ಕೆ ತೀರ ವಿರುದ್ಧವಾಗಿ ಪ್ರವರ್ತಿಸುವ ದಕ್ಷಿಣ ಆಫ್ರಿಕದ ವರ್ಣನೀತಿಯು ಆಫ್ರಿಕದಲ್ಲಿ ಐರೋಪ್ಯರನ್ನು ಸಂಪೂರ್ಣವಾಗಿ ನಾಶಮಾಡುವ ಕೊಡಲಿಯ ಕಾವು ಎಂಬುದನ್ನು ಡಾ. ಮಾಲನರ ರಾಷ್ಟ್ರೀಯ ಪಕ್ಷವು ಇನ್ನೂ ತಿಳಿದ ಹಾಗಿಲ್ಲ. ಮೂರನೆಯ ಮಹಾಯುದ್ಧವು ಆಗಲಿ ಬಿಡಲಿ, ಆಫ್ರಿಕದಲ್ಲಿ ವರ್ಣನೀತಿಯ ದೆಸೆಯಿಂದಾಗಿ ಒಂದು ಮಹಾಸಮರವು ಸನ್ನಿಹಿತವಾಗಿದೆ. ಕೆನ್ಯಾದ ಮೌ ಮೌ ಚಳವಳಿಯು ಈ ವರ್ಣಸಮರವು (Racial Conflict) ಎಷ್ಟು ಭಯಂಕರವೆಂಬುದನ್ನು ಒಂದು ಚಿಕ್ಕ ಪ್ರಮಾಣದಲ್ಲಿ, ಪ್ರಯೋಗ ಶಾಲೆಯ ಪ್ರಮಾಣದಲ್ಲಿ, ತೋರಿಸಿಕೊಟ್ಟಿದೆ. ಬಿಳಿಯರು ಕರಿಜನರನ್ನು ದೂರವಿಡುತ್ತ ಹೋದಂತೆ ಕರಿಜನರೆಲ್ಲ ಒಂದು ಎಂಬ ಭಾವನೆ ಬೆಳೆಯುತ್ತದೆ. ಬಿಳಿಯರ ಮೇಲೆ ವರ್ಣದ್ವೇಷವು ಕನಲುತ್ತದೆ. ಏಶಿಯದವರೊಡನೆ ಸೇರಿ ಈ ಐಕ್ಯರಂಗವು ಬಲಿಯುತ್ತದೆ. ಆಫ್ರಿಕದ ಕಗ್ಗಾಡಿನಲ್ಲಿಯೂ 'ವೆಲ್ಡ್'ನಲ್ಲಿಯೂ ಸರೋವರ ವಲಯಗಳಲ್ಲಿಯೂ ರಾಷ್ಟ್ರೀಯತೆಯ ದಳ್ಳುರಿ ಹರಡುತ್ತದೆ. ಪರಕೀಯರನ್ನು ಎಂತಾದರೂ ಓಡಿಸಿದರೆ ಸಾಕು, ತನ್ನ ಆತ್ಮೋದ್ಧಾರವಾಯಿತೆಂದು ತಿಳಿಯುವ ಆಫ್ರಿಕನ ನಾಯಕರ ಉದ್ವೇಗಪೂರಿತ ಉಪನ್ಯಾಸಗಳಿಗೂ ವಿದ್ರೋಹಾತ್ಮಕ ಚೇಷ್ಟೆಗಳಿಗೂ ಆಫ್ರಿಕದ ಮೂಕ ಜನತೆ ಓಗೊಡುತ್ತದೆ. ಐರೋಪ್ಯರು ತಮ್ಮ ವಸಾಹತು ಧೋರಣೆಯನ್ನು ಬೇರೆ ಹೆಸರಿಟ್ಟು ಕರೆದರೂ ಆಫ್ರಿಕನರಿಗೆ ಉಚ್ಚಾಧಿಕಾರವನ್ನು ಕೊಡುವ ಸಂಕಲ್ಪವನ್ನೇ ವ್ಯಕ್ತಗೊಳಿಸಿದರೂ ದಕ್ಷಿಣ ಆಫ್ರಿಕದ ವರ್ಣನೀತಿಯ ಸ್ಪಷ್ಟ ಉದಾಹರಣೆಯನ್ನು ಕಣ್ಣಾರೆ ಕಂಡ ಆಫ್ರಿಕದ ಜನತೆ ಐರೋಪ್ಯ ನಾಯಕತ್ವವನ್ನು ಅಲ್ಲಗಳೆಯುತ್ತದೆ. ದಕ್ಷಿಣ ಆಫ್ರಿಕದ ಅನುಭವಿ ರಾಷ್ಟ್ರಪುರುಷನಾದ ಜೇನ್‌ಸ್ಮಟ್ಸ ಅವರು ತಾವು ಸಾಯುವದಕ್ಕೆ ಕೆಲವು ದಿನಗಳ ಮೊದಲು ದಕ್ಷಿಣ ಆಫ್ರಿಕದ ಐರೋಪ್ಯರ ವರ್ಣನೀತಿಯು ಸ್ವನಾಶಕ್ಕೆ ಹೇತುವಾಗದೆ ಇರಲಾರದೆಂದು ಭಯಸೂಚನೆಯನ್ನು ಮಾಡಿದ್ದುಂಟು. ಅದನ್ನು ಪ್ರಮಾಣೀಕರಿಸಲು ಕೆನ್ಯಾದ ಹಿಂಸಾತ್ಮಕ ಮೌ ಮೌ ಪ್ರತಿಕ್ರಿಯೆ ಈಗ ನಡೆದಿದೆ. ಯೂನಿಯನ್ ಸರಕಾರವು ಬೇಗನೇ ತನ್ನ ತಪ್ಪನ್ನು ತಿದ್ದಿಕೊಳ್ಳದೆ ಇದ್ದರೆ ಸ್ಮಟ್ಸರ ಕೊನೆ ನುಡಿಯು ಸಂಪೂರ್ಣವಾಗಿ ಚರಿತಾರ್ಥವಾಗಲು ಹೆಚ್ಚು ಕಾಲ ಹಿಡಿಯದೆಂದು ಕಾಣುತ್ತದೆ.

### ಉಳಿಯುವ ದಾರಿ

ಬಿಳಿಯರು ಆಫ್ರಿಕದಲ್ಲಿ ಉಳಿಯುವ ದಾರಿ ಯಾವದು? ಎಂಬುದಕ್ಕೆ ತಜ್ಞರು ಎರಡು ಬಗೆಯಾಗಿ ಉತ್ತರವನ್ನು ಹೇಳುತ್ತಾರೆ. ವರ್ಣಭಾವನೆಯು ಸಂಪೂರ್ಣವಾಗಿ ಮಾಯವಾದಲ್ಲಿ ಬಿಳಿಯರು ಕರಿಯರು ಎಂಬ ಭೇದವೇ ಇಲ್ಲದಂತಾಗುವುದು ಒಂದು ಮಾರ್ಗವೆಂಬುದೇನೋ ನಿಜ. ಆದರೆ ಹೃದಯಕ್ಕೆ ಅಂಟಿಕೊಂಡ ಈ ನಂಜನ್ನು ಇಷ್ಟು ಸುಲಭವಾಗಿ ದೂರಮಾಡುವಂತಿಲ್ಲವಾದುದರಿಂದ ಈ ಮಾರ್ಗವು ಕೇವಲ ಆದರ್ಶದ ಔನ್ನತ್ಯದಲ್ಲೇ ನಿಂತುಬಿಡುವುದು. ಎರಡನೆಯ ಮಾರ್ಗವನ್ನು ಸೂಚಿಸುವ ತಜ್ಞರು ಆಫ್ರಿಕವನ್ನು ಬಿಳಿಯರ ಭಾಗ—ಕರಿಯರ ಭಾಗ ಎಂಬುದಾಗಿ ಒಡೆಯುವ ನಿರ್ಧಾರ ಮಾಡಿದ್ದಾರೆ. ದಕ್ಷಿಣದಲ್ಲಿರುವ ಯೂನಿಯನ್ ಆಫ್ರಿಕ ಮತ್ತು ರ್‍ಹೊಡೇಶಿಯದ ಸಮಶೀತೋಷ್ಣ ಹವೆಯೂ ಚಿನ್ನ ವಜ್ರದ ಗಣಿಗಳೂ ಇರುವ ಮುಂದುವರಿದ ಪ್ರದೇಶದಲ್ಲಿ ಐರೋಪ್ಯರು ನೆಲಸಬೇಕು, ಉಳಿದ ಭಾಗದಲ್ಲಿ ಕರಿಜನರಿಗೆ ಸರ್ವಸ್ವಾತಂತ್ರ್ಯವನ್ನು ಕೊಟ್ಟು ಬಿಡಬೇಕು. ಇದು ಈ ತಜ್ಞರ ಸೂಚನೆ.





ಆದರೆ ಈ ಸೂಚನೆಯನ್ನುಮನ್ನಿಸುವುದು ಸುಲಭವಲ್ಲ. ಬಿಳಿಯರು ಹೊಂಚು ಹಾಕಿರುವ ಪ್ರದೇಶಗಳು ಈಗಾಗಲೇ ಸಾಂಪತ್ತಿಕ ಸ್ಥಿತಿಯಲ್ಲಿ ಮುಂದಾಗಿರುವುದರಿಂದ ಕರಿಜನರಿಗೆ ಈ ವಿಭಜನೆಯು ಸಮಾಧಾನವನ್ನುಂಟು ಮಾಡದು. ಹಾಗೆ ಒಂದು ವೇಳೆ ಅವರು ವಿಭಜನೆಗೆ ಒಪ್ಪಿದರೂ ಬಿಳಿಯರ ರಾಜ್ಯದಲ್ಲಿ ಕರಿಜನರಿಲ್ಲದೆ ಉದ್ಯಮಗಳು, ಕೃಷಿ ಮುಂತಾದ ಕಾಯಕಷ್ಟದ ಕೆಲಸಗಳು ಹೇಗೆ ನಡೆಯಬೇಕು ? ಕರಿಜನರಿಗೆ ರಾಜ್ಯದಲ್ಲಿ ಯಾವುದಾದರೂ ಒಂದು ರೂಪದಲ್ಲಿ ಪ್ರವೇಶವುಂಟೆಂಬುದು ಖಚಿತವಾದರೆ ಬಿಳಿ-ಕರಿ ಸಮಸ್ಯೆಯು ಎಲ್ಲಿ ಪರಿಹಾರವಾದಂತಾಯಿತು ? ಆದುದರಿಂದ ಇವೆರಡೂ ಪರಿಹಾರ ಮಾರ್ಗಗಳಲ್ಲ. ಸಾಧ್ಯವಾದಷ್ಟನ್ನು ಉಳಿಸಿಕೊಳ್ಳುವ ಮತ್ತು ಬೇಳೆ ಬೇಯಿಸಿಕೊಳ್ಳುವ ಸಂದರ್ಭಸಾಧಕ ಉಪಾಯಗಳು. ಆಫ್ರಿಕದ ಸಮಸ್ಯೆಗೆ ಇರುವ ಪರಿಹಾರವು ಒಂದೇ. ಬಿಳಿಯರು ಉಳಿಯಬೇಕಾದರೆ ಮಾಡಬೇಕಾದ ಕಾರ್ಯವೂ ಒಂದೇ. ಆಫ್ರಿಕದಲ್ಲಿ ತಾವು ಮಾತ್ರ ಮಾಡಲರ್ಹರೆಂಬ ಹಟವನ್ನು ಬಿಟ್ಟುಕೊಡುವುದು. ನಿಗ್ರೋ ಜನರ ಜತೆಗೆ ಸಮಾನತೆಯಿಂದ ವರ್ತಿಸುವುದು ಮಾತ್ರವಲ್ಲದೆ ಬಾಳಲೂ ಕಲಿಯುವುದು. ಯಾರಿಗೆ ಜತೆಗೂಡಿ ಬಾಳಲು ಇಷ್ಟವಿಲ್ಲವೋ ಅಂಥವರು ಆಫ್ರಿಕಾ ಖಂಡವನ್ನು ಬಿಟ್ಟು ಸ್ವದೇಶಕ್ಕೆ ಮರಳಿ ಈ ಪದದಲಿತ ಭೂಖಂಡದ ಶಾಂತಿಗೆ ನೆರವಾಗುವುದು. ಬೈಬಲ್ಲನ್ನು ಓದಿದವರು ಈ ವಿಷಯದಲ್ಲಿ ಮೋಸಸ (Moses) ನಿಂದ ಪಾಠ ಕಲಿಯಬಹುದು. ಮೋಸಸ್ ತನ್ನ ಜನರನ್ನು ರಕ್ಷಿಸುವುದಕ್ಕೋಸ್ಕರ ಅವರನ್ನ ಇಜಿಪ್ತದಿಂದ ಕರೆದೊಯ್ದ ಹಾಗೆ ಐರೋಪ್ಯರ ನಾಯಕರು ತಮ್ಮ ಜನರನ್ನು ಸ್ವಕಲ್ಯಾಣಕ್ಕೋಸ್ಕರ ತಮ್ಮಲ್ಲಿಗೆ ಕರೆಸಿಕೊಳ್ಳಬೇಕು. ಯಾರಿಗೆ ಈ ಹಿಂದುಳಿದ ಜನಾಂಗಕ್ಕೆ ನೆರವಾಗುವ ಇಚ್ಛೆಯಿದೆಯೋ ಅಂಥವರು ಕೃಷಿ, ಉದ್ಯಮ, ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಆಫ್ರಿಕದವರನ್ನು ತರಬೇತಿಮಾಡಲು ಪರೋಪಕಾರ ಬುದ್ಧಿಯಿಂದ ಪ್ರವೃತ್ತರಾಗಬೇಕು. ಆಫ್ರಿಕದ ಜನ ಎಲ್ಲರಂತೆ ದೇವರ ಮಕ್ಕಳು, ದುಡಿಯುವ ಮಕ್ಕಳು ಎಂಬ ಸಹೋದರಭಾವನೆಯು ಐರೋಪ್ಯದಲ್ಲಿ ಉತ್ಪನ್ನವಾಗಬೇಕು. ಅಂದರೆ ಆಫ್ರಿಕರಲ್ಲಿ ಶಾಂತಿ ನೆಲಸೀತು. ಇಲ್ಲವಾದರೆ ಇಲ್ಲಿನ ರಾಜಕೀಯ ವಿಸ್ಫೋಟದಿಂದಾಗಿ ಇಡಿಯ ಜಗತ್ತು ತಲ್ಲಣಗೊಳ್ಳುವ ಕಾಲ ಬಂದೀತು.

---

## ಮಹಾ ಬಾಧೆ

"ಹಲವು ಬಾಧೆ ದೈಹಿಕ  
ಕೆಲವು ಮಾನಸಿಕ  
ಹಲ್ಲು ನೋವು, ಬೀತ ಮುಖ  
ಬಾಧೆ ದೈಹಿಕ  
ಮಾನಸಿಕ !"

—ರಾಮಕೃಷ್ಣ

TELEGRAM "STEELSAFE".

ESTD. 1918

*Siddheshwar & Co*

HUBLI (REGD)

PHONE No. 29













S.K.D.

# ಸಿದ್ಧೇಶ್ವರ

## ಮತ್ತು ಕಂಪನಿ, ಹುಬ್ಬಳ್ಳಿ.

SADASHIV.

ನಮ್ಮ ಗ್ರಾಹಕರಿಗೂ ಹಿತಚಿಂತಕರಿಗೂ

**ದೀಪಾವಳಿಯು ಸುಖಸಮೃದ್ಧಿಯನ್ನೀಯಲಿ!**

Regd. No. B. 3148

Licence No. 3
Licenced to Post without Prepayment

Karmaveer 27-10-54



ಈ ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಪ್ರೆಸ್ಸಿನಲ್ಲಿ "ಲೋಕಶಿಕ್ಷಣ ಟ್ರಸ್ಟ"ನ ಪರವಾಗಿ ಹ. ರಾ. ಮೊಹರೆಯವರು ಮುದ್ರಿಸಿ ಪ್ರಕಟಿಸಿದರು.